

# ವಿಚಾರಚಂದ್ರೋದಯ ಸಾರಸಂಗ್ರಹ.

ಗ್ರಂಥಕರ್ತ,

ಶ್ರೀ ಬಸವಾನಂದ ಸ್ವಾಮಿಗಳು.

1956

# ಮುನ್ನುಡಿ

ಅಧರ್ಮವು ತಲೆಯೆತ್ತಿ ಧರ್ಮಕ್ಕೆ ಗ್ಲಾನಿಯುಂಟಾದಾಗ ಧರ್ಮ ಸಂಸ್ಥಾಪನೆಗಾಗಿ ಸಾಧು ರೂಪದಿಂದ ನಾನೇ ಅವತರಿಸುತ್ತೇನೆಂದು ಶ್ರೀಗೀತಾ ಸ್ವಾಮಿಯು ಹೇಳಿರುತ್ತಾನೆ. ಆ ಗೀತಾ ಸ್ವಾಮಿಯು (ಶ್ರೀಕೃಷ್ಣನು) ಹೇಳಿದಂತೆ ಆ ಪರಮಾತ್ಮನೇ ಸಾಧುಗಳ ರೂಪದಿಂದ ಧರೆಗವತರಿಸಿ ಜಗಜ್ಜೀವಿಗಳ ಕಲ್ಯಾಣಕ್ಕೆ ತಕ್ಕ ಧರ್ಮವನ್ನು ಬೋಧಿಸಲು ಉದ್ದೇಶಿಸಿ, ವೇದಾಗಮೋಪನಿಷತ್ ಮುಂತಾದ ವಾಙ್ಮಯ ಪ್ರಪಂಚವನ್ನೇ ಸೃಷ್ಟಿ ಮಾಡಿರುತ್ತಾನೆ. ಆ ವಾಙ್ಮಯ ಪ್ರಪಂಚವು ಸಂಸ್ಕೃತ ಭಾಷೆಯಲ್ಲಿ ಶೋಭಿಸುತ್ತದೆ. ಸಂಸ್ಕೃತ ಭಾಷಾ ಪರಿಚಯವು ಸರ್ವರಿಗೆ (ಜನ ಸಾಮಾನ್ಯರಿಗೆ) ಇಲ್ಲದಿರುವುದರಿಂದ ಕೆಲವು ಜನ ಮಹನೀಯರು ದೇಶ ಭಾಷೆಯಲ್ಲಿಯೇ ಆ ವೇದಾಗಮೋಪನಿಷತ್ ಸಾರವನ್ನು ಹೀರಿಕೊಂಡು ಬರೆದಿರುತ್ತಾರೆ. ಹಾಗೆ ಬರೆದಿರುವ ಗ್ರಂಥಗಳು ಸಹ ಪ್ರಮಾಣ ಗ್ರಂಥಗಳೆನಿಸಿಕೊಂಡಿರುತ್ತವೆ.

ಆ ಗ್ರಂಥಗಳಲ್ಲಿ ಪ್ರಮೇಯ ಗ್ರಂಥಗಳು, ಪ್ರಮಾಣ ಗ್ರಂಥಗಳು ಲಾಕ್ಷಣಿಕ ಗ್ರಂಥಗಳೆಂದು ಮೂರು ವಿಧವುಂಟು. ಕೇವಲ ಸ್ವಾನುಭವದಿಂದ ಜ್ಞಾನಸ್ವರೂಪವನ್ನು ವರ್ಣಿಸಿ ಮೋಕ್ಷ ವಿಷಯವನ್ನು ತಿಳಿಸುವ ಗ್ರಂಥಗಳಿಗೆ ಪ್ರಮೇಯ ಗ್ರಂಥಗಳೆನ್ನುತ್ತಾರೆ. ಶ್ರುತಿಗಳನ್ನು ಉದಾಹರಿಸಿ ಬರೆದಿರುವ ಗ್ರಂಥಗಳಿಗೆ ಪ್ರಮಾಣ ಗ್ರಂಥಗಳೆನ್ನುತ್ತಾರೆ. ಪ್ರತಿಯೊಂದು ಪದಕ್ಕೂ ವಾಕ್ಯಕ್ಕೂ ಲಕ್ಷಣವನ್ನು ಹೇಳಿ ತರ್ಕಿಸಿ ಬರೆದಿರುವ ಗ್ರಂಥಗಳಿಗೆ ಲಾಕ್ಷಣಿಕ ಗ್ರಂಥಗಳೆನ್ನುತ್ತಾರೆ. ಪಂಚದಶಿ, ವಿಚಾರಸಾಗರ, ವಿಚಾರ ಚಂದ್ರೋದಯ, ತತ್ತ್ವಾನುಸಂಧಾನ, ವೃತ್ತಿ ಪ್ರಭಾಕರ, ಅದ್ವೈತಕೌಸ್ತುಭ ಈ ಮುಂತಾದ ಗ್ರಂಥಗಳು ಲಾಕ್ಷಣಿಕ ಗ್ರಂಥಗಳಾಗಿರುತ್ತವೆ. ಆದರೆ ಪ್ರಮೇಯ ಪ್ರಮಾಣ ಲಾಕ್ಷಣಿಕ ವೆಂಬ ಮೂರು ಪ್ರಕಾರ ಗ್ರಂಥಗಳಲ್ಲಿ ಮೋಕ್ಷ ವಿಷಯ ಒಂದನ್ನೇ ಗುರಿಯಾಗಿಟ್ಟುಕೊಂಡು ಪ್ರತಿಪಾದನೆ ಮಾಡಿರುತ್ತವೆಂದು ಓದುಗರು ಗ್ರಹಿಸಬೇಕು. ವಿಚಾರ ಚಂದ್ರೋದಯವು ಲಾಕ್ಷಿಣಕ ಗ್ರಂಥಗಳಲ್ಲಿ ಸೇರಿದ್ದೆಂದು ಮೊದಲೇ ಹೇಳಿರುತ್ತೇವೆ. ಆ ವಿಚಾರ ಚಂದ್ರೋದಯ ಗ್ರಂಥವನ್ನು ಹಿಂದೀ ಭಾಷೆಯಲ್ಲಿ ಶ್ರೀ ಪಂಡಿತ ಪೀತಾಂಬರಜೀಯವರು ಬರೆದಿರುತ್ತಾರೆ. ಅದನ್ನು ಹಿಂದೀ ಭಾಷೆ ಪರಿಚಯವಿಲ್ಲದವರಿಗಾಗಿ (ಕನ್ನಡಿಗರಿಗಾಗಿ) ಕೆಲವು ಜನ ಮಹನೀಯರು ಕನ್ನಡಕ್ಕೆ ಪರಿವರ್ತನೆ ಮಾಡಿ ಪ್ರಕಾಶಕ್ಕೆ ತಂದಿರುತ್ತಾರೆ.

ಆದರೂ ಆ ಕನ್ನಡ ಗ್ರಂಥದಲ್ಲಿನ ವಾಕ್ಯಗಳು ಉಕ್ಕಿನ ಕಡಲೆಯಂತೆ ಕಠಿಣವಾಗಿರುವುದರಿಂದ ಬಾಲ ಜಿಜ್ಞಾಸುಗಳಿಗೆ ಸರಿಯಾಗಿ ಮನವರಿಕೆಯಾಗುವುದಿಲ್ಲ. ಆದರಿಂದ ನಾವು ಬಾಲ ಜಿಜ್ಞಾಸುಗಳಿಗಾಗಿ ಸುಲಭವಾಗಿ ಬರೆದು ಮೂಲ ಗ್ರಂಥದಲ್ಲಿರುವ ವಿಷಯವನ್ನು ಕೈಬಿಡದೆ ಅದಕ್ಕೆ ಅನುಗುಣ್ಯವಾಗಿ ಅಲ್ಲಲ್ಲಿ ಕೆಲವು ಪ್ರಶ್ನೋತ್ತರಗಳನ್ನು ಹೆಚ್ಚಿಸಿ ಸರ್ವರಿಗೆ ಸುಗಮವಾಗಿ ತಿಳಿಯುವಂತೆ ನೂತನವಾಗಿ ಕೆಲವು ಶ್ರುತಿ ಯುಕ್ತ್ಯನುಭವ ವಾಕ್ಯಗಳನ್ನು ಸೇರಿಸಿ ಬರೆದಿರುತ್ತೇವೆ. ಅಲ್ಲದೆ ಸುಖಾಶ್ರಯ ಪ್ರಬೋಧಾ ಪಾಠಕರಿಗೆ ಕೊನೆಗೆ ಅದೊಂದು ಪ್ರತ್ಯೇಕ ಗ್ರಂಥನಾಗಿ ಮಾಡಿಕೊಳ್ಳುವಂತೆ ಪೇಜಿಗಳ ಸಂಖ್ಯೆಯನ್ನು ಕ್ರಮವಾಗಿ ಹಾಕಿರುತ್ತೇವೆ. ಚಂದಾದಾರರು ಸಂಚಿಕೆಗಳನ್ನು ಕಳೆದು ಕೊಳ್ಳಬಾರದು. ಏಕಂದರೆ ಒಂದೊಂದು ಸಂಚಿಕೆಗಳಲ್ಲಿ ಕ್ರಮವಾಗಿ ಸಮಗ್ರ ಗ್ರಂಥವನ್ನು ಪ್ರಕಟಿಸುತ್ತೇವೆ. ಕೊನೆಗೆ ಆ ಸಂಚಿಕೆಗಳಲ್ಲಿರುವ ಪೇಜಿಗಳನ್ನು ಕೂಡಿಸಿ ಬೈಂಡಿಂಗ್ ಮಾಡಿಸಿದರೆ ಅದೊಂದು ಗ್ರಂಥವೇ ಆಗುತ್ತದೆ. ಆದ್ದರಿಂದ ಸಂಚಿಕೆಗಳನ್ನು ಕಾದಿರಿಸಿಕೊಳ್ಳಿರಿ. ನಾವು ಈ ಗ್ರಂಥಕ್ಕೆ "ವಿಚಾರ ಚಂದ್ರೋದಯ ಸಾರ ಸಂಗ್ರಹ"ವೆಂದು ಅಭಿದಾನವಿಟ್ಟಿರುತ್ತೇವೆ. ಸೂಜ್ಞರು ಹಂಸಕ್ಷೀರ ನ್ಯಾಯದಂತೆ, ಸಾರಗ್ರಾಹಿಗಳಾಗುತ್ತಾರೆಂದು ವಿಶ್ವಾಸಿಸುತ್ತೇವೆ.

ಸಾಧುಜನ ವಿಧೇಯ
ಗ್ರಂಥಕರ್ತ

ಶ್ಲೋ ॥ ತಾವದ್ಗರ್ಜಂತಿ ಶಾಸ್ತ್ರಾಣಿ, ಜಂಬುಕಾ ವಿಪಿನೇ ಯಥಾ ।
ನಗರ್ಜತಿ ಮಹಾ ಶಕ್ತಿ ರ್ಯಾವದ್ವೇದಾಂತ ಕೇಸರಿ ॥

ಭಾ ॥ ಭ್ರಾಂತಿಮಯ ಭವವೆಂಬ ವಿಪಿನದಿ। ಸಂತತ ಮಹಾ ಶಕ್ತಿಯುತ ವೇ ।
ದಾಂತ ಸಿಂಹನ ಗರ್ಜನೆಯದೆಲ್ಲಿಲ್ಲೊ ತಾವಲ್ಲಿ ॥
ತಾಂತರಿಕ ಬಹು ಶಾಸ್ತ್ರಗಳೆನಿಪ । ಚಿಂತೆಗೊಳಿಸುವ ಜಂಬುಕಂಗಳು ।
ಶಾಂತಿಯಿಲ್ಲದೆ ಕೂಗುವವು ಮನಬಂದ ತೆರನಂತೆ ॥





# ವಿಚಾರಚಂದ್ರೋದಯ ಸಾರಸಂಗ್ರಹ.

ಕಂದ ಸುವಿಚಾರವೆ ಸದ್ಗತಿಗಂ ।
ತವೆಮಾರ್ಗವುಬೇರೆ ಮಾರ್ಗವಿಲ್ಲೆಂದ ನಿಶಂ॥
ವಿವರಿಪ ಶ್ರುತಿ ಶಿರದರ್ಥವ ।
ನವನಿಯಮಾನವರು ನಂಬಿ ಪಡೆವುದು ಸುಖಮಂ ॥

ಪ್ರಶ್ನೆ–ಉಪೋದ್ಘಾತವೆಂದರೇನು? ಕೆಲವು ಗ್ರಂಥಗಳಲ್ಲಿ ಪ್ರಥಮ ಉಪೋದ್ಘಾತವೆಂದು ಬರೆದಿರುವರಲ್ಲಾ! ಅದರ ಲಕ್ಷಣವೇನು.

ಉತ್ತರ– ಉಪೋದ್ಘಾತ ಲಕ್ಷಣ, ಪ್ರತಿಪಾದನೆ ಮಾಡಲಿಕ್ಕೆ ಯೋಗ್ಯವಾದ ವಿಷಯವನ್ನು ಮನಸ್ಸಿನಲ್ಲಿಟ್ಟುಕೊಂಡು ಅದರ ಅರ್ಥವನ್ನು ಅನ್ಯ ಪ್ರಕಾರದಿಂದ ತಿಳಿಸಿಕೊಡುವುದೇ ಉಪೋದ್ಘಾತ. ಹೇಗೆಂದರೆ– ಒಬ್ಬನು ಬೇರೆಯವರಿಂದ ಬಂದು ವಸ್ತುವನ್ನು ಕೇಳುವುದಕ್ಕೆ ಹೋದಾಗ, ತನ್ನ ಇಚ್ಛಿತ ವಸ್ತುವನ್ನು ಮನಸ್ಸಿನಲ್ಲಿಟ್ಟುಕೊಂಡು ಅನ್ಯ ವಿಷಯಗಳನ್ನು ಮಾತನಾಡುತ್ತಾ ಅಂತ್ಯದಲ್ಲಿ ತನ್ನ ಇಚ್ಛಿತ ವಸ್ತುವನ್ನು ಕೇಳುವುದೇ ಉಪೋದ್ಘಾತ ವೆಂದು ಹೇಳುವರು. ಇದರಂತೆ ಸದ್ಗುರುಗಳು, ಜಿಜ್ಞಾಸುಗಳಿಗೆ ಮೋಕ್ಷರೂಪ ವಿಷಯವನ್ನು ತಿಳಿಸಿಕೊಡುವ ಉದ್ದೇಶವನ್ನು ಮನಸ್ಸಿನಲ್ಲಿಟ್ಟುಕೊಂಡು ಮೊದಲು, ಕರ್ಮ–ಉಪಾಸನಗಳನ್ನು ಹೇಳುತ್ತಾ ಅಂತ್ಯದಲ್ಲಿ ಜ್ಞಾನರೂಪ ಪ್ರಮೇಯವನ್ನು ಯಥಾರ್ಥವಾಗಿ ಶ್ರುತಿಗಳಿಗನುಸಾರವಾಗಿ ತಿಳಿಸುವುದೇ ಉಪೋದ್ಘಾತ.

ಪ್ರ॥ ಪುರುಷಾರ್ಥವೆಂದರೇನು? ಮತ್ತು ಎಷ್ಟು ಪ್ರಕಾರವಾಗಿರುವುದು?

ಉ॥ ಪುರುಷನೆಂದರೆ ಜೀವನು. ಹೇಗೆಂದರೆ– ಶರೀರವೆಂಬ ಪುರದಲ್ಲಿ ವಾಸ ಮಾಡುವವನೇ ಪುರುಷನು. ಈ ಪುರುಷನಿಗೆ ಜೀವನೆಂದು ಹೆಸರು. ಈ ಜೀವನು ಸಂಪಾದನೆ ಮಾಡುವುದಕ್ಕೆ ಯೋಗ್ಯವಾದ ವಿಷಯವೇ ಪುರುಷಾರ್ಥ. ಪ್ರತಿಯೊಬ್ಬ ಮಾನವನು ಇಂದ್ರಿಯಗಳಿಂದ ವಿಷಯ ಭೋಗವನ್ನುಂಟು ಮಾಡಿಕೊ



# ವಿಚಾರ ಚಂದ್ರೋದಯ ಸಾರಸಂಗ್ರಹ.

## ತ್ರಯೋದಶಕಲಾ ಪ್ರಾರಂಭವು.

### (ಸಪ್ತಭೂಮಿಕಾ ವರ್ಣನೆ.)

ಕಂದ ;- ಚಿರಸುಖದಿಚ್ಛೆಯಿ ನೊದಲಾ ।
ಗಿರುತಿಹ ಸುಜ್ಞಾನ ಭೂಮಿಕಂಗಳನೇಳಂ ॥
ಪರಿಭಾವಿಸುತ ಮುಮುಕ್ಷುಗ ।
ಳರಿವಂದದಿ ವಿವರಿಸುವೆನು ಶ್ರುತಿಸಮ್ಮತದಿಂ ॥

ಪ್ರ :— ಬ್ರಹ್ಮಜ್ಞಾನವು ಕೆಲವರಿಗೆ ಶ್ರವಣ ಮಾತ್ರದಿಂದಲೇ ದೃಢ ಅಪರೋಕ್ಷವಾಗುವದು. ಕೆಲವರಿಗೆ ಶ್ರವಣ ಮಾಡಿದರೂ ಸಾಧ್ಯವಾಗುವದಿಲ್ಲ. ಒಂದುಪಕ್ಷ ಸಾಧ್ಯ ವಾದರೂ ಅದೃಢವಾಗುವದು. ಇದಕ್ಕೆ ಕಾರಣವೇನು ?

ಉ :— ಕೃತೋಪಾಸಕರಿಗೆ ಕೇವಲ ಶ್ರವಣದಿಂದಲೇ ಬ್ರಹ್ಮಜ್ಞಾನ ವಾಗುವದು. ಅಕೃತೋಪಾಸಕರಿಗಾಗುವುದಿಲ್ಲ.

ಪ್ರ :— ಕೃತೋಪಾಸಕರು, ಮತ್ತು ಅಕೃತೋ ಪಾಸಕರೆಂದರೇನು ?

ಉ :— ಕೃತೋ ಪಾಸಕರೆಂದರೆ ಜ್ಞಾನಾತ್ಪೂರ್ವದಲ್ಲಿ, ಮತ್ತು ಹಿಂದಿನ ಜನ್ಮದಲ್ಲಿ ಯಾವನು ನಿಷ್ಕಾಮ ಕರ್ಮೋಪಾಸನೆಗಳನ್ನು ಮಾಡಿರುವನೋ ಅವನಿಗೆ ಕೃತೋಪಾಸಕನೆನ್ನುವರು- ಇವನಿಗೆ ಶುದ್ಧಾಂತಃಕರಣ ವಿರುವದರಿಂದ ಕೇವಲ ಶ್ರವಣ ಮಾತ್ರದಿಂದಲೇ ದೃಢ ಅಪರೋಕ್ಷ ಬ್ರಹ್ಮ ಜ್ಞಾನವಾಗುತ್ತದೆ.

ಅಕೃತೋ ಪಾಸಕನೆಂದರೆ ಕ್ರಮವಾಗಿ ನಿಷ್ಕಾಮ ಕರ್ಮೋ ಪಾಸನೆಗಳನ್ನು ಮಾಡಿರುವುದಿಲ್ಲ ಶುದ್ಧಾಂತಃ ಕರಣವಾಗದೆ ಮೋಕ್ಷೇಚ್ಛೆಯಿಂದ ಬ್ರಹ್ಮ ಶ್ರವಣ ಮಾಡುವವನು ಅಕೃತೋ ಪಾಸಕ ನೆನಿಸುವನು. ಇಂಥಾ ಅಕೃತೋ ಪಾಸಕರಿಗಾಗಿಯೇ ಸಪ್ತಜ್ಞಾನ ಭೂಮಿಕೆಗಳ ಅಭ್ಯಾಸವನ್ನು ಶಾಸ್ತ್ರದಲ್ಲಿ ಹೇಳಿರುತ್ತದೆ.

ಪ್ರ :— ಆ ಸಪ್ತಜ್ಞಾನ ಭೂಮಿಕೆಗಳುಯಾವು ?

ಉ :— ೧ ಸುಭೇಚ್ಛಾ, ೨ ಸುವಿಚಾರಣಾ, ೩ ತನುಮಾನಸ, ೪ ಸತ್ವಾ

ಪತ್ತಿ, ೫ ಅಸಂಸಕ್ತಿ, ೬ ಪದಾರ್ಥಾಭಾವಿನಿ, ೭ ತುರ್ಯಗಾಮಿ ಎಂಬಿವೇ ಸಪ್ತಜ್ಞಾನ ಭೂಮಿಕೆಗಳು, ಇವಕ್ಕೆ ೧ ಸುಖೇಚ್ಛಾ, ೨ ಆತ್ಮ ವಿಚಾರ, ೩ ನಿಸ್ಸಂಗ, ೪ ವಾಸನಾಕ್ಷಯ ೫ ಆನಂದಿನಿ ೬ ತುರ್ಯ, ೭ ತುರ್ಯಾತೀತವೆಂದು ಪರ್ಯಾಯ ನಾಮಗಳು. ಭೂಮಿಕೆಗಳೆಂದರೆ ಹತ್ತುವ ಮೆಟ್ಟಲು ಗಳಿದ್ದಂತೆ. ಅಥವಾ ಅವಸ್ಥಾ ವಿಶೇಷವು.

ಪ್ರ :— ಸುಖೇಚ್ಛಾಅಂದರೇನು ?

ಉ :— ತಾಪತ್ರಯಗಳೆಂಬ ದುಃಖಾಗ್ನಿಯಲ್ಲಿ ಬೆಂದು, ಪ್ರಪಂಚದಲ್ಲಿ ನಿತ್ಯ ಸುಖವಿರುವುದಿಲ್ಲಾದ್ದರಿಂದ ನಿತ್ಯ ಸುಖಸ್ವರೂಪನಾದ ಪರಮಾತ್ಮನನ್ನು ಕಾಣಬೇಕೆಂಬುವ ತೀವ್ರ ಇಚ್ಛೆಯೇ ಸುಖೇಚ್ಛೆಯು.

ಪ್ರ :— ಸುವಿಚಾರ ವೆಂದರೇನು ?

ಉ :— ಸುವಿಚಾರವೆಂದರೆ ಪ್ರಥಮದ ಭೂಮಿಕೆಯಾದ ಸುಖದ ತೀವ್ರ ಇಚ್ಛೆಯಿಂದ ಸದ್ಗುರು ಪಾದವನ್ನು ಆಶ್ರಯಿಸಿ, ಉಪನಿಷತ್ತುಗಳಲ್ಲಿ ವರ್ಣಿಸಿದ ತನ್ನ ಮತ್ತು ಬ್ರಹ್ಮಸ್ವರೂಪದ ಯಥಾರ್ಥವನ್ನು ವಿಚಾರಮಾಡುವುದು. ಇದೇ ಸುವಿಚಾರಣವು, ಇದಕ್ಕೆ ಶ್ರವಣವೆಂದು ನಾಮವು. ಶ್ರವಣದ ಲಕ್ಷಣವೆಂದರೆ " ಶ್ರುತಿಷಡ್ಲಿಂಗಗಳಿಂದ ವೇದಾಂತ ವಾಕ್ಯದ ತಾತ್ಪರ್ಯದ ನಿಶ್ಚಯವೇ " ಶ್ರವಣವು. ಆ ಶ್ರುತಿಷಡ್ಲಿಂಗಗಳು ಯಾವೆಂದರೆ 1 ಉಪಕ್ರಮೋಪಸಂಹಾರ, 2 ಅಭ್ಯಾಸ, 3 ಅಪೂರ್ವತ, 4 ಫಲ, 5 ಅರ್ಥವಾದ, 6 ಉಪಪತ್ತಿ ಇದಕ್ಕೆ ಶ್ಲೋ॥ " **ಉಪಕ್ರಮೋಪಸಂಹಾರಾಽಭ್ಯಾಸೋಽಪೂರ್ವತಾಫಲಂ ಅರ್ಥವಾದೋಪಪತ್ತೀಚಲಿಂಗ ತಾತ್ಪರ್ಯನಿರ್ಣಯೇ** "

ಧೂಮದಿಂದ ಅಗ್ನಿಯನ್ನು ನಿಶ್ಚಯಿಸುವಂತೆ ಉಪನಿಷತ್ತುಗಳ ವಾಕ್ಯಗಳಿಗೆ ಉಪಕ್ರಮೋಪ ಸಂಹಾರಾದಿಕವು ಅದ್ವಿತೀಯ ಬ್ರಹ್ಮದಲ್ಲಿ ತಾತ್ಪರ್ಯಉಳ್ಳವುಗಳಾಗಿರುವುವು. ಹೇಗೆಂದರೆ

1) ಉಪಕ್ರಮೋಪಸಂಹಾರವೆಂಬ ಪ್ರಥಮ ಲಿಂಗದವಿವರ ಛಾಂದೋಗ್ಯೋಪನಿಷತ್ತಿನ ಷಷ್ಠಾಧ್ಯಾಯದಲ್ಲಿ ಉಪಕ್ರಮವೆಂದರೆ ಆರಂಭದಲ್ಲಿ ಅದ್ವಿತೀಯ ಬ್ರಹ್ಮದ ಪ್ರತಿಪಾದನೆಯಿರುವುದು ಮತ್ತು ಉಪಸಂಹಾರವೆಂದರೆ ಸಮಾಪ್ತಿಯಲ್ಲಿ ಅದೇ ಬ್ರಹ್ಮದ ಪ್ರತಿಪಾದನೆಯಿಂದ ಮುಕ್ತಾಯವಾಗಿರುತ್ತದೆ. ಯಾವ ವಸ್ತುವಿನ ಪ್ರತಿಪಾದನೆಯು ಆರಂಭದಲ್ಲಿಯೂ, ಸಮಾಪ್ತಿಯಲ್ಲಿಯೂ ಇರುವದೋ ಅದು ಉಪಕ್ರಮೋಪಸಂಹಾರಕ್ಕೆ ಏಕ ರೂಪತಾ ಎನಿಸುವುದು. ಇದು ಪ್ರಥಮಲಿಂಗ " **ಪ್ರಕರಣ ಪ್ರತಿಪಾದ್ಯ ಸಾದ್ವಿತೀಯ ವಸ್ತುನ ಆದ್ಯಂತಯೋಃ ಪ್ರತಿಪಾದನಂ ಉಪಸಂಹಾರೌ** " ಎಂಬ ಪ್ರಮಾಣವಿದೆ.

2) ಪುನಃ ಪುನಃ ಕಥನದ ನಾಮವು ಅಭ್ಯಾಸವೆನಿಸುವುದು. ಛಾಂದೋ

ಗ್ಯೋಪನಿಷತ್ತಿನ ಆರನೇ ಅಧ್ಯಾಯದಲ್ಲಿ ಒಂಭತ್ತುಸಾರೆ "**ತತ್ತ್ವಮಸಿ**" ಮಹಾ ವಾಕ್ಯವನ್ನು ಹೇಳಲ್ಪಟ್ಟಿರುವುದು, ಆದ್ದರಿಂದ ಇದು ಎರಡನೇ ಲಿಂಗವು "**ಪ್ರಕರಣ ಪ್ರತಿಪಾದ್ಯಸ್ಯ ಪುನಃ ಪುನಃ ಪ್ರತಿಪಾದನಂ ಅಭ್ಯಾಸಃ**"

3) ಅಪೂರ್ವತಾ ಅಂದರೆ ಪ್ರಕರಣದಿಂದ ಪ್ರತಿಪಾದ್ಯವಾದ ಅದ್ವಿತೀಯ ಬ್ರಹ್ಮವು ಉಪನಿಷತ್ಪ್ರಮಾಣದಿಂದ ಭಿನ್ನವಾದ ಪ್ರತ್ಯಕ್ಷ ಮೊದಲಾದ ಲೌಕೀಕ ಪ್ರಮಾಣಗಳಿಂದ ಅವಿಷಯವಾಗಿರುವುದು. ಇದೇ ಅಪೂರ್ವತಾ ಎಂಬ ಮೂರನೇ ಲಿಂಗವು. ಅದ್ವಿತೀಯ ಬ್ರಹ್ಮವು ಸ್ವಪ್ರಕಾಶವೂ ಮತ್ತು ಅಪ್ರಮೇಯವಾಗಿರುವುದರಿಂದ ಉಪನಿಷತ್ಪ್ರಮಾಣದವಿನಾ ಯಾವ ಪ್ರಮಾಣಗಳಿಂದಲೂ ಗೋಚರವಾಗುವುದಿಲ್ಲ. ಪ್ರಮಾಣಗಳವಿಚಾರವನ್ನು ಹೇಳುತ್ತೇವೆ.

1 ಇಂದ್ರಿಯಗಳಿಂದ ವಿಷಯಗಳನ್ನು ತಿಳಿಯುವುದು ಪ್ರತ್ಯಕ್ಷ ಪ್ರಮಾಣ.

2 ಹೊಗೆಯನ್ನು ನೋಡಿ ಅಗ್ನಿಯನ್ನು ಊಹಿಸುವುದು ಅನುಮಾನ ಪ್ರಮಾಣ.

3 ಎತ್ತಿನಂತೆ ಗವಯವಿರುವುದೆಂಬಂತೆ ಹೋಲಿಕೆಯ ತಿಳುವಳಿಕೆಯನ್ನು ಉಪಯೋಗಿಸುವುದು ಉಪಮಾನಪ್ರಮಾಣ.

4 ತಿಳಿದವರು ಹೇಳಿದ್ದು ಅಥವಾ ಅಪೌರುಷೇಯವಾದ ಶಾಸ್ತ್ರವಾಕ್ಯವೇ ಶಬ್ದ ಪ್ರಮಾಣವು.

5 ದೇವದತ್ತನು ಮನೆಯಲ್ಲಿಲ್ಲ ಆದ್ದರಿಂದ ಅವನು ಹೊರಗೆ ಎಲ್ಲಿಯೋ ಇದ್ದಾನೆಂಬಂತೆ ಒಂದನ್ನು ನೋಡಿ ಇನ್ನೊಂದು ಕಲ್ಪಿಸುವದೇ ಅರ್ಥಾಪತ್ತಿ.

6 ಪ್ರಕಾಶದಲ್ಲಿ ಚನ್ನಾಗಿ ನೇತ್ರವಿರುವವನು ನೋಡಿದಾಗ ಮನೆಯಲ್ಲಿ ಘಟವು ಕಾಣಿಸಲಿಲ್ಲ. ಆದ್ದರಿಂದ ಅದು ಇಲ್ಲವೆಂದಾಯಿತು ಎಂಬ ರೀತಿಯಲ್ಲಿ ಪ್ರಮಾಣಕ್ಕೆ ಗೋಚರವಾಗ ಬೇಕಾದದ್ದು ಗೋಚರವಾಗಲಿಲ್ಲವೆಂಬ ಕಾರಣದಿಂದ ಅಭಾವವನ್ನು ನಿಶ್ಚಯಮಾಡುವುದು ಅನುಪಲಬ್ಧಿ ಪ್ರಮಾಣವು. ಹೀಗೆ ಆರು ಪ್ರಮಾಣಗಳು ಲೌಕೀಕ ವ್ಯವಹಾರದಲ್ಲಿಯೇ ಪ್ರಮಾಣವಾಗಿರುವವು. ಬ್ರಹ್ಮ ವಿಷಯದಲ್ಲಿ ಪ್ರಮಾಣಗಳಿಲ್ಲಾ ಹೇಗೆಂದರೆ.

1) ಶ್ರುತಿ "**ಅಶಬ್ದಮಸ್ಪರ್ಶಮರೂಪಮವ್ಯಯಂ**" ಎಂದು ಹೇಳಿರುವುದರಿಂದ ಪ್ರತ್ಯಕ್ಷ ಪ್ರಮಾಣಕ್ಕೆ ವಿಷಯವಲ್ಲ. ಮತ್ತು "**ಯದ್ದೃಶ್ಯಂ ತನ್ನಶ್ಯಂ**" ಎಂಬ ಪ್ರಮಾಣದಂತೆ ಯಾವುದು ಪ್ರತ್ಯಕ್ಷ ಪ್ರಮಾಣಕ್ಕೆ ವಿಷಯವೋ ಅದು ನಾಶವಂ ಪೊಂದುವುದು.

2) "**ನೈವ ಚಕ್ಷುಶ್ಚಲಿಂಗಂ**" ಬ್ರಹ್ಮಲಿಂಗ ರಹಿತವಾದ್ದರಿಂದ ಅನುಮಾನ ಪ್ರಮಾಣದಿಂದಲೂ ಗೋಚರವಲ್ಲ. ಇದಕ್ಕೆ ಶ್ರುತಿ = "**ಕಾರ್ಯೋಪಾಧಿ ಗಕೋಜೀವಃ ಕಾರಣೋಪಾಧಿರೀಶ್ವರಃ | ಕಾರ್ಯಕಾರಣ ನಿರ್ಮುಕ್ತಾ ಪೂರ್ಣ ಬೋಧಾವ ಶಿಷ್ಯತೇ**" ಅಂದರೆ ಕಾರ್ಯ ಉಪಾಧಿಯಿಂದ ಜೀವನು, ಕಾರಣೋಪಾಧಿಯಿಂದ ಈಶ್ವರನು ಗೋಚರಿಸುತ್ತಾನೆ. ಬ್ರಹ್ಮವು ಉಪಾಧಿರಹಿತ

ಕಾರಣಲ್ಲದ್ದರಿಂದ ಅನುಮಾನ ಪ್ರಮಾಣಕ್ಕೆ ವಿಷಯವಲ್ಲ.

2) **“ ಏಕಮೇವಾದ್ವಿತೀಯಂ ಬ್ರಹ್ಮ ” “ ಸರ್ವಂ ಖಲ್ವಿದಂ ಬ್ರಹ್ಮಂ ”** ಎಂದು ಶ್ರುತಿಯಲ್ಲಿ ಹೇಳಿರುವುದರಿಂದ ಉಪಮಾನ ಪ್ರಮಾಣಕ್ಕೆ ವಿಷಯವಲ್ಲ.

2) **“ ಆಕಾಶಸ್ಯಗುಣಶ್ಚಬ್ದಃ ನಿಶ್ಶಬ್ದೋ ಬ್ರಹ್ಮಉಚ್ಚತೇ ”** ಎಂದು ಶ್ರುತಿಯಲ್ಲಿ ಹೇಳಿರುವುದರಿಂದ ಶಬ್ದ ಪ್ರಮಾಣಕ್ಕೂ ಗೋಚರವಲ್ಲ.

5) ಬ್ರಹ್ಮವು ಪರಿಪೂರ್ಣ ವಿರುವುದರಿಂದ ಅರ್ಥಾಪತ್ತಿ ಪ್ರಮಾಣ ದಿಂದಲೂ ಗೋಚರವಾಗುವುದಿಲ್ಲ.

6) ಬ್ರಹ್ಮವು ಭಾವರೂಪವಾದ್ದರಿಂದ ಅನುಪಲಬ್ಧಿ ಪ್ರಮಾಣವು ಸಹ ತಿಳಿಸಲಾರದು. ಈ ಆರು ಪ್ರಮಾಣಗಳಿಂದಲೂ ಬ್ರಹ್ಮವು ವಿಷಯವಲ್ಲದ್ದರಿಂದ ಅಪೂರ್ವತ ವೆನಿಸುವದು.

4) ಬ್ರಹ್ಮ ಸ್ವರೂಪದ ಯಥಾರ್ಥಜ್ಞಾನದಿಂದ ಮೂಲಾಜ್ಞಾನಸಹಿತ ಸರ್ವ ದುಃಖ ನಿವೃತ್ತಿ ಪರಮಾನಂದ ಪ್ರಾಪ್ತಿರೂಪ ಮೋಕ್ಷವೇ ಫಲವೆನಿಸುವುದು. **“ ಪ್ರಕರಣ ಪ್ರತಿಪಾದ್ಯಸ್ಯ ಪ್ರಯೋಜನಂ ತಜ್ಞಾನಾತ್ಪ್ರಾಪ್ತಿ ಪ್ರಯೋಜನಂ ಫಲಂ ”** ಇದು ನಾಲ್ಕನೇ ಲಿಂಗ

5) ಜೀವ ಬ್ರಹ್ಮೈಕ್ಯತ್ವದ ಅಭೇದದ ಸ್ತುತಿಯು. ಮತ್ತೂ ಭೇದದ ನಿಂದೆಯು ಅರ್ಥವಾದವೆನಿಸುವ ಐದನೇ ಲಿಂಗವು “ ಪ್ರಕರಣ ಪ್ರತಿಪಾದ್ಯಸ್ಯ ಪ್ರಶಂಸನಂ ಅರ್ಥವಾದಃ ”

೬) ಜೀವ ಬ್ರಹ್ಮೈಕ್ಯತ್ವದ ಜ್ಞಾನದಲ್ಲಿ ಅನೇಕ ಯುಕ್ತಿ ಅಂದರೆ ದೃಷ್ಟಾಂತ ಗಳಿಂದ ನಿಶ್ಚಯ ಮಾಡುವುದೇ ಉಪ ಪತ್ತಿ ಎಂಬ ಆರನೇ ಲಿಂಗವು. “ ಪ್ರಕರಣ ಪ್ರತಿಪಾದ್ಯಸ್ಯ ದೃಷ್ಟಾಂತೈಃ ಪ್ರತಿಪಾದನಂ ಉಪ ಪತ್ತಿಃ ” ಈ ಪ್ರಕಾರವಾಗಿ ಶ್ರುತಿ ಷಡ್ಲಿಂಗಗಳಿಂದ ವೇದಾಂತವಾಕ್ಯವನ್ನು ಶ್ರವಣದ ಮೂಲಕ ಜೀವಬ್ರಹ್ಮೈಕ್ಯತ್ವ ಜ್ಞಾನದ ವಿಚಾರವೇ ಸುವಿಚಾರವೆಂಬ ಎರಡನೆಯ ಭೂಮಿಕೆಯು

ಪ್ರ :— ತನುಮಾನಸವೆಂಬ ಮೂರನೇ ಭೂಮಿಕೆಯ ಲಕ್ಷಣವೇನು ?

ಉ :– ಎರಡನೆಯ ಭೂಮಿಕೆಯಲ್ಲಿ ಜೀವಬ್ರಹ್ಮೈಕ್ಯತ್ವದ ವಿಷಯವನ್ನು ಶ್ರವಣಮಾಡಿದನಂತರ ಯುಕ್ತಿಯಿಂದ ಮನನ ಮಾಡುವುದೇ ತನು ಮಾನಸವೆಂಬ ಮೂರನೇ ಭೂಮಿಕೆಯ ಲಕ್ಷಣವು ಮನನವೆಂದರೆ ಜೀವಬ್ರಹ್ಮೈಕ್ಯತ್ವದ ವಿಷಯ ದಲ್ಲಿ ಅಭೇದಸಾಧಕವಾದ ಯುಕ್ತಿಯಿಂದಲೂ, ಭೇದಬಾಧಕವಾದ ಯುಕ್ತಿಯಿಂ ದಲೂ ಚಿಂತನವಂ ಮಾಡುವುದೇ ಮನನವೆನಿಸುವುದು. **“ ಶ್ರುತಸ್ಯ ಅರ್ಥಸ್ಯ ಉಪಪತ್ತಿಭಿಶ್ಚಿಂತನಂ ಮನನಂ ”**

**ಅಭೇದ ಸಾಧಕ ಯುಕ್ತಿಗಳು ಯಾವುವೆಂದರೆ.**

೧ ಜೀವೋ ಬ್ರಹ್ಮಾಭಿನ್ನಃ, ಚೇತನತ್ವಾತ್ ಯತ್ರಯತ್ರ ಚೇತನತ್ವಂ

ತತ್ರತತ್ರ ಬ್ರಹ್ಮಾಭಿನ್ನಃ, ಯಥಾ ಬ್ರಹ್ಮಣಿ ” ಇದು ಅನುಮಾನ ಪ್ರಮಾಣದ ಯುಕ್ತಿಯು, ಇದರ ಅರ್ಥ :— ಜೀವನು ಬ್ರಹ್ಮಕ್ಕೆ ಅಭಿನ್ನನು. (ಇದು ಪ್ರತಿಜ್ಞೆ) ಯಾವಕಾರಣ ದೆಶೆಯಿಂದ ಅಭಿನ್ನನು ? ಅಂದರೆ ಚೈತನ್ಯಸ್ವರೂಪನಾದ ಕಾರಣ. (ಇದು ಹೇತುವು) ಇದಕ್ಕೆ ದೃಷ್ಟಾಂತ, ಈಶ್ವರ ಚೇತನದಹಾಗೆ. (ಇದು ದೃಷ್ಟಾಂತ) ಈಶ್ವರನು ಬ್ರಹ್ಮಕ್ಕೆ ಹೇಗೆ ಅಭಿನ್ನನೋ ಅದರಂತೆ ಜೀವನೂ ಸಹ ಬ್ರಹ್ಮಕ್ಕೆ ಅಭಿನ್ನನಾಗಿರುವನು. ಒಂದು ಪಕ್ಷ ಜೀವನನ್ನು ಬ್ರಹ್ಮಸ್ವರೂಪವಲ್ಲವೆಂದು ಎಂದರೆ ಚೇತನದಿಂದ ಭಿನ್ನವಾದದ್ದು ಜಡವೆನಿಸುತ್ತದೆ. ಜೀವನನ್ನು ಚೇತನಸ್ವರೂಪನನ್ನಾಗಿ ಅಂಗೀಕರಿಸಿ ಬ್ರಹ್ಮಕ್ಕೆ ಭಿನ್ನನೆಂದರೆ ಬ್ರಹ್ಮವು ಜಡಸ್ವರೂಪವಾಗುವುದು. ಇದು ಶ್ರುತಿಗೆ ವಿರುದ್ಧವು ಆದ್ದರಿಂದ ಹಾಗೆ ಹೇಳಬಾರದು. ಜೀವನು ಬ್ರಹ್ಮಸ್ವರೂಪವೇ ಎಂಬುದು ಅನುಮಾನ ಪ್ರಮಾಣದ ಯುಕ್ತಿಯು.

೨ ಘಟಮಠಗಳ ಉಪಾಧಿಗಳನ್ನು ಬಿಟ್ಟರೆ, ಆಕಾಶಕ್ಕೆ ಅಭೇದವಿರುವಂತೆ ಅವಿದ್ಯ ಮಾಯಾ ಉಪಾಧಿಗಳನ್ನು ಬಿಡಲಾಗಿ ಚೈತನ್ಯದಲ್ಲಿ ಅಭೇದವಿರುವುದು. ಇದು ಉಪಮಾನ ಪ್ರಮಾಣ ಯುಕ್ತಿಯು,

೩ “ ನೇಹನಾನಾಸ್ತಿ ಕಿಂಚನ ” ಎಂಬ ಶ್ರುತಿಯಲ್ಲಿ ಭೇದಕ್ಕೆ ನಿಷೇಧವನ್ನು ಮಾಡಿರುವುದರಿಂದ ಇದು ಶ್ರುತಾರ್ಥಾಪತ್ತಿ ಪ್ರಮಾಣರೂಪ ಯುಕ್ತಿಯು, ಇವು ಅಭೇದ ಸಾಧಕ ಯುಕ್ತಿಗಳು, ಇನ್ನು ಭೇದಬಾಧಕ ಯುಕ್ತಿಗಳು ಯಾವೆಂದರೆ,

೧ ಜೀವಬ್ರಹ್ಮರ ಭೇದವು ಮಿಥ್ಯೆವು, ಏಕೆಂದರೆ ಔಪಾಧಿಕವಾದ ದೆಶೆಯಿಂದ ಘಟಾಕಾಶ ಮಠಾಕಾಶದಂತೆ ಇದು ಅನುಮಾನ ಯುಕ್ತಿಯು,

2 ಬಿಂಬ ಪ್ರತಿಬಿಂಬಗಳಿಗೆ ಭೇದವು ಹೇಗೆ ಮಿಥ್ಯೆಯೋ ಹಾಗೆ ಜೀವಬ್ರಹ್ಮರ ಭೇದವು ಮಿಥ್ಯ ಇದು ಉಪಮಾನ ಪ್ರಮಾಣದ ಯುಕ್ತಿಯು. ಮತ್ತು ಸ್ವಪ್ನದೊಳಗಿನ ಜೀವಬ್ರಹ್ಮರ ಸರ್ವ ವಸ್ತುಗಳ ಭೇದವು ಹೇಗೆಮಿಥ್ಯೆಯೋ ಹಾಗೆ ಜಾಗ್ರತ್ ಪ್ರಪಂಚದ ಭೇದಗಳು ಮಿಥ್ಯವು. ಇದು ಸಹಾ ಉಪಮಾನ ಪ್ರಮಾಣ ಯುಕ್ತಿಯು.

3 ತತ್ತ್ವಮಸಿ ಮಹಾ ವಾಕ್ಯಂಗಳಲ್ಲಿ ಹೇಳಿದ ಯಾವ ಜೀವ ಬ್ರಹ್ಮರ ಐಕ್ಯತ್ವವುಂಟೋ ಅದು ಭೇದದ ಮಿಥ್ಯತ್ವದ ಹೊರತಾಗಿ ಸಂಭವಿಸುವುದಿಲ್ಲ ಆದ್ದರಿಂದ ಜೀವಬ್ರಹ್ಮರ ಭೇದದ ಮಿಥ್ಯತ್ವವನ್ನು ಕಲ್ಪಿಸಬೇಕು. ಇದು ಅರ್ಥಾಪತ್ತಿ ಪ್ರಮಾಣದ ಯುಕ್ತಿಯು.

4 ಜಾಗ್ರತ್ಸ್ವಪ್ನಂಗಳಲ್ಲಿ ಉಪಾಧಿಯುಂಟಾಗಲು ಜೀವ ಬ್ರಹ್ಮರಿಗೆ ಭೇದವು ತೋರುವುದು. ಸುಷುಪ್ತಿಯಲ್ಲಿ ಉಪಾಧಿಯು ಅಭಾವ ವಾಗಲು ಭೇದವು ತೋರು

ವದಿಲ್ಲ. ಇದರಂತೆ ಜೀವಬ್ರಹ್ಮರಿಗೆ ಪಾರಮಾರ್ಥಿಕದಿಂದ ಭೇದದ ಆಭಾವ ವಿರುವದು ಇದು ಅನುಪಲಬ್ಧಿಯ ಪ್ರಮಾಣದ ಯುಕ್ತಿಯು.

ಹೀಗೆ ಜೀವ ಬ್ರಹ್ಮರಿಗೆ ಅಭೇದ ಸಾಧಕ ಯುಕ್ತಿಯಿಂದಲೂ, ಭೇದ ಬಾಧಕ ಯುಕ್ತಿಯಿಂದಲು ಚಿಂತನವಂ ಮಾಡುವುದೇ ಮನನ ವೆನಿಸುವುದು, ಇದು ತನು ಮಾನಸ ವೆಂಬ ಮೂರನೇ ಭೂಮಿಕೆಯು. ಸು ಖೇ ಚ್ಛಾ, ಸುವಿಚಾರಣವೆಂದು ನಾಮವು.

ಪ್ರ :- ಸತ್ವಾಪತ್ತಿ ಯೆಂಬ ನಾಲ್ಕನೇ ಭೂಮಿಕೆಯ ಲಕ್ಷಣವೇನು ?

ಉ :- ಪ್ರಥಮ ಭೂಮಿಕೆಯಾದ ಸುಖೇಚ್ಛದಲ್ಲಿ ವೈರಾಗ್ಯವಂ ಪಡೆದು, ಎರಡನೇ ಭೂಮಿಕೆಯಲ್ಲಿ ಶ್ರವಣವಂ ಮಾಡಿ ಅನಂತರ ನಿಧಿಧ್ಯಾಸಸ್ಥಿತಿಯೇ ಈ ನಾಲ್ಕುನೇ ಭೂಮಿಕೆಯು. ನಿಧಿಧ್ಯಾಸ ವೆಂದರೆ **“ ವಿಜಾತೀಯ ಪ್ರತ್ಯಯ ತಿರಸ್ಕಾರೇಣ ಸಜಾತೀಯ ಪ್ರತ್ಯಯ ಪ್ರವಾಹೀಕರಣಂ ನಿಧಿಧ್ಯಾಸನಂ ”** ಅಂದರೆ ಅನಾತ್ಮಾಕಾರ ವೃತ್ತಿಯಂಬಿಟ್ಟು ಆತ್ಮಾಕಾರದ ವೃತ್ತಿಯ ಸ್ಥಿತಿಯೇ ನಿಧಿಧ್ಯಾಸವು ಇದಕ್ಕೆ ನಾಲ್ಕನೇ ಭೂಮಿಕೆಯಾದ ಸತ್ವಾಪತ್ತಿ ಎಂಬ ನಾಮವು. ಈ ನಾಲ್ಕನೇ ಭೂಮಿಕೆಯಲ್ಲಿ ಅಂಸಂಭಾವನೇ, ವಿಪರೀತ ಭಾವನೇ ಇಲ್ಲವಾಗಿ ಸ್ವರೂಪ ಸತ್ತೆಯಲ್ಲಿಯೇ ವೃತ್ತಿಯ ಸ್ಥಿತಿ ಯಿರುವ ಕಾರಣ ಸತ್ವಾಪತ್ತಿ ಎಂದು ನಾಮವು. ಇದಕ್ಕೆ ಜಾಗ್ರತ್ಸ್ವಪ್ನನೆಂದು ನಾಮವು. ಏಕೆಂದರೆ ಜಾಗ್ರದವಸ್ಥೆಯ ಪ್ರಪಂಚವನ್ನು ಸ್ವಪ್ನ ಪ್ರಪಂಚದಂತೆಂದು ನಿಶ್ಚಯಿಸಿರುವುದರಿಂದ ಇದು ಜಾಗ್ರತ್ಸ್ವಪ್ನನೆಂಬ ಸತ್ವಾಪತ್ತಿ ನಾಮಕ ನಾಲ್ಕನೇ ಭೂಮಿಕೆ ಯಾಗಿರುವದು

ಪ್ರ :— ಅಸಂಸಕ್ತಿ ಎಂಬ ಐದನೇ ಭೂಮಿಕೆಯ ಸ್ವರೂಪವೇನು?

ಉ :— ಶರೀರ, ಇಂದ್ರಿಯ. ಪ್ರಾಣ, ಮನ ಬುಧ್ಧ್ಯಾದಿಗಳಲ್ಲಿ ಅಹಂತಾ, ಮಮತಾ, ಸಂಪೂರ್ಣ ನಿವೃತ್ತಿಯಾಗಿ ದೇಹಾದಿಗಳಲ್ಲಿ ಆಸಕ್ತಿ ಅಂದರೆ ಪ್ರಿತಿಯು ಇಲ್ಲದಂತಾಗಲು ಇದಕ್ಕೆ ಅಸಂಸಕ್ತಿ ಎಂದು ನಾಮವು. ಇದಕ್ಕೆ ಅಸಂಸಕ್ತಿ ಎಂದು ನಾಮವು. ಇದಕ್ಕೆ ಜಾಗ್ರತ್ ಸುಷ್ಪ್ತಿಎಂದು ಹೇಳುತ್ತಾರೆ. ಏಕೆಂದರೆ ಈ ಭೂಮಿಕೆಯಲ್ಲಿ ಸುಷ್ಪ್ತಿಯಲ್ಲಿ ಆನಂದರುವಿವಂತೇ ಯಾವಾಗಲೂ ಆನಂದ ವಿರುತ್ತದೆ.

ಪ್ರ :— ಪದಾರ್ಥಾ ಭಾವಿನಿ ಎಂಬ ಆರನೇ ಭೂಮಿಕೆಯ ಸ್ವರೂಪ ವೇನು ?

ಉ :— ಜ್ಞಾನಿಗಳಲ್ಲಿ ಜೀವನ್ಮುಕ್ತರೆಂದು, ವಿದೇಹ ಮುಕ್ತರೆಂದು ದ್ವಿವಿಧ ವಾಗಿರುತ್ತಾರೆ. ಈ ಪದಾರ್ಥಾ ಭಾವಿನಿ ಎಂಬ ಭೂಮಿಕೆಯ ಸ್ವರೂಪವು ವಿದೇಹ ಮುಕ್ತರಲ್ಲಿ ತೋರುತ್ತದೆ. ಸರ್ವ ಪ್ರಪಂಚವು ಆಭಾವವಾದ ನಿರ್ವಿಕಲ್ಪ ಸಮಾಧಿಯ ಸ್ಥಿತಿಯಿರುವ ಕಾರಣ ಪದಾರ್ಥಾ ಭಾವಿನಿ ಎಂದು ನಾಮವು.

ಪ್ರ :- ತುರಿಯಗಾಮಿ ಎಂಬ ಏಳನೇ ಭೂಮಿಕೆಯ ಸ್ವರೂಪವೇನು ?

॥ಶ್ರೀ॥

# ಸುಖಾಶ್ರಯು ಪ್ರಬೋಧಾ

ಸಂಸ್ಥಾಪಕರು:

ವೇ॥ ಅಪರೋಕ್ಷಾನುಭವಿ ಶ್ರೀ ಸಕ್ರಪ್ಪಸ್ವಾಮಿಗಳವರು,

ಸಂಪುಟ : ೬] MAY 1st 1957 ಸಂಚಿಕೆ : ೫



ಸಂಪಾದಕ ಮತ್ತು ಪ್ರಕಾಶಕ :

ಕೆ. ಜಡೇಸಿದ್ಧಪ್ಪ, ರಾಯದುರ್ಗ.

ಬಿಡಿ ಸಂಚಿಕೆ. ೦-೮-೦

ಸಿರಿಗನ್ನಡಂ ಗೆಲ್ಗೆ ||ಶ್ರೀಜಡೇಶಾಯನಮಃ|| ಶ್ರೀಗನ್ನಡಂಗೆಲ್ಗೆ



ಓಂ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣ ಮುದಚ್ಯತೇ।
ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವ ಶಿಷ್ಯತೇ॥

# ಸುಖಾಶ್ರಯ ಪ್ರಬೋಧಾ

## (ಧಾರ್ಮಿಕ ಮಾಸ ಪತ್ರಿಕೆ)

ಸಂಸ್ಥಾಪಕರು.

ವೇ। ಅಪರೋಕ್ಷಾನುಭವಿ ಶ್ರೀ ಸಕ್ರಪ್ಪಸ್ವಾಮಿಗಳವರು.

ಸಂಪುಟ ; ೬ ] MAY 1st 1957 [ ಸಂಚಿಕೆ : ೫

ಸಂಪಾದಕ:

ಕೆ. ಜಡೇಸಿದ್ಧಪ್ಪ ರಾಯದುರ್ಗ.

## ವಿನಂತಿ.

ಮಹಾಶಯರೆ !

ಹಿಂದಿನ ಸಂಚಿಕೆಯಲ್ಲಿ ಸೂಚಿಸಿದಪ್ರಕಾರ ಶ್ರೀ ಸರ್ಪಭೂಷಣ ಯೋಗಿಗಳವರಿಂದ ರಚಿತವಾದ ಸಂಸ್ಕೃತ ಜ್ಞಾನಶತಕವನ್ನು ಮುಮುಕ್ಷುಗಳ ಹಿತಾರ್ಥವಾಗಿ ಈ ಸಂಚಿಕೆಯು ತುಂಬಾ ಪ್ರಕಟಿಸಲಾಗಿದೆ. ಇದರಿಂದ ಕನ್ನಡ ನಾಡಿಗೆ ಹೆಚ್ಚಿನಲಾಭ ದಾಯಕ ವಾಗುವುದೆಂದು ನಂಬಿದ್ದೇವೆ.

ಸಂಪಾದಕ,

ಸುಖಾಶ್ರಯ ಪ್ರಬೋಧಾ

ಸೃಷ್ಟಿಸುತ್ತದೆಯೊ, ಅದರಂತೆ ಉಪನಿಷತ್ಪ್ರತಿಪಾದಿತ ಸನಾತನನಾದ ಪರಮಾತ್ಮನೊಬ್ಬನೇ ಉಪಾದಾನ ನಿಮಿತ್ತ ಸಹಕಾರಿಗಳೆಂಬ ಕಾರಣತ್ರಯ ರೂಪದಿಂದ ಅನೇಕ ಬ್ರಹ್ಮಾಂಡಗಳನ್ನು ಸೃಷ್ಟಿಸುತ್ತಾನೆ.

**ವಿಶೇಷಾರ್ಥ** :— ಜೇಡರಹುಳವು ತನ್ನನಿವಾಸಕ್ಕಾಗಿ ಮನೆಯನ್ನು (ಬಲೆಯನ್ನು) ಸೃಷ್ಟಿಸಬೇಕಾದಾಗ ತನ್ನ ಉದರದಲ್ಲಿದ್ದ ತಂತುವನ್ನು ಗುದದ್ವಾರದಿಂದಬಿಡುತ್ತಾ ತನ್ನಪಾದಗಳಿಂದೆಣಿಕೆಯನ್ನು ಹಾಕುತ್ತಾ ತನಗೆಷ್ಟು ಸ್ಥಳವು ಬೇಕೋ ಅಷ್ಟುಸ್ಥಳವನ್ನು ಆಕ್ರಮಿಸಿಕೊಂಡು ಮನೆಯನ್ನು ಮಾಡಿಕೊಂಡು ಅದರಲ್ಲಿ ವಾಸಮಾಡುತ್ತದೆ. ಅಂದರೆ ತನ್ನಮನೆಯನ್ನು ತಾನು ನಿರ್ಮಿಸಿಕೊಳ್ಳುವಾಗ ಕಾಗೆ ಗುಬ್ಬಿಗಳಂತೆ ಬೇರೆ ಕಸಕಡ್ಡಿಗಳನ್ನು ತಂದು ಗೂಡು ಕಟ್ಟಿಕೊಳ್ಳುವಂತೆ ಬೇರಾವ ವಸ್ತುವನ್ನೂ ತಂದುಕೊಳ್ಳುವುದಿಲ್ಲ ಇದು ಜಗತ್ಪ್ರಸಿದ್ಧವಷ್ಟೆ! ಇಲ್ಲಿ ಜೇಡರ ಹುಳವು ತನ್ನಮನೆಯರೂಪ ಕಾರ್ಯವನ್ನು ಸೃಷ್ಟಿಸುವಾಗ ಆ ಮನೆಗೆ ತನ್ನ ಉದರದಲ್ಲಿದ್ದತಂತುವು ಉಪಾದಾನ ಕಾರಣವಾಗಿರುತ್ತದೆ. ಇಂತಿಷ್ಟು ಅಳತೆಯಲ್ಲಿ ಮನೆಯನ್ನು ನಿರ್ಮಿಸಬೇಕೆಂಬ ಬುದ್ಧಿಯು ಆ ಮನೆಗೆ ನಿಮಿತ್ತ ಕಾರಣವಾಗಿರುತ್ತದೆ. ಆ ಮನೆಯನ್ನು ಕಾಲ್ಗಳಿಂದ ಹೆಣೆದುಕಟ್ಟುವುದರಿಂದ ಆ ಕಾಲುಗಳು ಸಹಕಾರಿ ಕಾರಣಗಳಾಗಿರುತ್ತದೆ. ಆದರೆ ಸಹಕಾರಿ ಕಾರಣವು ನಿಮಿತ್ತ ಕಾರಣದಲ್ಲಿಯೇ ಅಂತರ್ಭವವೆಂಬುದು ವೇದಾಂತ ಶಾಸ್ತ್ರ ಪ್ರಸಿದ್ಧ. ಈ ಜೇಡರ ಹುಳದ ಉಪಮಾನದಂತೆ ಪರಮಾತ್ಮನು ಜಗದ್ರೂಪ ಕಾರ್ಯಕ್ಕೆ ಆ ಮೂರು ಕಾರಣಗಳು ತಾನೇ ಆಗಿರುತ್ತಾನೆ, ಹೇಗಂದರೆ ಮಾಯಾವಿಶಿಷ್ಟನಾದ ಪರಮಾತ್ಮನಲ್ಲಿ ಜ್ಞಾನೇಚ್ಛಾ ಕ್ರಿಯೆಗಳೆಂಬ ಶಕ್ತಿತ್ರಯಗಳುಂಟು. ಜಗದ್ರೂಪಕಾರ್ಯಕ್ಕೆ ಆ ಪರಮಾತ್ಮನು ಜ್ಞಾನಶಕ್ತಿರೂಪದಿಂದ ನಿಮಿತ್ತ ಕಾರಣನಾಗಿಯೂ, ಇಚ್ಛಾಶಕ್ತಿರೂಪದಿಂದ (ವಿಕ್ಷೇಪ ಶಕ್ತಿರೂಪದಿಂದ) ಉಪಾದಾನ ಕಾರಣನಾಗಿಯೂ, ಕ್ರಿಯಾಶಕ್ತಿರೂಪದಿಂದ ಸಹಕಾರಿ ಕಾರಣನಾಗಿಯೂ, ಆಗಿರುತ್ತಾನೆ. ಕ್ರಿಯಾಶಕ್ತಿಯು ಇಚ್ಛಾ ಶಕ್ತಿಯಲ್ಲಿ ಅಂತರ್ಭವಿಸುವುದರಿಂದ ಜ್ಞಾನೇಚ್ಛೆಗಳೆರಡನ್ನೇ ಸ್ವೀಕಾರಮಾಡಿಕೊಂಡು ವೇದಾಂತ ಶಾಸ್ತ್ರವು ಜಗತ್ತಿಗೆ ನಿಮಿತ್ತೋಪಾದಾನ ಕಾರಣಗಳೆರಡೂ ಪರಮಾತ್ಮನೊಬ್ಬನಲ್ಲಿಯೇ ಸಿದ್ಧಿಸುವುದೆಂಬುದನ್ನು ಜೇಡರಹುಳ ದೃಷ್ಟಾಂತದಿಂದ ಸ್ಪಷ್ಟವಾಗಿ ಪ್ರತಿಪಾದಿಸಿರುತ್ತದೆ.

ಶ್ರುತಿ ಯಲ್ಲಿಯೂ ಸಹ "ಯಥೋರ್ಣನಾಭಿಃ ಸೃಜತೇ ಗೃಹ್ಣಾತಿಚ, ಯಥಾ ಪೃಥಿ ವ್ಯಾಮೋಷಧಯಃ ಸಂಭವಂತಿ, ಯಥಾಸತಃ ಪುರುಷಾತ್ಕೇಶಲೋಮಾನಿ,

ತಥಾಕ್ಷರಾತ್ಸಂಭವತೀಹ ವಿಶ್ವಂ, ಯಥಾಗ್ನೇಃ ಕ್ಷುದ್ರಾವಿಸ್ಫುಲಿಂಗಾವ್ಯುಚ್ಚರಂತಿ ಏವ ಮೇವಾಸ್ಮಾದಾತ್ಮನಃ ಸರ್ವೇಪ್ರಾಣಾಃ, ಯಸ್ಸರ್ವಜ್ಞಃ ಸವಿಶ್ವಕೃತ್ಸಹಿ ಸರ್ವಸ್ಯಕರ್ತಾ" ಈ ರೀತಿ ಹೇಳಲ್ಪಟ್ಟಿದೆ. ಅಂದರೆ ಊರ್ಣನಾಭಿ ( ಜೇಡರಹುಳ ) ಜಂತುವು ತನ್ನಿಂದಲೇ ತಂತುವನ್ನು ಉತ್ಪತ್ತಿಮಾಡುವುದು. ತನ್ನಲ್ಲಿಯೇ ಆ ತಂತುವನ್ನು ಲಯ ಮಾಡಿಕೊಳ್ಳುವುದು. ಹೇಗೋ ಹಾಗೆ ಪರಮಾತ್ಮನು ತನ್ನಿಂದಲೇ ಈ ಜಗತ್ತನ್ನು ಉತ್ಪನ್ನಮಾಡಿ ಪುನಃ ತನ್ನಲ್ಲಿಯೇ ಜಗತ್ತನ್ನು ಲಯ ಮಾಡಿಕೊಳ್ಳುತ್ತಾನೆ. ಮತ್ತು ಹೇಗೆ ಪೃಥ್ವಿಯಲ್ಲಿಂದ ನಾನಾ ವಿಧವಾದ ಔಷಧಿಗಳು ಉತ್ಪತ್ತಿಯಾಗುತ್ತಿರುವವೋ ಮತ್ತು ಪುರುಷನಲ್ಲಿಂದ ನಖಶಿಖಾದಿಗಳು ಉತ್ಪತ್ತಿಯಾಗುತ್ತಿರುವವೋ ಹಾಗೆ ಅಕ್ಷರಬ್ರಹ್ಮನಲ್ಲಿಯೇ ಈ ವಿಶ್ವವು ಉತ್ಪನ್ನವಾಗುತ್ತದೆ: ಮತ್ತು ಹೇಗೆ ಪ್ರಜ್ವಲಿತಾಗ್ನಿಯಲ್ಲಿಂದ ಕ್ಷುದ್ರವಿಸ್ಫುಲಿಂಗಗಳು ಉತ್ಪನ್ನವಾಗುವವೋ ಹಾಗೇ ಈ ಆತ್ಮನಲ್ಲಿಯೇ ಸರ್ವಪ್ರಾಣಿಗಳು ಉತ್ಪನ್ನವಾಗುತ್ತವೆ. ಯಾವಪರಮೇಶ್ವರನು ಸರ್ವಜ್ಞನೋ ಆ ಪರಮೇಶ್ವರನೇ ಜಗತ್ತನ್ನು ಮಾಡುತ್ತಾನೆ ಆ ಪರಮೇಶ್ವರನೇ ಸರ್ವಕ್ಕೂ ಕರ್ತನಾಗಿರುತ್ತಾನೆ" ಇತ್ಯಾದಿ ಅನೇಕ ಶ್ರುತಿಗಳು ಪರಮಾತ್ಮನು ಜಗತ್ತಿಗಭಿನ್ನ ನಿಮಿತ್ತೋಪಾದಾನ ಕಾರಣನೆಂದು ಹೇಳುತ್ತವೆ.

## ಭೋಗ ಷಟ್ಪದಿ

ಎಳೆಯು ಹೊಟ್ಟೆ ಹುಳವುತಾನೆ।
ಎಳೆಯು ನೆಳೆದು ಹೊಟ್ಟೆಯಿಂಪ।
ಬಲೆಯು ಮಾಡುತದಕೆ ಮೂರುವಿಧದ ಹೇತುಗಳ್ ॥
ತಳೆದರೀತಿ ವೇದಶಿಖರ।
ಗಳಲಿ ಪೇಳ್ವ ಶಿವನು ಜಗಕೆ।
ತಳೆವ ತಾನೆಯೊಬ್ಬ ಮೂರು ಕಾರಣಂಗಳಂ ॥ ೧೪ ॥

ಅವತಾರಿಕೆ :— ಪರಮಾತ್ಮನು ಜಗತ್ತಿಗೆ ಅಭಿನ್ನ ನಿಮಿತ್ತೋಪಾದಾನ ಕಾರಣರೂಪದಿಂದ ಕರ್ತನಾಗಿದ್ದಾನೆಂಬುದು ಹೇಳಿದಂತಾಯಿತು. ಆತರೆ ಕರ್ತೃತ್ವದಲ್ಲಿ ಕರಣಕರ್ತೃತ್ವ, ಸಂಕಲ್ಪಕರ್ತೃತ್ವ ಸನ್ನಿಧಾನಕರ್ತೃತ್ವಗಳೆಂದು ಮೂರುಬಗೆಯುಂಟು. ಈ ಮೂರು ಕರ್ತೃತ್ವಗಳಲ್ಲಿ ಆ ಪರಮಾತ್ಮನು ಯಾವ ಕರ್ತೃವಾಗಿದ್ದಾನೆ? ಎಂಬ ಪ್ರಶ್ನೆಗೆ ಪರಮಾತ್ಮನು ಜಗತ್ತಿಗೆ ಸನ್ನಿಧಾನ ಕರ್ತೃವಾಗಿದ್ದಾನೆಂದು ಹೇಳುವುದು ಯೋಗ್ಯವೆಂಬ ಉತ್ತರವನ್ನು ಮುಂದಿನ ಶ್ಲೋಕದಲ್ಲಿ ಸೂಚಿಸುತ್ತಾರೆ.

## * ಪೃಥ್ವೀ ವೃತ್ತ.

ಶ್ಲೋ ॥ ಕುಲಾಲ ಕರಣಾ ದ್ಘಟಸ್ಸ್ವರಿವ, ವಿಶ್ವಕರ್ಮಸ್ಮೃತೇ।
ನೃಕೃತ್ಯಮಿನ ಸನ್ನಿಧೇರ್ಲಗತಿ, ತತ್ರಪೂರ್ವದ್ವಯಂ।
ಪ್ರಯತ್ನ ಜಟಿಲಂ ಪರಂ ತದಪಿ, ಕೇಳಿ ನಿಘ್ನೈರಿದಂ।
ಜಗಜ್ಜನನ ಕರ್ಮಣಿಪ್ರತಿನಿ, ಧೀಯತೇ ಬ್ರಹ್ಮಣಾ ॥ ೧೫ ॥

ಪದಚ್ಛೇದ:- ಕುಲಾಲ, ಕರಣಾತ್, ಘಟಃ, ಸ್ವರ್, ಇವ, ವಿಶ್ವಕರ್ಮಃ, ಸ್ಮೃತೇಃ, ನೃಕೃತ್ಯಂ, ಇನ, ಸನ್ನಿಧೇಃ, ಲಗತಿ, ತತ್ರ, ಪೂರ್ವದ್ವಯಂ, ಪ್ರಯತ್ನ, ಜಟಿಲಂ, ಪರಂ, ತದಪಿ, ಕೇಳಿ ನಿಘ್ನೈಃ, ಇದಂ, ಜಗತ್, ಜನನ, ಕರ್ಮಣಿ, ಪ್ರತಿನಿಧೀಯತೇ, ಬ್ರಹ್ಮಣಾ,

ಟೀಕ :— ಕುಲಾಲ = ಘಟಕಾರಕನ। ಕರಣಾತ್ = ಇಂದ್ರಿಯದಿಂದ। ಘಟಃ = ಕೊಡವು। ವಿಶ್ವಕರ್ಮಸ್ಮೃತೇಃ = ವಿಶ್ವಕರ್ಮನ ಸಂಕಲ್ಪದಿಂದ। ಸ್ವರ್ = ದೇವಲೋಕವು। ಇನ = ಸೂರ್ಯನ। ಸನ್ನಿಧೇಃ = ಸನ್ನಿಧಾನದಿಂದ। ನೃಕೃತ್ಯಂ = ಮನುಜರ ವ್ಯವಹಾರವು। ಇವ = ಹಾಗೆ। ಲಗತಿ = ಸಂಬಂಧಿಸುತ್ತದೆ। ತತ್ರ = ಅಲ್ಲಿ। ಪೂರ್ವದ್ವಯಂ = ಮೊದಲಿನವುಗಳೆರಡು। ಪ್ರಯತ್ನ = ಯತ್ನಿಸುವುದರಿಂದ। ಜಟಿಲಂ = ತೊಡಕಾದದ್ದು। ಪರಂ = ಪೃಥಕ್ಕಾದ। ತದಪಿ = ಅದಾದರೂ। ಕೇಳಿ = ಲೀಲೆಗಳ। ನಿಘ್ನೈಃ = ಸ್ವಾಧೀನದಿಂದ। ಇದಂ = ಈ। ಜಗತ್ = ಪ್ರಪಂಚದ। ಜನನ = ಉತ್ಪತ್ತಿ। ಕರ್ಮಣಿ = ವ್ಯಾಪಾರದಲ್ಲಿ। ಬ್ರಹ್ಮಣಾ = ಚತುರಾನನನಿಂದ। ಪ್ರತಿನಿಧೀಯತೇ = ಅಧಿಕರಿಸಲ್ಪಡುತ್ತದೆ।

ತಾತ್ಪರ್ಯ :— ಕುಂಬಾರನ ಕರಣ ಕರ್ತೃತ್ವದಿಂದ ಘಟವೂ, ವಿಶ್ವಕರ್ಮನ ಸಂಕಲ್ಪ ಕರ್ತೃತ್ವದಿಂದ ಸ್ವರ್ಗವೂ, ಸೂರ್ಯನ ಸನ್ನಿಧಾನ ಕರ್ತೃತ್ವದಿಂದ ಜಗಜ್ಜನರ ವ್ಯವಹಾರವೂ, ಉಂಟಾಗುತ್ತದೆ ಆದರೆ ಮೂರು ಕರ್ತೃತ್ವಗಳಲ್ಲಿ ಪರಮಾತ್ಮನಿಗೆ ಕರಣ ಸಂಕಲ್ಪವೆಂಬೆರಡು ಕರ್ತೃತ್ವಗಳನ್ನು ಅಂಟಿಸಿದರೆ ಜಟಿಲವಾಗುತ್ತದೆ (ತೊಂದರೆ ಯಾಗುತ್ತದೆ) ಆದ್ದರಿಂದ ಸನ್ನಿಧಾನ ಕರ್ತೃತ್ವ

---

* ಜಗಣ, ಸಗಣ, ಜಗಣ, ಸಗಣ ಯಗಣ, ಒಂದು ಲಘು ಒಂದು ಗುರು ಪ್ರತಿಯೊಂದು ಚರಣದಲ್ಲಿಯೂ ಹನ್ನೊಂದನೇ ಅಕ್ಷರಕ್ಕೆ ಯತಿಯಿದ್ದರಾದರೆ ಪೃಥ್ವೀ ವೃತ್ತ ವಾಗುತ್ತದೆ.

ವನ್ನೇ ಸ್ವೀಕರಿಸಬೇಕು. ಆ ಸನ್ನಿಧಾನ ಕರ್ತೃತ್ವದಲ್ಲಿಯಾದರೂ ಪರಮಾತ್ಮನು ಲೀಲಾಜಾಲದಿಂದ ಜಗಜ್ಜಾಲವನ್ನು ಸೃಷ್ಟಿಸುತ್ತಾನೆಂದು ತಿಳಿಯಬೇಕು.

**ವಿಶೇಷಾರ್ಥ** :— ಕುಂಬಾರನು ಶರೀರಾದ್ಯವಯವಗಳಿಂದ ಕುಂಭಾದಿದಿಗಳನ್ನು ತಯಾರಿಸುತ್ತಾನೆ, ಆ ಕುಂಭಾದಿಗಳಿಗೆ ಆ ಕುಂಬಾರನು ಕರಣ ಕರ್ತೃವಾಗುತ್ತಾನೆ ಜಗತ್ಕರ್ತೃವಾದ ಪರಮಾತ್ಮನಲ್ಲಿ ಕರಣಕರ್ತೃತ್ವವನ್ನು ಹೇಳಿದರೆ ಪರಮಾತ್ಮನಿಗೆ ಶರೀರಾದ್ಯವಯವಗಳನ್ನು ಒಪ್ಪಿಕೊಳ್ಳಬೇಕಾಗುತ್ತದೆ, ಹಾಗೆ ಒಪ್ಪಿಕೊಂಡರೆ ಶರೀರಾದ್ಯವಯವಗಳಿಂದ ಕೂಡಿದ ಕುಂಬಾರನಿಗೆ ಮರಣಾದ್ಯನರ್ಥಗಳು ಸಂಭವಿಸುವಂತೆ ಪರಮಾತ್ಮನಿಗೂ ಮರಣಾದ್ಯನರ್ಥಗಳು ಸಂಭವಿಸುತ್ತವೆಂದು ಹೇಳಬೇಕಾಗುತ್ತದೆ ಮರಣಾದ್ಯನರ್ಥಗಳಿಂದ ಕೂಡಿದವನು ಪರಮಾತ್ಮನಾಗುವದೆಂತು? ಆದ್ದರಿಂದ ಜಗತ್ಕರ್ತೃ ವಿಷಯದಲ್ಲಿ ಪರಮಾತ್ಮನಿಗೆ ಕರಣ ಕರ್ತೃತ್ವವನ್ನು ಹೇಳಬಾರದು. ಪರಮಾತ್ಮನು "ನಿರವಯ ನಿಷ್ಕ್ರಿಯ" ನೆಂದು ಶ್ರುತಿಗಳು ಹೇಳುವುದರಿಂದ ಕರಣಕರ್ತೃತ್ವವನ್ನು ಹೇಳಬಾರದು. ದೇವಶಿಲ್ಪಿಯಾದ ವಿಶ್ವಕರ್ಮನ ಸಂಕಲ್ಪದಿಂದ ಸ್ವರ್ಗವು ತಯಾರಾಗಿರುತ್ತದೆ. ಆ ದೇವ ಶಿಲ್ಪಿಯಂತೆ ಸಂಕಲ್ಪ ಕರ್ತೃತ್ವವನ್ನು ಪರಮಾತ್ಮನಿಗೆ ಹೇಳಿದರೆ ಪರಮಾತ್ಮನು ನಿತ್ಯನಾದ್ದರಿಂದ ಅವನಸಂಕಲ್ಪವು ಸದಾ ಇರಬೇಕಾಗುತ್ತದೆ. ಇದನ್ನೊಪ್ಪಿದರೆ ಸದಾ ಸಂಕಲ್ಪರೂಪ ಚಿಂತೆಯು ಪರಮಾತ್ಮನ ಶರಗಿಗೆ ಗಂಟುಹಾಕ ಬೇಕಾಗುತ್ತದೆ. ಆದ್ದರಿಂದ ಸಂಕಲ್ಪ ಕರ್ತೃತ್ವವನ್ನು ಹೇಳಬಾರದು ಕೆಲವು ಶ್ರುತಿಗಳು "ತದೈಕ್ಷತ" "ಪರಮಾತ್ಮನು ಸಂಕಲ್ಪಿಸಿದನು" ಎಂದು ಹೇಳುತ್ತವೆ. ಈ ಹೇಳಿಕೆಯು ಮಂದ ಪ್ರಜ್ಞರನ್ನುದ್ದೇಶಿಸಿ ಹೇಳಿದಮಾತುಗಳಾಗಲಿ ಯಥಾರ್ಥವಾದುದಲ್ಲ ಇನ್ನು ಸೂರ್ಯನ ಸನ್ನಿಧಾನದಲ್ಲಿ ಜಗಜ್ಜನರ ನಾನಾ ವ್ಯವಹಾರಗಳು ಜರುಗುತ್ತವೆ. ಜಗಜ್ಜನರ ವ್ಯವಹಾರಗಳನ್ನು ಜರುಗಿಸುವುದಕ್ಕೆ ಸೂರ್ಯನು ಸನ್ನಿಧಾನ ಕರ್ತೃವಾಗಿರುತ್ತಾನೆ. ಯತ್ನೇಚ್ಛೆಗಳಿಲ್ಲದೆ ತನ್ನ ಸನ್ನಿಧಿಯಲ್ಲಿ ಕಾರ್ಯಗಳು ಜರುಗುವುದಾದರೆ ಅದಕ್ಕೆ ಸನ್ನಿಧಾನ ಕರ್ತೃತ್ವ ವೆನ್ನುತ್ತಾರೆ. ಜಗತ್ಕರ್ತೃತ್ವವಿಷಯದಲ್ಲಿ ಪರಮಾತ್ಮನಿಗೆ ಸನ್ನಿಧಾನ ಕರ್ತೃತ್ವ ವನ್ನೇ ಹೇಳಬೇಕು.

## ವಾರ್ಧಿಕ ಷಟ್ಪದಿ

ಘಟಕಾರಕನು ತನ್ನ ಕರಣ ಕರ್ತೃತ್ವದಿಂ।
ಘಟವನ್ನು ಮೇಣ್ವಿಶ್ವ ಕರ್ಮನುರೆಸಂಕಲ್ಪ।
ಚಟುವಟಿಕೆಯಿಂ ಸ್ವರ್ಗವನ್ನು ಮೇಣ್ ಸೂರ್ಯತಾಂ ಸನ್ನಿಧಾನದ ರೂಪದಿಂ॥

ಚಟುಲ ಜನ ವ್ಯವಹಾರವನ್ನು ಜರುಗಿಸುವಂತೆ ।
ಘಟಿಸುವುದು ಬ್ರಹ್ಮನಿಂ ಜಗವೆಂಬವಾತಿನಲಿ ।
ಜಟಿಲ ಮುಪ್ಪವು ಮೊದಲಿನೆರಡುಃ ಕರ್ತೃತ್ವಗಳು ಕೊನೆಯದೇ ಸಿದ್ಧಮಹುದು॥ ೧೫ ॥

**ಅವತಾರಿಕೆ** :— ಜಗತ್ಕರ್ತೃತ್ವ ವಿಷಯದಲ್ಲಿ ಪರಮಾತ್ಮನು ಸನ್ನಿಧಾನ ಕರ್ತೃವಾಗಿದ್ದಾನೆಂದು ಹೇಳಿದಂತಾಯಿತು. ಆದರೆ ಸೂರ್ಯನು ಜಗಜ್ಜನರ ವ್ಯವಹಾರಕ್ಕೆ ಭಿನ್ನನಾಗಿದ್ದು, ಸನ್ನಿಧಾನ ಕರ್ತೃವಾಗಿರುತ್ತಾನೆ. ಇದರಂತೆ ಪರಮಾತ್ಮನು ಜಗತ್ತಿಗೆ ಭಿನ್ನನಾಗಿದ್ದು ಸನ್ನಿಧಾನ ಕರ್ತೃವಾಗಿರುತ್ತಾನೆಂದು ಹೇಳಬೇಕಾಗುತ್ತದೆ. ಇದನ್ನೊಪ್ಪಲು ಮೊದಲು ಪರಮಾತ್ಮನು ಜಗತ್ತಿಗೆ ಅಭಿನ್ನನಾಗಿದ್ದಾನೆಂದು ಹೇಳಿದ್ದಾಗಿದೆ. ಮತ್ತು ನಿಮಿತ್ತ ಉಪಾದಾನ ಕಾರಣಗಳು ಆ ಪರಮಾತ್ಮನಲ್ಲಿಯೇ ಉಂಟೆಂದು ಹೇಳಿದ್ದಾಗಿದೆ. ಈಗ ಸೂರ್ಯನ ಉದಾಹರಣೆಯನ್ನು ಕೊಟ್ಟು ಸನ್ನಿಧಾನ ಕರ್ತೃತ್ವವನ್ನು ಹೇಳಿದ್ದು ಸಮಂಜಸ ವಾಗುವುದೇ ? ಸೂರ್ಯನು ಜಗಜ್ಜನರ ವ್ಯವಹಾರಕ್ಕೆ ಭಿನ್ನನಿದ್ದಂತೆ, ಆ ಪರಮಾತ್ಮನು ಜಗತ್ತಿಗೆ ಭಿನ್ನನೆಂಬುದೇಕಾಗದು ? ಮತ್ತು ಯಾವುದಾದರೊಂದು ಕಾರ್ಯೋತ್ಪತ್ತಿಯಾಗಿರಲು ಆ ಕಾರ್ಯವು ವಿಕಾರಹೊಂದಿ ನಶಿಸುವುದು ಸಹಜವಲ್ಲವೇ ? ಉತ್ಪತ್ತಿಯಾದ ಕಾರ್ಯವು ವಿಕಾರಹೊಂದಿ ನಾಶವಾದಾಗ, ಅದರ ಉಪಾದಾನಕಾರಣವೂ ವಿಕಾರಹೊಂದಿ ನಾಶವಾಗುವುದು ಪ್ರತ್ಯಕ್ಷಾನುಭವವಾಗಿದೆಯಲ್ಲವೆ ? ಆದ್ದರಿಂದ ಪರಮಾತ್ಮನು ಜಗದಭಿನ್ನ ಸನ್ನಿಧಾನ ಕರ್ತೃವಾಗುವುದೆಂತು? ಎಂಬ ಪ್ರಶ್ನೆಗಳಿಗೆ ಅಧ್ಯಾಸರೂಪವಾದ ಸರ್ಪರೂಪ ಕಾರ್ಯಕ್ಕೆ ಅಭಿನ್ನ ಸನ್ನಿಧಾನ ಕರ್ತೃತ್ವವು ಅವಿಕಾರಿತ್ವದೊಡನೆ ರಜ್ಜುವಿನಲ್ಲಿ ಸಂಭವಿಸುವುದೆಂಬ ಉತ್ತರವನ್ನು ಮುಂದಿನ ಶ್ಲೋಕದಲ್ಲಿ ಸೂಚಿಸುತ್ತಾರೆ.

## * ಶೇಷವೃತ್ತ.

ರಥಸ್ಯೇಂಧನಂ ಭೂರಿ ಭೂತಂ ಪ್ರವಿದಂ ।
ಘಟಿಸ್ಯಾತ್ಸಮಾಧಾಯ ವೈಕಾರ್ಯತಃ ।
ಉಪಾದಾನವಿನಾಶಂ ಪ್ರಪಂಚಸ್ಯತಂ ।
ಗುಣಂ ಸರ್ಪಭಾತೇ ರಿವಾಹುರ್ಬುಧಾಃ ॥

---

* ಪ್ರತಿಯೊಂದು ಚರಣದಲ್ಲಿ ಮೂರು ಯಗಣಗಳೂ, ಒಂದು ಲಘು, ಒಂದು ಗುರು ಇದ್ದು ಏಳನೇ ಅಕ್ಷರಕ್ಕೆ ಯತಿಯಿದ್ದುದಾದರೆ ಶೇಷವೃತ್ತವಾಗುತ್ತದೆ.

**ಪದಚ್ಛೇದ ;-** ರಥಸ್ಯ, ಇಂಧನಂ, ಭೂರಿ, ಭೂತಂ, ಮೃದಂ, ಘಟಸ್ಯ, ಅಸಮಾಧಾಯ, ವೈಕಾರ್ಯತಃ, ಉಪಾದಾನಂ, ಈಶಂ, ಪ್ರಪಂಚಸ್ಯ, ತಂ, ಗುಣಂ, ಸರ್ಪಭಾತೇ, ಇವ, ಆಹುಃ, ಬುಧಾಃ,

**ಟೀಕ :—** ರಥಸ್ಯ = ತೇರಿಗೆ | ಭೂರಿಭೂತಂ= ಅಧಿಕವಾದ | ಶ್ರೇಷ್ಠವಾದ | ಇಂಧನಂ = ಕಟ್ಟಿಗೆಯನ್ನು | ಘಟಸ್ಯ = ಕೊಡಕ್ಕೆ | ಮೃದಂ = ಮಣ್ಣನ್ನು | ಬುಧಾಃ = ಪಂಡಿತರು | ವೈಕಾರ್ಯತಃ = ವಿಕಾರತ್ವದ ದೆಶೆಯಿಂದ | ಅಸಮಾಧಾಯ = ಒಪ್ಪಿಕೊಳ್ಳದೆ | ಸರ್ಪಭಾತೇಃ = ಹಾವಿನತೋರ್ಕೆಗೆ | ಗುಣಂ = ಹಗ್ಗವನ್ನು | ಇವ = ಉಪಾದಾನಕಾರಣವೆನ್ನುವಹಾಗೆ | ಪ್ರಪಂಚಸ್ಯ = ಜಗತ್ತಿಗೆ | ತಂ= ಆ | ಈಶಂ = ಪರಮಾತ್ಮನನ್ನು | ಉಸಾದಾನಂ = ಉಪಾದಾನ ಕಾರಣನನ್ನಾಗಿ | ಆಹುಃ = ಹೇಳಿದರು |

**ತಾತ್ಪರ್ಯ :—** ರಥಕ್ಕೆ ಉಪಾದಾನಕಾರಣವು ಉತ್ತಮವಾದ ಕಾಷ್ಟಗಳು ಕೊಡಕ್ಕೆ ಉಪಾದಾನ ಕಾರಣವು ಮೃತ್ಪಿಂಡವು. ಆಗಿರುವುದುಂಟು. ಆದರೆ ಆ ಉಪಾದಾನ ಕಾರಣವು ವಿಕಾರವಾಗುವುದರ ದೆಶೆಯಿಂದ; ಪಂಡಿತರಾದ ಜ್ಞಾನಿಗಳು ಅಂತಹ ಉಪಾದಾನ ಕಾರಣಕ್ಕನುಮತಿಯನ್ನೀಯರು. ಸರ್ಪ ಪ್ರತೀತಿಗೆ ರಜ್ಜುವು ಉಪಾದಾನ ಕಾರಣವಾದಂತೆ, ಜಗತ್ಪ್ರತೀತಿಗೆ ಪರಮಾತ್ಮನು ಉಪಾದಾನ ಕಾರಣನಾಗಿರುತ್ತಾನೆಂದು ಆ ಜ್ಞಾನಿಗಳು ಹೇಳುವರು.

**ವಿಶೇಷಾರ್ಥ –** ರಥಕುಂಭಾದಿಗಳಿಗೆ ಉಪಾದಾನಕಾರಣವು ಕಾಷ್ಟ ಮೃತ್ತಿಕಾದಿಗಳಾಗಿದ್ದರೂ ಆ ಉಪಾದಾನ ಕಾರಣದಲ್ಲಿ ವಿಕಾರಿತ್ವವು ಸಂಭವಿಸುತ್ತದೆ. ಇವರಂತೆ ಪರಮಾತ್ಮನು ಜಗತ್ತಿಗುಪಾದಾನ ಕಾರಣನಾಗಿಲ್ಲ. ಹಾವಿನ ತೋರ್ಕೆಗೆ ಹಗ್ಗವು ಉಪಾದಾನ ಕಾರಣವಾಗಿದೆ. ತೋರಿದ ಹಾವು ನಾಶವಾದರೂ, ಆ ಹಗ್ಗಕ್ಕೆ ನಾಶವಿಲ್ಲ. ಆ ಹಗ್ಗವು ಯಾವವಿಕಾರವನ್ನೂ ಹೊಂದುವುದಿಲ್ಲ. ಮತ್ತು ಆ ಹಗ್ಗವು ಆ ಹಾವಿಗೆ ಸನ್ನಿಧಾನ ಕರ್ತೃವೂ ಆಗಿದೆ. ಸನ್ನಿಧಾನ ಕರ್ತೃವಾಗಿದ್ದರೂ, ತೋರಿದ ಹಾವಿಗೆ ಅಭಿನ್ನರೂಪವಾಗಿದೆ. ಸೂರ್ಯನಂತೆ ಭಿನ್ನರೂಪವಿರುವುದಿಲ್ಲ. ಅಂದರೆ ರಜ್ಜುವಿನಲ್ಲಿ ಸರ್ಪಾಧ್ಯಾಸವಾದಂತೆ ಪರಮಾತ್ಮನಲ್ಲಿ ಜಗತ್ತು ಅಧ್ಯಾಸವಾಗಿದೆ. ಅಧ್ಯಾಸವಾದ ವಸ್ತುವು ಅಧಿಷ್ಠಾನವಸ್ತುವಿಗೆ ಪೃಥಕ್ಕಾಗಿ ತೋರುವುದಿಲ್ಲ. ಮತ್ತು ಅಧ್ಯಾಸವಸ್ತುವಿಗೆ ಅಧಿಷ್ಠಾನವು ಅಭಿನ್ನ ಸನ್ನಿಧಾನ ಕರ್ತೃತ್ವದಿಂದಿರುತ್ತದೆ. ಮತ್ತು ಅಧಿಷ್ಠಾನವು ಅಧ್ಯಾಸವಸ್ತುವಿಗೆ ಉಪಾದಾನ ಕಾರಣವೂ ಆಗಿರುತ್ತದೆ. ಅಧ್ಯಾಸವಸ್ತುವಿಗೆ ವಿಕಾರತ್ವವು ಸಂಭವಿಸಿದರೂ ಉಪಾದಾನ

ಕಾರಣವಾದ ಅಧಿಷ್ಠಾನವು ಯಾವವಿಕಾರವನ್ನು ಹೊಂದುವುದಿಲ್ಲ. ಆದ್ದರಿಂದ ಜ್ಞಾನಿಗಳು ರಥಕ್ಕೆ ಕಟ್ಟಿಗೆಯೂ, ಕುಂಭಕ್ಕೆ ಮೃತ್ಪಿಂಡವೂ ಉಪಾದಾನ ಕಾರಣ ವಾದಂತೆ ಪರಮಾತ್ಮನು ಜಗತ್ತಿಗುಪಾದಾನ ಕಾರಣನಾಗುವುದಿಲ್ಲ ಅಧ್ಯಾಸ ಸರ್ಪಕ್ಕೆ ರಜ್ಜುವು ಉಪಾದಾನಕಾರಣವಾದಂತೆ ಅಧ್ಯಾಸರೂಪ ಜಗತ್ತಿಗೆ ಪರಮಾತ್ಮನು ಉಪಾದಾನ ಕಾರಣನಾಗಿದ್ದಾನೆಂದು ಹೇಳುತ್ತಾರೆ ಅಧ್ಯಾಸಭಾಗವು ಶಾಸ್ತ್ರದಲ್ಲಿ ಅರಿಯಲು ಕಠಿಣಪ್ರಸಂಗವಾಗಿದ್ದರೂ. ಅಲ್ಲದರಲ್ಲಿ ಅಹುದಾದ ಬುದ್ಧಿಯನ್ನು ಮಾಡುವುದೇ ಅಧ್ಯಾಸವೆಂದು ಸುಲಭವಾಗಿ ತಿಳಿದುಕೊಳ್ಳಬಹುದು. "ಪರತ್ರಪರಾವಭಾಸಃ ಅಧ್ಯಾಸಃ" ಅನ್ಯದರಲ್ಲಿ ಅನ್ಯಬುದ್ಧಿಯಂ ಮಾಡುವುದೇ ಅಧ್ಯಾಸವು. ಈ ಅಧ್ಯಾಸ ಲಕ್ಷಣವು ಅರ್ಥಾಧ್ಯಾಸಕ್ಕೂ, ಜ್ಞಾನಾಧ್ಯಾಸಕ್ಕೂ, ಸರಿಹೋಗುತ್ತದೆ. ಆದ್ದರಿಂದ ಒಟ್ಟಿನಮೇಲೆ ಅಲ್ಲದರಲ್ಲಿ ಅಹುದಾದ ಬುದ್ಧಿಯೇ ಅಧ್ಯಾಸವೆಂದು ಇಷ್ಟು ತಿಳಿದರೆ ಅಧ್ಯಾಸಭಾಗವನ್ನೆಲ್ಲಾ ಸುಲಭವಾಗಿ ತಿಳಿದಂತಾಗುತ್ತದೆ. ಅಂತು ರಜ್ಜುವು ಅಧ್ಯಾಸ ಸರ್ಪಕ್ಕೆ ಸನ್ನಿಧಾನ ಕರ್ತೃತ್ವದಿಂದ ಅಭಿನ್ನ ನಿಮಿತ್ತೋಪಾದಾನ ಕಾರಣನಾಗಿರುವಂತೆ, ಪರಮಾತ್ಮನು ಜಗತ್ತಿಗೆ ಸನ್ನಿಧಾನ ಕರ್ತೃತ್ವದಿಂದ ಅಭಿನ್ನ ನಿಮಿತ್ತೋಪಾದಾನ ಕಾರಣನಾಗಿರುತ್ತಾನೆಂದು ಬಲ್ಲ ಜ್ಞಾನಿಗಳು ಹೇಳುತ್ತಾರೆ. ಎಂಬ ಭಾವವು.

## ಭಾಮಿನೀ ಷಟ್ಪದಿ.

ತೇರು ಮೇಣ್ ಕುಂಭಕ್ಕೆ ಕ್ರಮದಿಂ ।
ಕಾರಣವು ಕಾಷ್ಠಗಳು ಮೃತ್ತಿಕೆ ।
ಆರಯಲ್ ವೈಕಾರ್ಯವಪ್ಪುದರಿಂದ ಸೂರಿಗಳು ॥
ಸಾರುವರುಪಾದಾನ ವೀಶನು ।
ತೋರುವೀ ಜಗಕೆಂತೆನಲು ಫಣಿ ।
ತೋರಿತಾಭಾಸಾತ್ಮಕದಿ ನಿಜರಜ್ಜುದೇಶದಲಿ ॥ ॥ ೧೬ ॥

**ಅವತಾರಿಕೆ** — ಪರಮಾತ್ಮನು ಜಗತ್ತಿಗೆ ಸನ್ನಿಧಾನ ಕರ್ತೃತ್ವದಿಂದ ಅಭಿನ್ನನಿಮಿತ್ತೋಪಾದಾನ ಕಾರಣನಾಗಿರುತ್ತಾನೆಂದು ರಜ್ಜುವಿನಲ್ಲಿ ಸರ್ಪವು ಪ್ರಾತಿಭಾಸಿಕರೂಪದಿಂದ ತೋರುವುದೆಂದು ಹೇಳಿದ್ದು ಒಪ್ಪುವಮಾತಲ್ಲ. ಏಕೆಂದರೆ ಪ್ರಾತಿಭಾಸಿಕ ಸತ್ತೆಯಿಂದ ಇರುವ ವಸ್ತುವು ಅಧಿಷ್ಠಾನ ಜ್ಞಾನವಾದರೆ ನಿವೃತ್ತಿಯಾಗುತ್ತದೆ. ಇದರಂತೆ ಪಾರಮಾರ್ಥಿಕ ಸತ್ತಾರೂಪವಾದ ಪರಮಾತ್ಮನ ಜ್ಞಾನವಾದ ಕೂಡಲೆ ಪ್ರಾತಿಭಾಸಿಕರೂಪವಾದ ಜಗತ್ತು ನಿವೃತ್ತಿಯಾಗಬೇಕು ಹಾಗೆ ನಿವೃತ್ತಿ

ಯಾಗದೆ ವ್ಯಾವಹಾರಿಕ ಸತ್ತಾರೂಪವಾಗಿ ಜಗತ್ತು ಇದ್ದೇ ಇದೆ. ವ್ಯಾವಹಾರಿಕ ಸತ್ತಾರೂಪವಾಗಿ ಜಗತ್ತು ಇರುವುದರಿಂದ ಪ್ರಾತಿಭಾಸಿಕ ಸತ್ತೆಯೆಂದು ಹೇಳ ಬಹುದೆ ? ಒಂದು ಪಕ್ಷ ಜಗತ್ತು ಪ್ರಾತಿಭಾಸಿಕ ಸತ್ತೆಯಿಂದರುವುದೆಂದು ಹೇಳುವು ದಾದರೆ ಘಟಪಟಾದಿ ವ್ಯವಹಾರಗಳು ಜರುಗಲೇಬಾರದು. ಕೊಡು ಕೊಳ್ಳುವ ವ್ಯವ ಹಾರವು ಪ್ರತ್ಯಕ್ಷಾನುಭವ ( ಲೋಕಾನುಭವ ) ದಲ್ಲಿರುವುದದಿಂದಜಗತ್ಪ್ರತೀತಿಯು ಪ್ರಾತಿಭಾಸಿಕ ಸತ್ತೆಯೆಂಬುದೆಂತು ? ಪ್ರಪಂಚದಲ್ಲಿ ಜಗತ್ಪದಾರ್ಥಗಳನ್ನು ಪ್ರಾತಿ ಭಾಸಿಕ ಸತ್ತೆಯೆಂದು ಅರಿತವರಾರಾದರೂ ಉಂಟೇ ? ಉಂಟಾದರೆ ಅವರಿಗೇನೆನ್ನ ಬೇಕು ? ಎಂಬ ಪ್ರಶ್ನೆಗಳಿಗೆ ವ್ಯಾವಹಾರಿಕ ಸತ್ತೆಯನ್ನು ಪ್ರಾತಿಭಾಸಿಕ ಸತ್ತೆಯೆಂದು ಅರಿಯುವುದು ಯೋಗ್ಯವೆಂತಲೂ, ಹಾಗೆ ಅರಿತುಕೊಂಡವರುಂಟೆಂತಲೂ, ಅವರಿಗೆ ಬ್ರಹ್ಮವಿದ್ವರರೆಂದೆನ್ನಬೇಕೆಂತಲೂ, ಮುಂದಿನ ಶ್ಲೋಕದಲ್ಲಿ ಸೂಚಿಸುತ್ತಾರೆ.

## ಅನುಷ್ಟುಪ್ ಶ್ಲೋಕ.

**ಪಾರಮಾರ್ಥಿಕ ಸತ್ತಾಯಾಂ । ಸತ್ತಾಂಯಾಂ ವ್ಯಾವಹಾರಿಕಾಂ ।**
**ಪ್ರಾತಿಭಾಸಿಕ ಸತ್ತಾಂ ಯೋ । ವೇತ್ತಿಸಬ್ರಹ್ಮವಿದ್ವರಃ ॥ ॥ ೧೬ ॥**

**ಪದಚ್ಛೇದ** :- ಪಾರಮಾರ್ಥಿಕ, ಸತ್ತಾಯಾಂ, ಸತ್ತಾಂ, ಯಾಂ, ವ್ಯಾವ ಹಾರಿಕಾಂ, ಪ್ರಾತಿಭಾಸಿಕ, ಸತ್ತಾಂ, ಯಃ, ವೇತ್ತಿ, ಸಃ, ಬ್ರಹ್ಮವಿತ್, ವರಃ

**ಟೀಕ** :- ಪಾರಮಾರ್ಥಿಕ ಸತ್ತಾಯಾಂ = ಬ್ರಹ್ಮಸತ್ತೆಯಲ್ಲಿ । ಯಾಂ = ಯಾವ । ವ್ಯಾವಹಾರಿಕಾಂ = ಘಟಪಟಾದಿ ಜಗದ್ರೂಪವಾದ । ಸತ್ತಾಂ = ಸತ್ತೆಯ ನ್ನು । ಯಃ = ಯಾವನು । ಪ್ರಾತಿಭಾಸಿಕ ಸತ್ತಾಂ = ಪ್ರತೀತೋಕ್ಕೆಮಾತ್ರವಾದ ಸತ್ತೆಯನ್ನಾಗಿ । ವೇತ್ತಿ = ಅರಿಯುವನೋ । ಸಃ = ಅವನು । ಬ್ರಹ್ಮವಿತ್ = ಬ್ರಹ್ಮಜ್ಞಾನಿಗಳಲ್ಲಿ । ವರಃ = ಶ್ರೇಷ್ಠನು.

**ತಾತ್ಪರ್ಯ** ;- ಪರಮಾತ್ಮ ಸ್ವರೂಪವಾದ ಪಾರಮಾರ್ಥಿಕ ಸತ್ತೆಯಲ್ಲಿ ಘಟಪಟಾದಿ ಪ್ರಪಂಚರೂಪವಾದ ವ್ಯಾವಹಾರಿಕ ಸತ್ತೆಯನ್ನು ಭ್ರಾಂತಿರೂಪವಾದ ಪ್ರಾತಿಭಾಸಿಕ ಸತ್ತೆಯಂತೆ ಯಾವಾತನು ತಿಳಿಯುವನೋ ಆತನು ಬ್ರಹ್ಮವೇತ್ತರಲ್ಲಿ ಶ್ರೇಷ್ಠನು.

**ವಿಶೇಷಾರ್ಥ** :— ಪಾರಮಾರ್ಥಿಕ, ವ್ಯಾವಹಾರಿಕ ಪ್ರಾತಿಭಾಸಿಕ, ಗಳೆಂಬ ಸತ್ತಾತ್ರಯಗಳುಂಟು ಇವುಗಳಲ್ಲಿ ಭೂತಭವಿಷ್ಯದ್ವರ್ತಮಾನಗಳೆಂಬ, ಕಾಲತ್ರಯ

ಗಳಲ್ಲಿ ಕೆಡದೆ ಅಸ್ತಿತ್ವರೂಪದಿಂದ ಯಾವುದಿರುವುದೋ ಅದು (ಬ್ರಹ್ಮವು) ಪಾರಮಾರ್ಥಿಕ ಸತ್ತೆಯಾಗಿರುತ್ತದೆ. ಘಟಪಟಾದಿ ವ್ಯವಹಾರರೂಪವಾದ ಪ್ರಪಂಚವು ವ್ಯಾವಹಾರಿಕ ಸತ್ತೆಯಾಗಿರುತ್ತದೆ. ರಜ್ಜುವಿನಲ್ಲಿ ಸರ್ಪವೂ, ಶುಕ್ತಿಯಲ್ಲಿ ರಜತವೂ ಸ್ಥಾಣುವಿನಲ್ಲಿ ಚೋರನೂ, ಇರುವಹಾಗೆ ಭಾವಿಸಿಕೊಳ್ಳುವುದೇ ಪ್ರಾತಿಭಾಸಿಕ ಸತ್ತೆಯಾಗಿರುತ್ತದೆ. ಈ ಸತ್ತಾತ್ರಯಗಳಲ್ಲಿ ಪಾರಮಾರ್ಥಿಕ ಸತ್ತೆಯೊಂದೇ ಯಥಾರ್ಥವಾದುದು. ಉಳಿದೆರಡು ಸತ್ತೆಗಳು ಮಿಥ್ಯವಾದವುಗಳು. ಈ ಪ್ರಪಂಚರೂಪವಾದ ವ್ಯಾವಹಾರಿಕ ಸತ್ತೆಯನ್ನು ಭ್ರಾಮಕರೂಪವಾದ ಪ್ರಾತಿಭಾಸಿಕ ಸತ್ತೆಯೆಂದು ಅರಿಯುವುದೇ ಯಥಾರ್ಥವಾದ ತಿಳುವಳಿಕೆಯು. ಏಕೆಂದರೆ ವ್ಯಾವಹಾರಿಕ ಸತ್ತೆಯು ಪ್ರಾತಿಭಾಸಿಕ ಸತ್ತೆಯಲ್ಲಿ ಅಂತರ್ಭವಿಸುತ್ತದೆ. ನಾಮರೂಪಾತ್ಮಕವಾದ ಪ್ರಪಂಚವು ರಜ್ಜುಸರ್ಪ ನ್ಯಾಯದಂತೆ ಅಧ್ಯಾಸವೆಂದು ( ಪ್ರಾತಿಭಾಸಿಕ ಸತ್ತೆಯೆಂದು ) ಹೇಳುವಾಗ ವ್ಯಾವಹಾರಿಕ ಸತ್ತೆಗೆ ಇರುವಿಕೆಯು ಮತ್ತೆಲ್ಲಿದೆ ? ಅಂದರೆ ಪಾರಮಾರ್ಥಿಕ ಸತ್ತೆಯಲ್ಲಿ ಕಲ್ಪಿತವಾದ ವ್ಯಾವಹಾರಿಕ ಸತ್ತೆಯು ಪ್ರಾತಿಭಾಸಿಕ ಸತ್ತೆಗೆ ಬೇರೆಯಾಗಿರುವುದಿಲ್ಲ. ವ್ಯಾವಹಾರಿಕ ಸತ್ತೆಯೆಂಬುದು ಬರೀ ವಾಚಮಾತ್ರವಲ್ಲದೆ ಅದೊಂದು ಪ್ರತ್ಯೇಕವಾದ ಸತ್ತೆನಿಸದು ಯಥಾರ್ಥವಾದ ಪಾರಮಾರ್ಥಿಕ ಸತ್ತೆಯಲ್ಲಿ ಪ್ರಪಂಚವು ಅಧ್ಯಾಸವಾಗಿರುವುದೆಂದೊಡಂಬಟ್ಟಮೇಲೆ ಅಧ್ಯಾಸವೆಂದರೂ ಪ್ರಾತಿಭಾಸಿಕವೆಂದರೂ ಒಂದೇ ಆದುದರಿಂದ ವ್ಯಾವಹಾರಿಕ ಸತ್ತೆಯು ಪ್ರಾತಿಭಾಸಿಕ ಸತ್ತೆಗೆ ಬೇರೆ ಇರುವುದಿಲ್ಲ ಇಲ್ಲಿ ರಜ್ಜುವಿನ ಜ್ಞಾನವಾದಾಗ ಸರ್ಪದ ತೋರ್ಕೆಯಳಿವಂತೆ ಅಧಿಷ್ಠಾನರೂಪವಾದ ಪಾರಮಾರ್ಥಿಕ ಸತ್ತೆಯ ಜ್ಞಾನವಾದಮೇಲೆ ಅಧ್ಯಾಸರೂಪವಾದ ವ್ಯಾವಹಾರಿಕ ಸತ್ತೆಯ ತೋರ್ಕೆಯು ಇರಬಾರದಾಗಿತ್ತು ಹಾಗಲ್ಲದೆ ಕೊಡು ಕೊಳ್ಳುವ ವ್ಯವಹಾರದ ತೋರ್ಕೆಯು ಪಾರಮಾರ್ಥಿಕ ಸತ್ತೆಯನ್ನರಿತ ಜ್ಞಾನಿಗಳಲ್ಲಿಸಹಾ ಇರುವುದರಿಂದ ವ್ಯಾವಹಾರಿಕ ಸತ್ತೆಯನ್ನು ಅಧ್ಯಾಸರೂಪವಾದ ಪ್ರಾತಿಭಾಸಿಕ ಸತ್ತೆಯೆಂದು ಹೇಳಬಹುದೆ ? ಎಂಬೀಪ್ರಶ್ನೆಯು ಅಧ್ಯಾಸದ ವಿಭಾಗವನ್ನರಿಯದ ಪ್ರಶ್ನೆಯಾಗಿದೆ. ಏಕೆಂದರೆ ಅಧ್ಯಾಸದಲ್ಲಿ ನಿರುಪಾಧಿಕ ಅಧ್ಯಾಸವೆಂತಲೂ, ಸೋಪಾಧಿಕ ಅಧ್ಯಾಸವೆಂತಲೂ ಎರಡುವಿಧ ಅಧಿಷ್ಠಾನದ ಜ್ಞಾನವಾದಕೂಡಲೆ ಅಧ್ಯಾಸವು ನಿವೃತ್ತಿಯಾದರೆ ಇದಕ್ಕೆ ನಿರುಪಾಧಿಕಾಧ್ಯಾಸವೆನ್ನಬೇಕು, ಅಧಿಷ್ಠಾನದ ಜ್ಞಾನವಾದರೂ ಅಧ್ಯಾಸವು ಮುನ್ನಿನಂತೆ ತೋರ್ಕೆಯಡಗದೆ ಇರುವುದಾವುದೋ ಅದು ಸೋಪಾಧಿಕಾಧ್ಯಾಸವೆನ್ನಬೇಕು. ಈ ನಿರುಪಾಧಿಕ, ಸೋಪಾಧಿಕ ವೆಂಬ ಅಧ್ಯಾಸಗಳಲ್ಲಿ ಬಾಹ್ಯಾಂತರೂಪದಿಂದ ಮತ್ತೆರಡು ವಿಧವಾಗಿರುವುದುಂಟು. ಅಧಿಷ್ಠಾನ ರೂಪವಾದ ರಜ್ಜುವಿನ ಜ್ಞಾನವಾದಕೂಡಲೆ, ಅಧ್ಯಾಸ ಸರ್ಪವು ನಿವೃತ್ತಿಯಾಗುತ್ತದೆ. ಇದು ಬಾಹ್ಯ ನಿರುಪಾಧಿಕ ಅಧ್ಯಾಸವಾ

ಗಿದೆ. ದರ್ಪಣದಲ್ಲಿ ತೋರುವ ಪ್ರತಿಬಿಂಬವು ಬಲವು ಎಡವಾಗಿಯೂ, ಎಡವು ಬಲವಾಗಿಯೂ, ಕಂಡರೂ ಬಲವು ಬಲವಾಗಿಯೇ ಎಡವು ಎಡವಾಗಿಯೇ ಇರುವುದು ಸಹಜವೆಂಬ ತನ್ನ ಮುಖರೂಪ ಅಧಿಷ್ಠಾನದ ಜ್ಞಾನವಾಗಿದ್ದರೂ ಉಪಾಧಿರೂಪವಾದ ದರ್ಪಣನಲ್ಲಿನ ಪ್ರತಿಬಿಂಬದ ತೋರ್ಕೆಯುಮಾತ್ರ ಮುನ್ನಿನಂತೆಯೇ ತೋರುವುದು ನಿಜ. ಇದು ಬಾಹ್ಯ ಸೋಪಾಧಿಕ ಅಧ್ಯಾಸವಾಗಿದೆ. ತತ್ತ್ವವೇತ್ತನಿಗೂ ಸಹ ಬಾಹ್ಯಸೋಪಾಧಿಕವು ಉಂಟು. ಅಹಂಕರ್ತಾ ಅಹಂಭೋಕ್ತಾ ಎಂಬ ಆತ್ಮನಲ್ಲಿ ಯಾವ ಕರ್ತೃತ್ವ ಬುದ್ಧಿಯಿರುವುದೋ ಅದು ಅಂತರಸೋಪಾಧಿಕಾಧ್ಯಾಸವಾಗಿದೆ ಇಲ್ಲಿ ಅಂತಃಕರಣವೇ ಉಪಾಧಿಯೆಂದರಿಯಬೇಕು. ಅಸಂಗ ನಿರ್ವಿಕಾರವಾದ ಆತ್ಮಸ್ವರೂಪದಲ್ಲಿಯೋ ಕರ್ತೃತ್ವ ಭೋಕ್ತೃತ್ವಗಳಿರುವುದಿಲ್ಲ. ಅಂತಃಕರಣದಲ್ಲಿರುವ ಕರ್ತೃತ್ವ ಭೋಕ್ತೃತ್ವಾದಿ ಧರ್ಮಗಳು ಆತ್ಮನಲ್ಲಿ ಆರೋಪಿಸಲ್ಪಟ್ಟವೆ ಆ ಉಪಾಧಿಯು ಇರುವವರೆಗೂ, ಅಧಿಷ್ಠಾನರೂಪ ಆತ್ಮಜ್ಞಾನವಾದರೂ ಕರ್ತೃತ್ವ ಭೋಕ್ತೃತ್ವಾದಿ ಧರ್ಮಗಳು ಬಾಧಿತಾನುವೃತ್ತಿಯಿಂದಿರುತ್ತವೆ. ಇದು ಅಂತರ ಸೋಪಾಧಿಕಾಧ್ಯಾಸವಾಗಿದೆ. ನಾನು ಅಜ್ಞನು ಬ್ರಹ್ಮವಸ್ತುವನ್ನರಿಯೆನು ಎಂಬುದಾವುದೋ ಅದು ಅಂತರ ನಿರುಪಾಧಿಕಾಧ್ಯಾಸವಾಗಿದೆ. ಈ ಅಧ್ಯಾಸವು ಬ್ರಹ್ಮಜ್ಞಾನವಾದಕೂಡಲೆ ರಜ್ಜುಜ್ಞಾನದಿಂದ ಸರ್ಪವು ನಿವೃತ್ತಿಯಾದಂತೆ, ನಿವೃತ್ತಿಯಾಗುತ್ತದೆ. ಆದ್ದರಿಂ ದಸೋಪಾಧಿಕಾಧ್ಯಾಸದಿಂದ ಜ್ಞಾನಿಯಲ್ಲಿ ಕೊಡುಕೊಳ್ಳುವ ವ್ಯವಹಾರವು ನಡೆಯುತ್ತದೆ. ಅಂತು ಅಧ್ಯಾಸರೂಪವಾದ ವ್ಯಾವಹಾರಿಕ ಸತ್ತೆಯು ಪ್ರಾತಿಭಾಸಿಕ ಸತ್ತೆಗೆ ಬೇರೆಯಾಗಿರುವುದಿಲ್ಲ. ಅದ್ವೈತಶಾಸ್ತ್ರ ಸಿದ್ಧಾಂತದಲ್ಲಿ ಪಾರಮಾರ್ಥಿಕ ಪ್ರಾತಿಭಾಸಿಕ ಇವೆರಡು ಸತ್ತೆಗಳನ್ನುಮಾತ್ರ ಸ್ವೀಕರಿಸುವುದುಂಟು. ಇವೆರಡರಲ್ಲಿ ಪಾರಮಾರ್ಥಿಕ ಸತ್ತೆಯೇ ಯಥಾರ್ಥವಾದುದು ಪ್ರಾತಿಭಾಸಿಕ ಸತ್ತೆ ಭ್ರಾಂತಿಕ(ಮಿಥ್ಯಾರೂಪ ವಾದುದು. ಎಂದು ಕೊನೆಗೆ ತೀರ್ಮಾನಮಾಡಲ್ಪಟ್ಟದೆ. ಆದ್ದರಿಂದ ವ್ಯಾವಹಾರಿಕ ಸತ್ತೆಯನ್ನು ಪ್ರಾತಿಭಾಸಿಕವೆಂದು ತಿಳಿಯುವ ಪ್ರಾಜ್ಞನು ಉಂಟು ಆ ಪ್ರಾಜ್ಞನಿಗೆ ಬ್ರಹ್ಮವಿದ್ವರನೆಂಬ ಹೆಸರು.

### ಭಾಮಿನೀ ಷಟ್ಪದಿ.

ಮೂರು ಸತ್ತೆಗಳುಂಟು ತಿಳಿಯಲ್ |
ಪಾರಮಾರ್ಥಿಕ ವ್ಯಾವಹಾರಿಕ |
ಸಾರವಿಲ್ಲದ ಪ್ರಾತಿಭಾಸಿಕ ವಿದರೊಳೊಂದನೆಯು ||
ಪಾರಮಾರ್ಥಿಕ ಸತ್ತೆಯೆಂಬುದು |
ಸಾರವಾದುದು ಬಳಿಕೆರಡು ನಿ |
ಸ್ಸಾರವೆಂದರಿದಾತ್ಮನೇ ಸದ್ಬ್ರಹ್ಮವಿದ್ವರನು || ॥ ೧೭ ॥

ಅವತಾರಿಕೆ ;— ಪಾರಮಾರ್ಥಿಕ ಸತ್ತಾತ್ರಯಗಳಲ್ಲಿ ವ್ಯಾವಹಾರಿಕಸತ್ತೆಯು ಪ್ರಾತಿಭಾಸಿಕ ಸತ್ತೆಯೆಂತಲೇ ಜ್ಞಾನಿಗಳು ತಿಳಿಯುತ್ತಾರೆಂಬುದು ಸಿದ್ಧಮಾಡಿದಿರಿ. ಆದರೆ ಪ್ರಾತಿಭಾಸಿಕೆಯು (ತೋರ್ಕೆಯ ಜಗತ್ತು) ಅಯಥಾರ್ಥವೆಂದಂತಾಯಿತು. ಅಯಥಾರ್ಥವೆಂದರೂ, ಮಿಥ್ಯೆಯೆಂದರೂ ಪ್ರಾತಿಭಾಸಿಕವೆಂದರೂ ಅಭಾವವೆಂದರೂ ಒಂದೇ ಇಲ್ಲಿ ತಮ್ಮ ಹೇಳಿಕೆಯಿಂದ ಪಾರಮಾರ್ಥಿಕ ಸತ್ತೆಯಾದ ಪರಮಾತ್ಮನಲ್ಲಿ ಜಗತ್ತು ಅಭಾವರೂಪವಾದುದೆಂದು ತಿಳಿಯಬೇಕಾಯಿತು. ಅಭಾವ ಚತುಷ್ಟಯಗಳಲ್ಲಿ ಜಗತ್ತು ಪ್ರಾಕ್ಭಾವರೂಪವಾಗಿದೆಯೋ ? ಅಥವ ಪ್ರಧ್ವಂಸಾಭಾವ ರೂಪವಾಗಿದೆಯೋ ? ಅನ್ಯೋನ್ಯಾಭಾವರೂಪವಾಗಿದೆಯೊ ? ಇಲ್ಲವೆ ಅತ್ಯಂತಾಭಾವರೂಪವಾಗಿದೆಯೊ ? ಎಂಬ ಪ್ರಶ್ನೆಗೆ ಪರಮಾತ್ಮನಲ್ಲಿ ಜಗತ್ತು ಅತ್ಯಂತಾಭಾವರೂಪವಾಗಿರುವುದೆಂಬ ಉತ್ತರವನ್ನು ಮುಂದಿನ ಶ್ಲೋಕದಲ್ಲಿ ಸೂಚಿಸುತ್ತಾರೆ.

## * ಶಾಲಿನೀ ವೃತ್ತ.

ಶ್ಲೋ॥ ಅದ್ವೈತಾಯಾಂ ಮೃದ್ಯಸತ್ವಾದ್ಘಟಸ್ಯ ।
ಪ್ರಾಙ್ಮುಖ್ಯಾಭಾವತ್ರಯೋ ಅಪಹ್ನುತೇಯಾಃ ॥
ಅತ್ಯಂತಾಭಾವೋ ವಶಿಷ್ಟಸ್ಸವಸ್ತು ।
ನ್ಯದ್ವೈತೇಸ್ಯಾದಸ್ಯ ವಿಶ್ವಸ್ಯಮಾನೇ ॥ ॥ ೧೪ ॥

ಪದಚ್ಛೇದ - ಅದ್ವೈತಾಯಾಂ, ಮೃದಿ, ಅಸತ್ವಾತ್, ಘಟಸ್ಯ, ಪ್ರಾಕ್, ಮುಖ್ಯ, ಅಭಾವ, ತ್ರಯಃ, ಅಪಹ್ನುತೇಯಾಃ, ಅತ್ಯಂತಾಭಾವಃ, ಅವಶಿಷ್ಟಃ, ವಸ್ತುನಿ, ಅದ್ವೈತೇ, ಸ್ಯಾತ್, ಅಸ್ಯ, ವಿಶ್ವಸ್ಯ, ಮಾನೇ,

ಟೀಕ :— ಅದ್ವೈತಾಯಾಂ = ಭಿನ್ನವಿಲ್ಲದ । ಮೃದಿ = ಮಣ್ಣಿನಲ್ಲಿ । ಅಸತ್ವಾತ್ = ಇಲ್ಲದಿರುವುದರ ದೆಶೆಯಿಂದ । ಘಟಸ್ಯ = ಕೊಡಕ್ಕೆ । ಪ್ರಾಕ್ = ಪ್ರಾಗಭಾವವೇ । ಮುಖ್ಯ = ಮುಂತಾದ । ಅಭಾವ = ಇಲ್ಲದ । ತ್ರಯಃ = ಮೂರು । ಅಪಹ್ನುತೇಯಾಃ = ಅಪಲಾಪವಾದವುಗಳು । ಅವಶಿಷ್ಟಃ = ಮಿಗಿಲಿದ । ಅತ್ಯಂತಾಭಾವಃ = ಅತ್ಯಂತಾಭಾವವು । ಮಾನೇ = ತಿಳಿಯಲಾಗಿ । ಅದ್ವೈತೇ = ಒಂದೇ ಒಂದಾದ । ವಸ್ತುನಿ = ಬ್ರಹ್ಮದಲ್ಲಿ । ಅಸ್ಯ = ಈ । ವಿಶ್ವಸ್ಯ = ಪ್ರಪಂಚದ । ಸಃ = ಆ ಅತ್ಯಂತಾಭಾವವು । ಸ್ಯಾತ್ = ಆಗುವುದು। (ಇರುವುದು)

* ಪ್ರತಿಯೊಂದು ಚರಣದಲ್ಲಿ ಮಗಣ ಎರಡು ತಗಣಗಳು ಎರಡು ಗುರುಗಳಿದ್ದು, ಆರನೇ ಅಕ್ಷರಕ್ಕೆ ಯತಿಯಿದ್ದುದಾದರೆ ಶಾಲಿನೀವೃತ್ತವಾಗುವುದು.

ತಾತ್ಪರ್ಯ :— ಭಿನ್ನವಿಲ್ಲದ ಮಣ್ಣಿನಲ್ಲಿ ಪ್ರಾಗ್ಭಾವ, ಪ್ರಧ್ವಂಸಾಭಾವ, ಅನ್ಯೋನ್ಯಾಭಾವಗಳೆಂಬ ಅಭಾವತ್ರಯಗಳು ಇಲ್ಲದ ಕಾರಣದಿಂದ, ಆ ಅಭಾವಗಳನ್ನು ಹೇಳುವುದು ಒಪ್ಪುವ ಮಾತಲ್ಲ. ಉಳಿದ ಅತ್ಯಂತಾಭಾವವನ್ನೇ ಸ್ವೀಕರಿಸುವುದುಯೋಗ್ಯ. ಇದರಂತೆ ಸಜಾತೀಯ, ವಿಜಾತೀಯಃ ಸ್ವಗತ ಭೇದಗಳಿಲ್ಲದ ಪಾರಮಾರ್ಥಿಕ ರೂಪವಾದ ಪರವಸ್ತುವಿನಲ್ಲಿ ಪ್ರಾತಿಭಾಸಿಕ ರೂಪವಾದ ಜಗತ್ತು ಅತ್ಯಂತಾಭಾವದಿಂದಿರುತ್ತದೆ.

ವಿಶೇಷಾರ್ಥ — ನೈಯ್ಯಾಯಿಕರು ಪ್ರಾಗಭಾವ, ಪ್ರಧ್ವಂಸಾಭಾವ, ಅನ್ಯೋನ್ಯಾಭಾವ, ಅತ್ಯಂತಾಭಾವಗಳೆಂಬ ಅಭಾವ ಚತುಷ್ಟಯಗಳನ್ನು ಅಂಗೀಕರಿಸಿರುತ್ತಾರೆ. ಹೇಗೆಂದರೆ ಮೃತ್ಪಿಂಡದಲ್ಲಿ ಘಟೋತ್ಪತ್ತಿಗೆ ಮೊದಲು, ಆ ಘಟದ ಅವಯವರೂಪ ಕಪಾಲಗಳಲ್ಲಿ " ಘಟೋಭವಿಷ್ಯತಿ " ಎಂಬ ಪ್ರತೀತಿಯಾಗುತ್ತದೆ. ಆ ಪ್ರತೀತಿಯಿಂದ ಆ ಕಪಾಲಗಳಲ್ಲಿ ಆ ಘಟದ ಪ್ರಾಗಭಾವವು ಸಿದ್ಧಿಸುತ್ತದೆ. ಮತ್ತು ಕೋಲು ಮುಂತಾದವುಗಳಿಂದ ಹೊಡೆದರೆ ಆ ಘಟವು ಭಗ್ನವಾದಾನಂತರ ಆ ಕಪಾಲಗಳಲ್ಲಿ " ಘಟೋಧ್ವಸ್ತಃ " ಎಂಬ ಪ್ರತೀತಿಯು ಉಂಟಾಗುತ್ತದೆ. ಆ ಪ್ರತೀತಿಯಿಂದ ಆ ಕಪಾಲಗಳಲ್ಲಿ ಘಟಪ್ರಧ್ವಂಸಾಭಾವವು ಸಿದ್ಧವಾಗುತ್ತದೆ. ಮತ್ತು ಭೂಮಿಯಮೇಲೆ ಘಟವಿರುವಾಗ " ಭೂತಲಂ ನಘಟಃ " ಎಂಬ ಪ್ರತೀತಿಯು ಉಂಟಾಗುತ್ತದೆ ಆ ಪ್ರತೀತಿಯಿಂದ ಭೂತಲದಲ್ಲಿ ಘಟದಭೇದರೂಪ ಅನ್ಯೋನ್ಯಾಭಾವವು ಸಿದ್ಧವಾಗುತ್ತದೆ. ಮತ್ತು ಭೂಮಿಯಮೇಲೆ ಘಟವಿಲ್ಲದಾಗ " ಭೂತಲೇ ಘಟೋನಾಸ್ತಿ " ಎಂಬ ಪ್ರತೀತಿಯು ಉಂಟಾಗುತ್ತದೆ. ಆ ಪ್ರತೀತಿಯಿಂದ ಭೂತಲದಲ್ಲಿ ಘಟದ ಅತ್ಯಂತಾಭಾವವು ಸಿದ್ಧಿಸುತ್ತದೆ. ಈ ರೀತಿಯಾಗಿ ವಿಲಕ್ಷಣ ಪ್ರತೀತಿಯ ಬಲವಿಡಿದು ಒಂದೇ ಘಟದಲ್ಲಿ ನಾಲ್ಕುವಿಧ ಅಭಾವಗಳು ಸಿದ್ಧಿಸುತ್ತವೆ. ಇವುಗಳಲ್ಲಿ ಪ್ರಾಗಭಾವವು ಅನಾದಿನಾಶವಂತವಾಗಿರುತ್ತದೆ. ಪ್ರಧ್ವಂಸಾಭಾವವು ಉತ್ಪತ್ತಿಸಹಿತ ನಾಶರಹಿತವಾಗಿರುತ್ತದೆ. ಅನ್ಯೋನ್ಯಾಭಾವ ಅತ್ಯಂತಾಭಾವಗಳೆರಡೂ ಉತ್ಪತ್ತಿ ನಾಶರಹಿತಗಳಾದ್ದರಿಂದ ನಿತ್ಯಗಳಾಗಿರುತ್ತವೆ. ಈ ರೀತಿಯಾಗಿ ನೈಯಾಯಿಕರು ಅಭಾವ ಚತುಷ್ಟಯಗಳ ಸ್ವರೂಪವನ್ನು ಹೇಳಿ ಸ್ವೀಕರಿಸಿರುತ್ತಾರೆ

ಈ ನೈಯಾಯಿಕರ ಸಿದ್ಧಾಂತವು ಯೋಗ್ಯವಾದುದಲ್ಲವೆಂದು ಗ್ರಂಥಕರ್ತರು ತಿಳಿಸುತ್ತಾರೆ. ಅದು ಯೋಗ್ಯವೆಂತಲ್ಲವೆಂದರೆ " ಘಟೋಭವಿಷ್ಯತಿ " ಎಂಬ ಉಕ್ತ ಪ್ರತೀತಿಯು ಅಭಾವವಾಚಕ ನಞ್ ಶಬ್ದರಹಿತವಾಗುವುದರಿಂದ, ಆ ಪ್ರಾಗಭಾವವನ್ನು ವಿಷಯ ಮಾಡುವುದಿಲ್ಲ. ಉತ್ತರತ್ರ ಭವಿಷ್ಯತ್ಕಾಲದಲ್ಲಿ ಉಂಟಾಗತಕ್ಕ ಘಟದ ಸತ್ತೆಯೊಡನೆ ಸಂಬಂಧವಾವುದುಂಟೋ ಆ ಸತ್ತಾ ಸಂಬಂಧವನ್ನೇ ಆ

ಪ್ರತೀತಿಯು ವಿಷಯಮಾಡುತ್ತದೆ. ಆ ಪ್ರತೀತಿಯಿಂದ ಪ್ರಾಗಭಾವವು ಸಿದ್ಧವಾಗುವುದಿಲ್ಲ. ಮತ್ತು ಆ ಘಟೋತ್ಪತ್ತಿಗೆ ಮೊದಲು ಆ ಪ್ರಾಗಭಾವವನ್ನಂಗೀಕರಿಸುವುದಾದರೆ ಉತ್ಪತ್ತಿಗೆ ಪೂರ್ವದಲ್ಲಿ ಅಸತ್ತಾಗುವುದರಿಂದ ಆ ಘಟೋತ್ಪತ್ತಿಯೇ ಆಗಬಾರದಾಗಿತ್ತು ಇಂತಲ್ಲದೆ ಅಸತ್ತಿಗೂ ಸಹ ಉತ್ಪತ್ತಿಯನ್ನಗೀಕರಿಸಿದರೆ ಅಸತ್ತಾದ ಶಶವಿಷಾಣ ಗಗನಾರವಿಂದ ವಂಧ್ಯಾಪುತ್ರಾದಿಕಗಳಿಗೂ ಉತ್ಪತ್ತಿಯನ್ನು ಅಂಗೀಕರಿಸಬೇಕಾಗುತ್ತದೆ

ಮತ್ತು ಉತ್ಪತ್ತಿಗೆಪೂರ್ವ ಕಾರ್ಯಕ್ಕೆ ಕಾರಣದೊಡನೆ ಸತ್ತತೆಯು ಕೇವಲ ಯುಕ್ತಿಯಿಂದಲೇ ಸಿದ್ಧಿಸುವುದಲ್ಲದೆ ಶ್ರುತಿ ಸೂತ್ರಗಳಿಂದಲೂ ಸಿದ್ಧಿಸುತ್ತದೆ " ಸದೇವ ಸೋಮ್ಯೇದ ಮಗ್ರ ಆಸೀತ್ " " ಎಲೈ ಶ್ವೇತಕೇತೂ ! ಈ ದೃಶ್ಯಮಾನಕಾರ್ಯ ಜಗತ್ತು ತನ್ನ ಉತ್ಪತ್ತಿಗೆ ಪೂರ್ವದಲ್ಲಿ ಸತ್ತಾಗಿಯೇ ಇತ್ತು " ಎಂಬೀ ಶ್ರುತಿ ವಾಕ್ಯವು ಕಾರ್ಯೋತ್ಪತ್ತಿಗೆ ಪೂರ್ವದಲ್ಲಿ ಕಾರಣದ ಸತ್ತತೆಯನ್ನು ಸೂಚಿಸುತ್ತದೆ " ಸತ್ವಾಚ್ಚಾಪರಸ್ಯ " ಈ ಪ್ರಪಂಚ ರೂಪಕಾರ್ಯಕ್ಕೆ ತನ್ನ ಉತ್ಪತ್ತಿಗೆ ಮೊದಲು ಕಾರಣರೂಪದಿಂದ ಸತ್ತ್ವವಿರುವುದರಿಂದ ಈ ವರ್ತಮಾನಕಾಲದಲ್ಲಿಯೂ ಆ ಪರಮಕಾರಣಕ್ಕಿಂತಲೂ, ಅನನ್ಯತ್ವವೇ ಅಂದರೆ ಆ ಪರಮಕಾರಣರೂಪ ಪರಮಾತ್ಮನಿಗಿಂತಲೂ ಭಿನ್ನರೂಪದಿಂದ ಅಭಾವವೇ ಆಗುತ್ತದೆ. " ಎಂಬ ಈ ಬ್ರಹ್ಮಸೂತ್ರ ವಾಕ್ಯ ಮೇಲಿನಸಿದ್ಧಾಂತವನ್ನೇ ದೃಢಪಡಿಸುತ್ತದೆ. ಒಂದುಪಕ್ಷ ಆ ಪ್ರಾಗಭಾವವನ್ನು ಅಂಗೀಕರಿಸಿದರೆ ಆ ಶ್ರುತಿ ಸೂತ್ರಗಳಿಗೆ ವಿರೋಧವುಂಟಾಗುತ್ತದೆ ಆದ್ದರಿಂದ ಶ್ರುತಿಸೂತ್ರಗಳಿಗೆ ವಿರೋಧವಾಗುವುದರಿಂದ ಆ ಪ್ರಾಗಭಾವವನ್ನು ಅಂಗೀಕರಿಸುವುದು ಯೋಗ್ಯವಲ್ಲ ಮತ್ತು ಪ್ರಾಗಭಾವದಂತೆ ಪ್ರಧ್ವಂಸಾಭಾವದಲ್ಲಿಯೂ ಯಾವಪ್ರಮಾಣವಿಲ್ಲ ಹೇಗಂದರೆ ಬ್ರಹ್ಮಸಾಕ್ಷಾತ್ಕಾರಕ್ಕೆ ಪೂರ್ವದಲ್ಲಿ ಈ ಕಾರ್ಯ ಪ್ರಪಂಚಕ್ಕೆ ಅತ್ಯಂತನಾಶವು ಉಂಟಾಗುವುದಿಲ್ಲ ಬೀಜಾಂಕುರನ್ಯಾಯದಂತೆ ಸೃಷ್ಟಿಪ್ರಳಯಗಳಿಗೆ ಪ್ರವಾಹ ರೂಪದಿಂದ ಅನಾದಿತ್ವವಿರುತ್ತದೆ. ಅಂದರೆ ಹೇಗೆ ಬೀಜದಿಂದ ಅಂಕುರವು, ಅಂಕುರದಿಂದ ಪುನಃ ಬೀಜವು, ಬೀಜದಿಂದ ಪುನಃ ಅಂಕುರವು ಉಂಟಾಗುತ್ತದೆಯೋ, ಹಾಗೆ ಸೃಷ್ಟ್ಯನಂತರ ಪ್ರಳಯವು, ಪ್ರಳಯಾನಂತರ ಪುನಃ ಸೃಷ್ಟಿಯು, ಆ ಸೃಷ್ಟ್ಯನಂತರ ಪುನಃ ಪ್ರಳಯವು ಉಂಟಾಗುತ್ತದೆ. ಈ ಪ್ರಕಾರ ಆ ಸೃಷ್ಟಿಪ್ರಳಯಗಳು ಪ್ರವಾಹರೂಪದಿಂದ ಅನಾದಿಗಳಾಗಿರುತ್ತವೆ. ಮತ್ತು ಪ್ರಳಯಕಾಲದಲ್ಲಿ ಆ ಕಾರ್ಯ ಪ್ರಪಂಚವು ಅತ್ಯಂತನಾಶವಾಗುವುದಿಲ್ಲ. ತನ್ನ ಕಾರಣದಲ್ಲಿ ತಿರೋಭೂತವಾಗಿರುತ್ತದೆ. ಈ ಪ್ರಕಾರವಾಗಿ ಈ ಕಾಲದಲ್ಲಿ ಭಗ್ನವಾದ ಘಟಾದಿಕಾರ್ಯಗಳು ತಮ್ಮ ಕಪಾಲಾದಿರೂಪ ಕಾರಣದಲ್ಲಿ ತಿರೋಭೂತವಾಗಿರುತ್ತವೆ. ಆ ತಿರೋಭಾವಾವಸ್ಥೆಯು " ಘಟೋಧ್ವಸ್ತಃ " ಎಂಬ ಉಕ್ತಪ್ರತೀತಿಗೆ ವಿಷಯವಾಗಿರುತ್ತದೆ. ಆದ್ದ

ರಿಂದ ಉಕ್ತಪ್ರತೀತಿಯಿಂದ ಘಟಪ್ರಧ್ವಂಸಾಭಾವದ ಸಿದ್ಧಿಯಾಗುವುದಿಲ್ಲ. ಒಂದು ಪಕ್ಷ ಕಾರ್ಯಕ್ಕೆ ಅತ್ಯಂತನಾಶವನ್ನು ಅಂಗೀಕರಿಸಿದರೆ "ಸದೇವಸೌಮ್ಯೇದಮಗ್ರ ಆಸೀತ್, ಆತ್ಮಾವಾ ಇದಮೇಕ ಏವಾಗ್ರ ಆಸೀತ್, ನಾಸತೋ ವಿದ್ಯತೇಭಾವೋ ನಾಭಾವೋ ವಿದ್ಯತೇಸತಃ," ಇತ್ಯಾದಿ ಶ್ರುತಿ ಸ್ಮೃತಿ ವಚನಗಳಿಂದ ಸೃಷ್ಟಿಗೆ ಮೊದಲು ಲೀನವಾದಕಾರ್ಯಕ್ಕೆ ಕಾರಣರೂಪದಿಂದ ಯಾವ ಸತ್ತೆಯನ್ನು ಹೇಳಲ್ಪಟ್ಟಿರುವುದೋ ಅದು ಅಸಂಗತವಾಗುತ್ತದೆ. ಆದ್ದರಿಂದ ಆ ಶ್ರುತಿಸ್ಮೃತಿ ವಚನಗಳಿಗೆ ವಿರುದ್ಧವಾಗುವುದರಿಂದ ಆ ಪ್ರಧ್ವಂಸಾಭಾವವನ್ನು ಸಹ ಅಂಗೀಕರಿಸುವುದು ಯೋಗ್ಯವಲ್ಲ. ಮತ್ತು "ಘಟಃಪಟೋನ" ಇತ್ಯಾದಿ ಪ್ರತೀತಿಯು ಅನ್ಯೋನ್ಯಾಭಾವವನ್ನು ವಿಷಯಮಾಡುವುದಿಲ್ಲ. ಆ ಘಟಪಟಗಳೆರಡರ ಅಭೇದಕ್ಕೆ ಅತ್ಯಂತಾಭಾವವಾವುದಿರುವುದೋ ಅದನ್ನೇ ಆ ಪ್ರತೀತಿಯು ವಿಷಯಮಾಡುತ್ತದೆ. ಆದ್ದರಿಂದ ಅನ್ಯೋಭಾವದ ಸಿದ್ಧಿಯಾಗುವುದಿಲ್ಲ.

ಮತ್ತು ನೈಯಾಯಿಕರು ಅನ್ಯೋನ್ಯಾಭಾವ, ಅತ್ಯಂತಾಭಾವಗಳಿಗೆ ಉತ್ಪತ್ತಿನಾಶರಹಿತನಿತ್ಯಗಳೆಂದು ಅಂಗೀಕರಿಸುತ್ತಾರೆ. ಇದು ಸಹ ಅಸಂಗತವೇ. ಏಕೆಂದರೆ "ಏಕಮೇವಾದ್ವಿತೀಯಂ ಬ್ರಹ್ಮ" ಎಂಬ ಶ್ರುತಿಯಾದರೋ, ಆ ಬ್ರಹ್ಮವು ಸರ್ವದ್ವೈತ ಪ್ರಪಂಚ ರಹಿತವೆಂದು ಹೇಳಿರುತ್ತದೆ. ಮತ್ತು "ನೇಹನಾನಾಸ್ತಿಕಿಂಚನ" ಎಂಬೀ ಶ್ರುತಿಯು ಆ ಬ್ರಹ್ಮದಲ್ಲಿ ಸರ್ವದ್ವೈತ ಪ್ರಪಂಚವನ್ನು ನಿಷೇಧಿಸಿರುತ್ತದೆ. ಮತ್ತು "ಅತೋಽನ್ಯದಾರ್ತಾರಂ" ಎಂಬ ಶ್ರುತಿಯು ಬ್ರಹ್ಮಕ್ಕೆ ಭಿನ್ನವಾದ ಸರ್ವ ಪ್ರಪಂಚವು ಮಿಥ್ಯವೆಂದು ಹೇಳುತ್ತದೆ, ಒಂದುಪಕ್ಷ ಆ ಅನ್ಯೋನ್ಯಾಭಾವ ಅತ್ಯಂತಾಭಾವಗಳು ನಿತ್ಯವೆಂದು ಅಂಗೀಕರಿಸಿದರೆ ಆ ಸರ್ವ ಶ್ರುತಿಗಳಿಗೆ ವಿರೋಧವಾಗಿರುತ್ತದೆ. ಆದ್ದರಿಂದ ಆ ಎರಡಭಾವಗಳು ಅನಿತ್ಯಗಳೆಂತಲೇ ಅಂಗೀಕರಿಸಬೇಕು. ಇದುವರೆಗೂ ಹೇಳಿದ್ದರಲ್ಲಿ ಪ್ರಾಗಭಾವ ಪ್ರಧ್ವಂಸಾಭಾವ, ಅನ್ಯೋನ್ಯಾಭಾವ ಈ ಮೂರು ಅಭಾವಗಳು ಸ್ವೀಕರಿಸಲು ಯೋಗ್ಯವಲ್ಲವೆಂಬುದು ಸಿದ್ಧವಾಯಿತು. ಪರಮಾತ್ಮನಲ್ಲಿ ಅಧ್ಯಾಸರೂಪವಾದ ಈ ಜಗತ್ತು ಅತ್ಯಂತಾಭಾವದಿಂದಿರುತ್ತದೆ. ಎಂಬುದನ್ನು ಮಾತ್ರ ಗ್ರಹಿಸಬೇಕು.

## ಪರಿವರ್ಧಿನಿ ಷಟ್ಪದಿ

ಒಂದೇ ಮಣ್ಣಿನೊಳಿಲ್ಲದ ಘಟಕಂ |
ಪೊಂದಿಸೆ ಪ್ರಾಗಾದ್ಯಭಾವತ್ರಯುಗಳು |
ಕುಂದುವ ವತ್ಯಂತಾಭಾವವನಂ ಸ್ವೀಕರಿಸಲು ಯೋಗ್ಯ ||
ಒಂದೇ ಬ್ರಹ್ಮದೊಳಿಲ್ಲದ ಜಗಕಂ |

ಹೊಂದಿಸಲತ್ಯಂತಾಭಾವವನದು ।
ಚಂದವೆನಿಪುದುಳಿದವುಗಳು ಕುಗ್ಗುವವಿದು ಶ್ರುತಿತತಿಸಿದ್ಧಾ

ಅವತಾರಿಕೆ ;- ಇದುವರೆಗೆ ಜಗದ್ವಿಷಯದಲ್ಲಿ ಪರಮಾತ್ಮನು ಜಗತ್ತಿಗ ಭಿನ್ನನಿಮಿತ್ತೋಪಾದಾನ ಕಾರಣನೆಂತಲೂ, ಸನ್ನಿಧಾನಕರ್ತೃವೆಂತಲೂ, ರಜ್ಜುಸರ್ಪ ನ್ಯಾಯದಂತೆ ಜಗತ್ತು ಪರಮಾತ್ಮನಲ್ಲಿ ಆಭಾಸವಾಗಿರುವುದೆಂತಲೂ, ಜಗತ್ತು ಪ್ರಾತಿಭಾಸಿಕ ಸತ್ತೆಯಾಗಿರುವುದೆಂತಲೂ, ಜಗತ್ತು ಅಂತ್ಯಂತಾಭಾವಾತ್ಮಕವಾದು ದೆಂತಲೂ, ಹೇಳುತ್ತಾಬಂದಿದ್ದೀರಿ. ಜಗತ್ತುಪರಮಾತ್ಮನಲ್ಲಿ ಅತ್ಯಂತಾಭಾವವಾಗಿ ದ್ದರೆ ಜಗತ್ತನ್ನು ಪರಮಾತ್ಮನು ಸೃಷ್ಟಿಸುತ್ತಾನೆಂತಲೂ, ಸಕ್ಷಿಸುತ್ತಾನೆಂತಲೂ, ಲಯಗೊಳಿಸುತ್ತಾನೆಂತಲೂ, ಹೇಳುವಶಾಸ್ತ್ರಗಳುಂಟು. ಅತ್ಯಂತಾಭಾವವಾದುದ್ದು ಸೃಷ್ಟಿಯಾಗಿ ಭಾವರೂಪವಾಗಿ ತೋರುವುದೆ? ಭಾವರೂಪವಾಗಿತೋರುವ ಜಗತ್ತನ್ನು ಅತ್ಯಂತಾಭಾವವೆಂದು ಹೇಳುವುದು ಸರಿಯೋ ? ನೀವು ಸೃಷ್ಟಿಯನ್ನು ಒಪ್ಪಿ ಕೊಳ್ಳದಿದ್ದರೆ ತಮ್ಮ ಸಿದ್ಧಾಂತವು ಶ್ರುತಿವಿರೋಧವಾಗಿರುವುದು ಸೃಷ್ಟಿಯನ್ನೊಪ್ಪಿ ಕೊಂಡರೆ ಜಗತ್ತು ಅತ್ಯಂತಾಭಾವವಾದುದೆಂಬ ತಮ್ಮ ಸಿದ್ಧಾಂತವು ಸಿದ್ಧಿಸುವು ದೆಲ್ಲಿ? ಎಂಬ ಪ್ರಶ್ನೆಗೆ ಪರಮಾತ್ಮನಲ್ಲಿ ಜಗತ್ ಸೃಷ್ಟಿಯೆಂಬುದು ವಿವರ್ತರೂಪವಾಗಿರುವುದರಿಂದ ಅತ್ಯಂತಾಭಾವವೆಂಬುದು ಶ್ರುತಿಸಿದ್ಧವಾದುದೆಂಬ ಉತ್ತರ ವನ್ನು ಮುಂದಿನ ಶ್ಲೋಕದಲ್ಲಿ ಸೂಚಿಸುತ್ತಾರೆ

## * ಶಾರ್ದೂಲ ವಿಕ್ರೀಡಿತಾವೃತ್ತ.

ಶ್ಲೋ॥ **ಸ್ವಸ್ಥ ಶ್ಚೇತ್ಪ್ರಳಯೇ ಶಿವೋಸ್ಯಜಗತಶ್ಶಿಷ್ಟಾಂಡ ನಿಷ್ಠೀವನಾ ।**
**ದಂತಸ್ಸೋಸ್ತು ಸದಾಸಕೃತ್ಪ ಚತಿಚೇಚ್ಛ್ರಷ್ಟಾಪುನಃ ಕೃಷ್ಟವಾನ್ ॥**
**ಸಾನ್ನಿಧ್ಯಾದ್ಯದಿ ಶಾಸ್ತ್ಯಭೂತ್ಸತು ಪಥಿಕಸ್ಯಾತ್ಮೈವಚೇದ್ವಿಶ್ರುತಿಃ ।**
**ಸಾದ್ವೈವರ್ತ್ಯ ಮತೋಽದ್ವಯಾನ್ನಪರತೋ ವ್ಯಸ್ತಂ ಸಮಸ್ತಂ**
**ಜಗತ್ ॥ ೧೯ ॥**

ಪದಚ್ಛೇದ ;— ಸ್ವಸ್ಥಃ, ಚೇತ್, ಪ್ರಳಯೇ, ಶಿವಃ, ಅಸ್ಯ, ಜಗತಃ ಶಿಷ್ಟ, ಅಂಡ, ನಿಷ್ಠೀವನಾತ್ ಅತಃ, ಸಃ, ಅಸ್ತು, ಸದಾ, ಸಕೃತ್, ಪಚತಿ, ಚೇತ್, ಸ್ರಷ್ಟಾ, ಪುನಃ, ಕೃಷ್ಟವಾನ್, ಸಾನ್ನಿಧ್ಯಾತ್, ಯದಿ, ಶಾಸ್ತಿ, ಅಭೂತ್ ಸತು, ಪಥಿಕಸ್ಯ, ಆತ್ಮಾ, ಏವ, ಚೇತ್, ವಿಶ್ರುತಿಃ, ಸ್ಯಾತ್, ಸ್ವೈವರ್ತ್ಯ, ಅತಃ, ಅದ್ವಯಾತ್, ನ, ಪರತಃ, ವ್ಯಸ್ತಂ, ಸಮಸ್ತಂ, ಜಗತ್.

---

ಹನ್ನೊಂದನೇ ಶ್ಲೋಕದ ಛಂದಸ್ಸನ್ನು ನೋಡಿರಿ.

ಟೀಕೆ :- ಶಿವಃ = ಈಶ್ವರನು । ಸದಾ = ಯಾವಾಗಲೂ । ಪಚತಿಚೇತ್ = ಪ್ರಪಂಚವನ್ನು ವಿಸ್ತರಿಸುವನೆಂದರೆ । ಅಸ್ಯ = ಈ । ಜಗತಃ = ಪ್ರಪಂಚದ । ಪ್ರಳಯೇ = ಪ್ರಳಯಕಾಲದಲ್ಲಿ । ಸ್ವಸ್ಥಃ = ಕಾರ್ಯರಹಿತನಾಗಿರುವನು । ಸಕೃತ್= ಒಂದೇಸಲ । ಪಚತಿಚೇತ್ = ವಿಸ್ತರಿಸುವನಾದರೆ । ಶಿಷ್ಟ = ಉಳಿದ । ಅಂಡ = ಬ್ರಹ್ಮಾಂಡಗಳ । ನಿಷ್ಠೀವನಾತ್ = ಹೊರಗೆಡಹುವುದರ ದೆಶೆಯಿಂದ । ಅಂತಃ = ಸಮಾಪ್ತಿಯು ಲೋಪವು । (ಹಾಗಾದರೆ) ಸಃ = ಆ ಶಿವನು । ಅಸ್ತು = ಇರಲಿ । ಪುನಃ = ಮತ್ತು । ಕೃಷ್ಟವಾನ್ = ಬುದ್ಧಿಯುಳ್ಳವನಾದ । ಸ್ರಷ್ಟಾ = ಬ್ರಹ್ಮನು। ಸಾನ್ನಿಧ್ಯಾತ್ = ಸನ್ನಿಧಾನದಿಂದ । ಸ್ಯಾಸ್ತಿ = ನೇಮಿಸುವನು । ಚೇತ್ = ಹೀಗೆಂದದ್ದಾದರೆ । ಸತು = ಒಳ್ಳೆಯದು । ಆತ್ಮೈವ = ಆತ್ಮೈವೇದಂಸರ್ವಂ ಅಂದರೆ ಇದೆಲ್ಲಾ ಆತ್ಮವೇಯೆಂದು ಹೇಳುವ । ವಿಶ್ರುತಿ = ಶ್ರುತಿವಿರೋಧವು । ಅಭೂತ್= ಆಯಿತು । ಪಥಿಕ್ವ = ಇನ್ನು ಬೇರೆಹೇಳಲಿಕ್ಕೆ ದಾರಿಯೆಲ್ಲಿ ? । ಅತಃ = ಆಕಾರಣದ್ದೆಶೆಯಿಂದ । ವ್ಯಸ್ತಂ = ವಿಶಾಲವಾದ । ಸಮಸ್ತಂ = ಎಲ್ಲಾ । ಜಗತ್ = ಪ್ರಪಂಚವು । ವೈವರ್ತ್ಯಂ = ವಿವರ್ತವಾದದ್ದು । ಸ್ಯಾತ್ = ಆಗುವುದು । ಅದ್ವಯಾತ್= ಅಭಿನ್ನವಾದ ಚೈತನ್ಯದಿಂದ । ಪರತಃ = ಬೇರೆಯಾದದ್ದು । ನ = ಇಲ್ಲ ।

ತಾತ್ಪರ್ಯ -: ಪರಮಾತ್ಮನು ಯಾವಾಗಲೂ ಜಗತ್ತನ್ನು ಸೃಷ್ಟಿಸುತ್ತಾನೆಂದು ಹೇಳಿದರೆ ಜಗತ್ತಿನ ಪ್ರಳಯಕಾಲದಲ್ಲಿ ಕಾರ್ಯ ರಹಿತನಾಗಿರಬೇಕಾಗುತ್ತದೆ. ಒಂದುಬಾರಿಮಾತ್ರ ಜಗತ್ತನ್ನು ಸೃಷ್ಟಿಸುತ್ತಾನೆಂದರೆ ಉಳಿದ ಬ್ರಹ್ಮಾಂಡಗಳನ್ನು ಹೊರ ತರಿಸುವುದರಿಂದ ಜಗತ್ತಿಗೆ ಅಂತವೆಂಬುದು ಇಲ್ಲವಾಗುತ್ತದೆ. ಇದುಹಾಗಿರಲಿ ಪರಮಾತ್ಮನು ಚತುರ್ಮುಖ ಬ್ರಹ್ಮನ ಸನ್ನಿಧಾನದಿಂದ ಜಗತ್ ಸೃಷ್ಟಿಯ ಶಾಸನವನ್ನು ನಿಯಮಿಸುತ್ತಾನೆಂದರೆ "ಆತ್ಮೈವೇದಂ ಸರ್ವಂ" "ಇದೆಲ್ಲವೂ ಪರಮಾತ್ಮನ ಸ್ವರೂಪವೇ" ಎಂದು ಹೇಳುವ ಶ್ರುತಿಗೆ ವಿರೋಧವಾಗುತ್ತದೆ ಆದ್ದರಿಂದ ಜಗತ್ತು ಅದ್ವಯರೂಪನಾದ ಪರಮಾತ್ಮಚೈತನ್ಯಕ್ಕೆ ಬೇರೆಯಾಗದೆ ವಿವರ್ತರೂಪವಾಗಿರುತ್ತದೆ, ವಿವರ್ತರೂಪವಾಗಿ ತೋರಿದ್ದೆಲ್ಲವೂ, ಅತ್ಯಂತಾಭಾವವೆಂಬುದರಲ್ಲಿ ಸಂಶಯವಿಲ್ಲ.

ವಿಶೇಷಾರ್ಥ :- ಜಗತ್ತು ಸೃಷ್ಟಿಯಾಗಿಲ್ಲವೆಂಬ ಅಜಾತವಾದವು ವೇದಾಂತಿಗಳ ಕೊನೆಯ ಸಿದ್ಧಾಂತ. ಜಗತ್ಸೃಷ್ಟಿಯ ವಿಷಯದಲ್ಲಿ ಶ್ರುತಿಗಳು ಒಮ್ಮುಖವಾಗಿ ಹೇಳಿರುವುದಿಲ್ಲ ಭಿನ್ನ ಭಿನ್ನ ವಿಧವಾಗಿ ಹೇಳಿರುತ್ತವೆ. ಶ್ರುತಿಗಳ ತಾತ್ಪರ್ಯವನ್ನು ಅರಿತುನೋಡಿದರೆ ಜಗತ್ಸೃಷ್ಟಿ ವಿಷಯವನ್ನು ಕುರಿತು ಹೇಳುವುದಕ್ಕಾಗಿ ಆ ಶ್ರುತಿಗಳು ಹೊರಟಿರುವುದಿಲ್ಲ "ತತ್ತುಸಮನ್ವಯಾತ್" "ಸರ್ವ ಉಪನಿಷ

ಶ್ರುತಿಗಳು ಬ್ರಹ್ಮವಿಷಯವನ್ನು ಕುರಿತು ಬೋಧಿಸುತ್ತವೆ" ಎಂಬ ಬ್ರಹ್ಮಸೂತ್ರದವಾಕ್ಯದಮೇಲಿಂದ ಬ್ರಹ್ಮವಸ್ತುವೊಂದನ್ನೇ ಬೋಧಿಸಲು ಆ ಶ್ರುತಿಗಳು ಹೊರಟಿರುತ್ತವೆ. ಇರಲಿ ಪರಮಾತ್ಮನು ಜಗತ್ತನ್ನು ಸೃಷ್ಟಿಸುತ್ತಾನೆ. ಎಂಬ ಈ ಮಾತನ್ನು ಒಪ್ಪಿಕೊಂಡರೆ ಪರಮಾತ್ಮನು ಯಾವಾಗಲೂ ಇರುವುದರಿಂದ ಸದಾಜಗತ್ತನ್ನು ಸೃಷ್ಟಿಮಾಡುತ್ತಲೇ ಇರುತ್ತಾನೆಂದು ಹೇಳಬೇಕಾಗುತ್ತದೆ ಇದನ್ನೊಪ್ಪಲು ಜಗತ್ ಪ್ರಳಯದಲ್ಲಿ ನಿದ್ರಿತನಂತೆ ಕರ್ತವ್ಯ ಹೀನನಾಗಿರಬೇಕಾಗುತ್ತದೆ ಈ ಮಾತನ್ನೊಡಂಬಡದೆ ಪರಮಾತ್ಮನು ಬಿಡುವಿಲ್ಲದೆ ಸದಾ ಜಗತ್ತನ್ನು ಸೃಷ್ಟಿಸುವುದಿಲ್ಲ ಒಂದಾವರ್ತಿಮಾತ್ರ ಸೃಷ್ಟಿಸಿ ಬಿಡುತ್ತಾನೆ ಎಂದರೆ ಪರಮಾತ್ಮನಿಂದ ಸೃಷ್ಟಿಯಾದ ಕಾರ್ಯವು ಸ್ಥಿರವಾಗಿರಬೇಕಾಗುತ್ತದೆ ಏಕೆಂದರೆ ಮಗನನ್ನು ಹುಟ್ಟಿಸಿದ ತಂದೆಯು ಆ ಮಗನ ಹಾನಿಯನ್ನು ( ನಾಶವನ್ನು ) ಅಪೇಕ್ಷಿಸುವನೆ? ಇದರಂತೆ ಪರಮಾತ್ಮನು ಹುಟ್ಟಿಸಿದ ಜಗತ್ತನ್ನು ನಾಶಪಡಿಸಲು ಇಚ್ಛಿಸನು. ಇದನ್ನು ಒಪ್ಪಿಕೊಂಡರೆ ಜಗತ್ತಿಗೆಪ್ರಳಯವೆಂಬುದು ಎಂದಿಗೂ ಸಂಭವಿಸಲೇಬಾರದು. ಅಂದರೆ ಜಗತ್ತಿಗೆ ಅಂತವೆಂಬುದು ಇಲ್ಲದಂತಿರ ಬೇಕಾಗುತ್ತದೆ. ಇದು ಒಪ್ಪುವಮಾತಲ್ಲ ಏಕೆಂದರೆ ಸೃಷ್ಟಿ ಸ್ಥಿತಿ ಪ್ರಳಯಗಳು ಅನಾದಿ ಸಂಸಿದ್ಧವಾಗಿವೆಯೆಂದು ಶಾಸ್ತ್ರಗಳು ತೀರ್ಮಾನಿಸಿವೆ. ಈ ಮಾತುಹಾಗಿರಲಿ ಬುದ್ಧಿಶಾಲಿಯಾದ ಚತುರ್ಮುಖ ಬ್ರಹ್ಮನ ಸನ್ನಿಧಿಯಲ್ಲಿ ಜಗತ್ತು ಸೃಷ್ಟಿ ಸ್ಥಿತಿ ಲಯಗಳು ನೇಮಿಸಲ್ಪಟ್ಟಿವೆ ಎಂದು ಒಪ್ಪಿಕೊಂಡರೆ "ಆತ್ಮೈವೇದಂ ಸರ್ವಂ, ಇದಂ ಸರ್ವಂ ಯದಯಮಾತ್ಮಾ, ಪುರುಷ ಏ ವೇದಂ ವಿಶ್ವಂ, ಸರ್ವಂ ಖಲ್ವಿದಂ ಬ್ರಹ್ಮ, ವಾಸುದೇವಸ್ಸರ್ವಂ, ನಾರಾಯಣಃ ಸರ್ವಮಿದಂ ಪುರಾಣಃ" ಇತ್ಯಾದಿ ಶ್ರುತಿ ಸ್ಮೃತಿವಾಕ್ಯಗಳು ಸರ್ವವೂ ಪರಮಾತ್ಮನ ಸ್ವರೂಪವೇ ಎಂದು ಹೇಳುವುದರಿಂದ ಶ್ರುತಿ ಸ್ಮೃತಿಗಳಿಗೆ ವಿರೋಧವಾಗುತ್ತದೆ ಆದ್ದರಿಂದ ಈ ಜಗತ್ತು ಪರಮಾತ್ಮನಲ್ಲಿ ವಿವರ್ತರೂಪದಿಂದ ತೋರುತ್ತದೆಂದು ಹೇಳಬೇಕು ವಿವರ್ತ ವೆಂದರೆ "ಉಪಾದಾನ ವಿಷಮಸತ್ತಾಕಾನ್ಯಥಾ ಭಾವಃ ವಿವರ್ತಃ" ಉಪಾದಾನಕಾರಣಕ್ಕಿಂತಲೂ ವಿಷಮಸತ್ತಾ ಸಹಿತವಾದ ಆ ಉಪಾದಾನದ ಅನ್ಯಥಾ ಭಾವವು ವಿವರ್ತ ವೆನ್ನಲ್ಪಡುತ್ತದೆ. ಉದಾ :— ರಜ್ಜುವಿನಲ್ಲಿ ಪ್ರತೀತಿಯಾಗುವ ಸರ್ಪವು ರಜ್ಜ್ವವಚ್ಛಿನ್ನ ಚೈತನ್ಯದ ವಿವರ್ತವಾಗಿದೆ ಚೈತನ್ಯವಾದರೋ ಪಾರಮಾರ್ಥಿಕ ಸತ್ತೆಯಾಗಿರುತ್ತದೆ ಕಲ್ಪಿತ ಸರ್ಪವು ಪ್ರಾತಿಭಾಸಿಕ ಸತ್ತೆಯಾಗಿರುತ್ತದೆ. ಆದ್ದರಿಂದ ಸರ್ಪವು ಚೈತನ್ಯರೂಪ ಉಪಾದಾನ ಕಾರಣಕ್ಕಿಂತಲೂ ವಿಷಮ ಸತ್ತಾ ಸಹಿತವಾಗಿರುತ್ತದೆ. "ಅಯಂ ಸರ್ಪಃ" ಎಂಬ ವ್ಯವಹಾರಕ್ಕೆ ವಿಷಯವಾಗುವುದರಿಂದ ಆ ಸರ್ಪವು ಚೈತನ್ಯಕ್ಕೆ ಅನ್ಯಥಾ ಭಾವವಾಗುತ್ತದೆ ಕಲ್ಪಿತ ಸರ್ಪದಲ್ಲಿ ಚೈತನ್ಯದ ವಿವರ್ತತ್ವವು ಸಂಭವಿಸುತ್ತದೆ. ಆದ್ದರಿಂದ ಪರಮಾತ್ಮಚೈತ

ದಿಂದಬೇರೆ ಯಾಗದೆ ಜಗತ್ತು ವಿವರ್ತರೂಪದಿಂದಿರುವುದೆಂದು ಗ್ರಂಥಕರ್ತರು ಇಲ್ಲಿಸ್ಪಷ್ಟಪಡಿಸಿದ್ದಾರೆ. ಯಾವುದು ವಿವರ್ತವೋ ಅದು ಅತ್ಯಂತಾಭಾವವೆಂಬು ದರಲ್ಲಿ ಸಂಶಯವಿಲ್ಲ.

## ವಾರ್ಧಿಕಷಟ್ಪದಿ

ಅನಗಾಲ ಶಿವನು ಜಗಮಂ ರಚಿಪನೆನೆ ಪ್ರಳಯ
ಕೊನೆಯಲ್ಲಿ ಸುಮ್ಮಸಿಹ ನೊಮ್ಮೆಯೇ ಸೃಷ್ಟಿಸುವ ।
ನೆನೆಜಗತಿಗಂ ಪ್ರಳಯುವಿರಬಾರ ದಾಬ್ರಹ್ಮಸಾನ್ನಿಧ್ಯದಿಂ ನೇಮಿಪಂ ॥
ಎನಲು ಸರ್ವಂ ಬ್ರಹ್ಮವೆಂಬ ಶ್ರುತಿ ವೈರತ್ವ ।
ವೆನಿಸದಿರದದರಿಂದಲೀ ಜಗವು ಚಿದಭಿನ್ನ ।
ವೆನಿಪವಸ್ತುವಿನಲ್ಲಿ ವೈವರ್ತ್ಯರೂಪದಿಂದಿಹುದಿದುವೆ ಶ್ರುತಿ ಸಿದ್ಧವು ॥ ೧೯ ॥

ಅವತಾರಿಕೆ:- ಪರಮಾತ್ಮಚೈತನ್ಯದಿಂದ ಬೇರೆಯಾಗದೆ ಜಗತ್ತು ವಿವರ್ತ ರೂಪದಿಂದಿರುವುದೆಂತಲೂ, ಯಾವುದು ವಿವರ್ತವೋ ಅದು ಅತ್ಯಂತ ಅಭಾವವೆಂ ದುಹೇಳಿದಿರಿ. ಅತ್ಯಂತ ಅಭಾವ ರೂಪವಾದ ಜಗತ್ತಿನಲ್ಲಿ (ಜಗಜ್ಜನರಲ್ಲಿ) ಬಂ ಧತ್ವ, ಮುಕ್ತತ್ವಗಳ ವ್ಯವಸ್ಥೆ ಯೆಂತು ಘಟಿಸುವುದು? ಬಂಧತ್ವ. ಮುಕ್ತತ್ವದ ವ್ಯವಸ್ಥೆಯೇ ಇಲ್ಲವೆಂದರೆ ಗುರುಶಾಸ್ತ್ರವೇದವೇದಾಂತ ವಾಕ್ಯಗಳಿಂದ ಪ್ರಯೋಜನ ವಿಲ್ಲವೆಂದು ಹೇಳಬೇಕಾಗುತ್ತದೆ ಇದನ್ನೊಪ್ಪಿಕೊಂಡರೆ ನಾಸ್ತಿಕ ಮತವನ್ನು ಅಂ ಗೀಕರಿಸಿದಂತಾಗುವುದಿಲ್ಲವೇ? ಎಂಬ ಪ್ರಶ್ನೆಗೆ ಬಂಧ ಮೋಕ್ಷದ ವ್ಯವಸ್ಥೆಯುಂಟೆಂ ತಲೂ, ಜಗತ್ತು ಬಂಧವು, ತನ್ನಾಶವೇ ಮುಕ್ತಿಯು. ಜಗದ್ವಿಷಯಗಳಲ್ಲಿ ಸುಳಿ ಯುವ ಮನಸ್ಸೇ ಬಂಧವು. ತನ್ನಾಶವೇ ಮುಕ್ತಿಯು. ಜಗತ್ ಭ್ರಾಂತಿಯೇ ಬಂಧವು. ತನ್ನಾಶವೇ ಮುಕ್ತಿಯು ಎಂಬುದನ್ನು ಕ್ರಮವಾಗಿ ಕರ್ಮಟರು, ಉ ಪಾಸಕರು, ಜ್ಞಾನಿಗಳು ನಿಶ್ಚಯಿಸುತ್ತಾರೆಂತಲೂ, ಮುಂದಿನ ಶ್ಲೋಕದಲ್ಲಿ ಸೂಚಿ ಸುತ್ತಾರೆ.

## * (ಅನುಷ್ಟುಪ್) ಪ್ರಮಾಣಿವೃತ್ತ.

**ಜಗತ್ ಕ್ಷತಿಂ ಜಗನ್ಮನ । ಕ್ಷತಿಂ ಮನೋ ಭ್ರಮುಕ್ಷತಿಂ ॥**
**ಜಡಾಜಡಾಬುಧಾಬುಧಾ । ಶ್ಯಶಂಕಿರೇಮೃತಂ ಕ್ರಮಾತ್ ॥ ೨೦ ॥**

* ಪ್ರತಿಯೊಂದು ಚರಣದಲ್ಲಿ ಜಗಣ, ರಗಣ, ಒಂದುಲಘು, ಒಂದುಗುರು, ಇದ್ದು, ಚರಣಾಂತ್ಯದಲ್ಲಿ ಯತಿಯಿದ್ದುದಾದರೆ ಪ್ರಮಾಣಿ ವೃತ್ತವಾಗುತ್ತದೆ.

**ಪದಚ್ಛೇದ** :— ಜಗತ್ಕ್ಷತಿಂ, ಜಗನ್ಮನಕ್ಷತಿಂ, ಮನೋಭ್ರಮಕ್ಷತಿಂ, ಜಡಾಃ, ಅಜಡಾಬುಧಾಃ, ಬುಧಾಃ, ಶಶಂಕಿರೇ, ಅಮೃತಂ, ಕ್ರಮಾತ್,

**ಟೀಕ** :— ಜಗತ್ಕ್ಷತಿಂ = ಜಗತ್ತಿನನಾಶವನ್ನು | ಜಗನ್ಮನಕ್ಷತಿಂ = ಜಗತ್ತಿನ ಸಂಬಂಧವಾದ ಮನೋಭ್ರಾಂತಿಯನ್ನು | ಮನೋಭ್ರಮಕ್ಷತಿಂ = ಮನಸ್ಸಿನ ಭ್ರಾಂತಿನಾಶವನ್ನು | ಜಡಾಃ = ಅಜ್ಞಾನಿಗಳಾದ ಕರ್ಮಠರು | ಅಜಡಾಬುಧಾಃ = ಜ್ಞಾನಾಜ್ಞಾನಸಹಿತರಾದ ಉಪಾಸಕರು | ಬುಧಾಃ = ಜ್ಞಾನಿಗಳು | ಅಮೃತಂ = ಮೋಕ್ಷವನ್ನು | ಕ್ರಮಾತ್ = ಮೇಲೆಹೇಳಲ್ಪಟ್ಟ ಪ್ರಕಾರ | ಶಶಂಕಿರೇ = ಅನುಮಾನಿಸುತ್ತಾರೆ.

**ತಾತ್ಪರ್ಯ** :- ಕರ್ಮಕಾಂಡಿಗಳು ಜಗತ್ತೇ ಬಂಧವೆಂತಲೂ, ಜಗನ್ನಾಶವೇ ಮುಕ್ತಿಯೆಂತಲೂ, ತಿಳಿಯುತ್ತಾರೆ. ಉಪಾಸನಾಕಾಂಡಿಗಳು ಜಗದ್ವಿಷಯಗಳಮೇಲೆ ಹರಿದಾಡುವ ಮನಸ್ಸೇ ಬಂಧವೆಂತಲೂ, ಆ ಮನೋನಾಶವೇ ಮುಕ್ತಿಯೆಂತಲೂ, ತಿಳಿಯುತ್ತಾರೆ. ಜ್ಞಾನಕಾಂಡಿಗಳು ಮನಸ್ಸಿನ ಭ್ರಾಂತಿಯೇ ಬಂಧವೆಂತಲೂ, ಅದರ ನಿವೃತ್ತಿಯೇ ಮೋಕ್ಷವೆಂತಲೂ, ತಿಳಿಯುತ್ತಾರೆ.

**ವಿಶೇಷಾರ್ಥ** :— ಪೂರ್ವಮೀಮಾಂಸಕರಾದ ಕರ್ಮಠರು ಸ್ವರೂಪದಿಂದ ಅನಾದಿ ಅನಂತ ಪ್ರವಾಹರೂಪ ಸಂಯೋಗ ವಿಯೋಗವುಳ್ಳದ್ದೇ ಜಗತ್ತೆಂದು ಹೇಳಿರುತ್ತಾರೆ. ಅಂದರೆ ಜಗತ್ತು ಅನಾದಿಯಾಗಿದ್ದರೂ, ಅನಂತ (ನಾಶವಿಲ್ಲದ್ದು)ವೆಂದು ಹೇಳುತ್ತಾರೆ. ಮತ್ತು ಜಗತ್ತು ಸತ್ಯವಾದುದೆಂದು ನಂಬಿರುತ್ತಾರೆ. ಜಗತ್ತೇಬಂಧವೆಂಬುದು ಆ ಕರ್ಮಠರ ಸಿದ್ಧಾಂತವಲ್ಲ. ನರಕಾದಿ ದುಃಖಸಂಬಂಧವೇ ಬಂಧತ್ವವೆಂದೂ, ಸ್ವರ್ಗಾದಿ ಲೋಕಪ್ರಾಪ್ತಿಯೇ ಮುಕ್ತತ್ವವೆಂದೂ, ಅವರು ತೀರ್ಮಾನ ಕೊಡುತ್ತಾರೆ ಆದರೆ ಗ್ರಂಥಕರ್ತರು ಕರ್ಮಿಗಳು ಜಗತ್ತೇ ಬಂಧವೆಂತಲೂ, ಜಗನ್ನಾಶವೇ ಮುಕ್ತಿಯೆಂತಲೂ, ತಿಳಿಯುತ್ತಾರೆ. ಎಂದು ಹೇಳಿರುತ್ತಾರೆ. ಇಲ್ಲಿ ಜಗತ್ ಶಬ್ದಕ್ಕೆ ಗ್ರಂಥಕರ್ತರ ಅಭಿಪ್ರಾಯವು ಚರಾಚರಾತ್ಮಕವಾದ ಪ್ರಪಂಚವೆಂಬುದಲ್ಲ ತೊಟ್ಟತನುವೇ ಜಗತ್ತೆಂದು ಅಭಿಪ್ರಾಯ ಪಟ್ಟಿರುತ್ತಾರೆ. ತನುವಿನ ಸಂಬಂಧವೇ ಬಂಧವೆಂತಲೂ, ತನುವಿನ ಸಂಬಂಧ ಬಿಡುಗಡೆಯೇ ಮೋಕ್ಷವೆಂತಲೂ ಪೂರ್ವಮೀಮಾಂಸಕರ ಸಿದ್ಧಾಂತವಾಗಿದೆ. ಇಲ್ಲಿ ತನುವಿನ ಸಂಬಂಧವು ಮರಣಾವಸ್ಥೆಯಲ್ಲಿ ಪ್ರತಿಯೊಬ್ಬರಿಗೂ, ಬಿಡುಗಡೆಯಾಗುವುದರಿಂದ ಕರ್ಮಠರ ಮೋಕ್ಷವನ್ನು ಸರ್ವರೂ ಹೊಂದಬಹುದಲ್ಲವೇ ? ಎಂಬ ಸಂಶಯವು ಅಂಕುರಿಸುತ್ತದೆ. ಈ ಸಂಶಯ ನಿವೃತ್ತಿಯೆಂತೆಂದೊಡೆ ಪೂರ್ವಮೀಮಾಂಸಕರು ಹೇಳುವ ಶರೀರಸಂಬಂಧದ

ಬಿಡುಗಡೆಗೂ, ಸರ್ವರ ಮರಣಾವಸ್ಥೆಯಲ್ಲಿ ಶರೀರ ಸಂಬಂಧದ ಬಿಡುಗಡೆಗೂ, ವ್ಯತ್ಯಾಸವಿದೆ ಯಜ್ಞಾದಿ ವಿಹಿತಕರ್ಮಗಳನ್ನು ಮಾಡಿ, ಪುಣ್ಯಸಂಪಾದನೆ ಮಾಡಿ ಕೊಂಡು ಈ ಕೆಟ್ಟಶರೀರ ಸಂಬಂಧದಿಂದ ಬಿಡುಗಡೆಹೊಂದಿ, ದಿವ್ಯದೇಹ ಧಾರಿಗ ಳಾಗಿ, ಸ್ವರ್ಗ ಲೋಕಕ್ಕೆ ಹೋಗಿ ಅಲ್ಲಿ ಸುಖಪಡುವುದೇ ಮುಕ್ತಿಯೆಂಬುದು ಆ ಕರ್ಮಕಾಂಡಿಗಳ ಅಭಿಪ್ರಾಯವು. ಪುಣ್ಯವನ್ನಾರ್ಜಿಸದೆ ಪಾಪಸಂಪಾದನೆಯಿಂದ ಶರೀರದ ಬಿಡುಗಡೆಯಾದರೆ ಯಮಲೋಕದಲ್ಲಿನ ಯಾತನಾತ್ಮಕ ಶರೀರಸಂಬಂಧವು ಬಿಡುಗಡೆಯಾಗುವುದಿಲ್ಲ. ಆದ್ದರಿಂದ ಪುಣ್ಯವಂತರೂ, ಪಾಪಿಗಳೂ, ಶರೀರಸಂಬಂಧ ದಿಂದ ಬಿಡುಗಡೆಹೊಂದುವುದರಲ್ಲಿ ವ್ಯತ್ಯಾಸವಿದೆ. ಆದ್ದರಿಂದ ಕರ್ಮಠರು ಶರೀರ ಸಂಬಂಧವೇ ಬಂಧವೆಂತಲೂ, ಶರೀರದ ಬಿಡುಗಡೆಯೇ ಮೋಕ್ಷವೆಂತಲೂ, ನಿಶ್ಚೈ ಸುತ್ತಾರೆ. ಇವರಿಗೆ ವೇದಾದಿಭಾಗವಾದ ಕರ್ಮಕಾಂಡವೇ ಪ್ರಮಾಣವಾಗಿಯೂ, ಪ್ರಯೋಜನವಾಗಿಯೂ, ಇರುತ್ತದೆ.

ಉಪಾಸಕರಾದ ಯೋಗಿಗಳು ಪ್ರಕೃತಿ ಪುರುಷ ಸಂಯೋಗಜನ್ಯ ಅವಿದ್ಯಾದಿ ಪಂಚಕ್ಲೇಶಗಳೇ ಬಂಧವೆಂತಲೂ, ಪ್ರಕೃತಿಪುರುಷ ಸಂಯೋಗ ಅಭಾವ ಪೂರ್ವಕ ಅವಿದ್ಯಾದಿ ಪಂಚಕ್ಲೇಶ ನಿವೃತ್ತಿಯೇ ಮೋಕ್ಷವೆಂತಲೂ, ತಿಳಿಯುತ್ತಾರೆ. ಅಂದರೆ ಶರೀರಸಹಿತವಾಗಿದ್ದು ಶರೀರಕ್ಕೆ ಸಂಬಂಧಪಟ್ಟ ಶಬ್ದಾದಿ ವಿಷಯಗಳಲ್ಲಿ ವ್ಯವಹರಿ ಸುವ ಮನಸ್ಸೇ ಬಂಧವೆಂತಲೂ, ಅದರ ನಾಶವೇ ಮುಕ್ತಿಯೆಂತಲೂ, ಆ ಉಪಾ ಸಕರಾದ ಯೋಗಿಗಳು ನಿಶ್ಚೈಸುತ್ತಾರೆ. ಇವರಿಗೆ ವೇದ ಮಧ್ಯಭಾಗದ ಉಪಾಸನಾ ಕಾಂಡವೇ ಪ್ರಮಾಣವೂ, ಪ್ರಯೋಜನಕಾರಿಯೂ, ಆಗಿರುತ್ತದೆ. ಜ್ಞಾನಿಗಳಾದ ವೇದಾಂತಿಗಳು ಅವಿದ್ಯಾ ತತ್ಕಾರ್ಯವಾದ ಮನೋ ಭ್ರಾಂತಿಯೇ ಬಂಧವೆಂತಲೂ ಆ ಭ್ರಾಂತಿ ನಿವೃತ್ತಿಪೂರ್ವಕ ಪರಮಾನಂದ ಪ್ರಾಪ್ತಿಯೇ ಮೋಕ್ಷವೆಂತಲೂ, ಹೇ ಳುತ್ತಾರೆ. ಇವರಿಗೆ ವೇದದ ಕೊನೆಯಭಾಗವಾದ ಜ್ಞಾನಕಾಂಡವು ಪ್ರಮಾಣ ವಾಗಿಯೂ, ಪ್ರಯೋಜನಕಾರಿಯಾಗಿಯೂ, ಇರುತ್ತದೆ.

ಗ್ರಂಥಕರ್ತರು ಕರ್ಮಿಗಳು ಜಡರೆಂತಲೂ, ಉಪಾಸಕರು ಅಜಡಬುಧರೆಂತಲೂ ಜ್ಞಾನಿಗಳು ಬುಧರೆಂತಲೂ, ಹೆಸರಿಸಿರುತ್ತಾರೆ ಅಂತು ಅತ್ಯಂತಾಭಾವ ಜಗತ್ತಿ ನಲ್ಲಿ ಇಂತು ಬಂಧಮೋಕ್ಷಗಳ ವ್ಯವಸ್ಥೆಯು ಸಂಭವಿಸುವುದರಿಂದ ನಾಸ್ತಿಕಮತಾವ ಲಂಬನೆಗೆಡೆಯಿಲ್ಲ. ಮತ್ತು ಗುರುಶಾಸ್ತ್ರ ವೇದವೇದಾಂತ ಬೋಧಾ ಪ್ರವಾಹವು ನಿಷ್ಪ್ರಯೋಜನವಾದುದಲ್ಲ. ರಜ್ಜುವಿನಲ್ಲಿ ಅತ್ಯಂತಾಭಾವರೂಪವಾಗಿ ಸರ್ಪವು ಇರು ತ್ತದೆ. ಸರ್ಪದ ತೋರ್ಕೆಯೇ ಬಂಧವು. ಅದರ ನಿವೃತ್ತಿಯೇ ಮೋಕ್ಷವು. ಎಂಬಂತೆ ಪರಮಾತ್ಮನಲ್ಲಿ ಅತ್ಯಂತಾಭಾವರೂಪವಾದ ಜಗತ್ತಿನಲ್ಲಿ ಬಂಧಮೋಕ್ಷಗಳ ವ್ಯವಸ್ಥೆಯು ಘಟಿಸುತ್ತದೆಂಬ ಭಾವವು.

## ಭಾಮಿನಿ ಷಟ್ಪದಿ.

ಜಗದನಾಶವು ಕರ್ಮಿಜನಗಳು ।
ಜಗದಲಿಹ ವಿಷಯಾದಿಗಳನಂ ।
ಬಗೆವ ಮನಸಿನ ನಾಶವನ್ನಾಪಾಸಕರು ಮತ್ತೆ ॥
ಸುಗುಣಿ ಸಮ್ಯಜ್ಞಾನಿಗಳು ಮನ ।
ಕೊಗೆದ ಭ್ರಾಂತಿಯು ನಾಶವನು ವರ ।
ಸುಗತಿಯೆಂದನುಮಾನಿಸುತ್ತಂ ತಿಳಿವರನವರತ ॥ ॥ ೨೦ ॥

**ಅವತಾರಿಕೆ** :- ಬಂಧ ಮೋಕ್ಷಗಳ ವ್ಯವಸ್ಥೆಯಲ್ಲಿ ಜಗಜ್ಜನರು ಭಿನ್ನಭಿನ್ನವಾಗಿ ಅಭಿಪ್ರಾಯ ಪಟ್ಟಿದ್ದರಿಂದಲೂ, ಆ ಭಿನ್ನಭಿನ್ನ ರೂಪವಾದ ಬಂಧಮೋಕ್ಷಗಳಾಗುವುದರಿಂದಲೂ, ಆ ಭಿನ್ನಭಿನ್ನ ಬಂಧ ಮೋಕ್ಷಗಳನ್ನು ಅನುಭವಿಸುವ, ಆತ್ಮರೂ ಅನೇಕರಿದ್ದಾರೆಂದು ಹೇಳಬೇಕಾಗುತ್ತದೆ. ತಮ್ಮ ಅದ್ವೈತ ಸಿದ್ಧಾಂತರೀತಿ ಏಕಾತ್ಮನೆಂಬುದೆಂತು ? ಎಂಬ ಪ್ರಶ್ನೆಗೆ ದೇಹಗಳಉಪಾಧಿಯಿಂದ ಆತ್ಮನು ಅನೇಕವಾಗಿ ಕಂಡು ಬಂದರೂ ಆತ್ಮನುಮಾತ್ರ ಏಕರೂಪನಿದ್ದಾನೆಂಬ ಉತ್ತರವನ್ನು ಮುಂದಿನ ಶ್ಲೋಕದಲ್ಲಿ ಸೂಚಿಸುತ್ತಾರೆ.

## * ಆರ್ಯಾ ವೃತ್ತ

ಶ್ಲೋಕ ॥ ವಪುಷಾಮಯುತೋಪಾಧೇ ।
ರ್ಬಹುಜೀವಾ ಇವ ಚಕಾಸ್ತಿ ಶಿವಏಕಃ ॥
ಭಿತ್ತ್ಯುದ್ವೃತ್ಯಾದ್ಯುಪಾಧೇ ।
ರ್ಗೃಹವಾಟ್ಯಾದ್ಯಾಯುತಾಕ್ಷ್ಮೇವ । ॥ ೨೧ ॥

**ಪದಚ್ಛೇದ** :- ವಪುಷಾಂ, ಅಯುತಃ, ಉಪಾಧೇಃ, ಬಹುಜೀವಾಇವ, ಚಕಾಸ್ತಿ, ಶಿವಃ, ಏಕಃ, ಭಿತ್ತಿ, ಉದ್ವೃತಿ, ಆದಿ, ಉಪಾಧೇಃ ಗೃಹ, ವಾಟೀ, ಆದಿ, ಆಯುತಾ ಕ್ಷ್ಮಾ, ಇವ,

**ಟೀಕ** ;- ಅಯುತಃ = ಸಂಗ ರಹಿತನಾದ । ಏಕಃ = ಒಬ್ಬನಾದ । ಶಿವಃ = ಈಶ್ವರನು । ವಪುಷಾಂ = ಶರೀರಗಳ । ಉಪಾಧೇಃ = ಉಪಾಧಿಯ ಮೂಲಕ। ಬಹುಜೀವಾ ಇವ = ಅನೇಕ ಜೀವಿಗಳಹಾಗೆ । ಚಕಾಸ್ತಿ = ತೋರುತ್ತಾನೆ । (ಹೇ

* ಒಂದನೇ ಶ್ಲೋಕದ ಛಂದಸ್ಸನ್ನು ನೋಡಿ.

ಗೆಂದರೆ) ಕ್ಷ್ಮಾ = ಭೂಮಿಯು । ಭಿತ್ತಿ = ಗೋಡೆಯನ್ನು । ಉದ್ವೃತ್ತಿ = ಮೇಲಕ್ಕೆ ಕಟ್ಟುವ । ಆದಿ = ಮುಂತಾದ । ಉಪಾಧೇಃ = ಉಪಾಧಿಯಿಂದ । ಗೃಹ = ಮನೆ । ವಾಟೀ = ದಾರಿ । ಆದಿ = ಮೊದಲಾದವುಗಳಿಂದ ! ಆಯತಾ = ವಿಶಾಲವಾದ । ಇವ = ಹಾಗೆ,

**ತಾತ್ಪರ್ಯ** :- ಅದ್ವಯ ನಿಸ್ಸಂಗ ಸ್ವರೂಪನಾದ ಪರಮಾತ್ಮನೊಬ್ಬನೇ ಶರೀರಗಳ ಉಪಾಧಿದೃಷ್ಟಿಯಿಂದ ಅನೇಕ ಜೀವಾತ್ಮರಾಗಿ ಭಾಸಿಸುತ್ತಾನೆ. ಭೂಮಿಯೊಂದೇ ಇದ್ದರೂ, ಎತ್ತರವಾಗಿ ಕಟ್ಟುವುದರಿಂದಲೂ, ಸಮನಾಗಿ ಮಾಡುವುದರಿಂದಲೂ, ಈ ಉಪಾಧಿ ಮೂಲಕವಾಗಿ ಮನೆ, ಗೋಡೆ, ದಾರಿ, ಎಂದು ಭಿನ್ನ ಭಿನ್ನರೂಪವಾಗಿ ಕಂಡಂತೆಂದು ಗ್ರಹಿಸಬೇಕು.

**ವಿಶೇಷಾರ್ಥ** ; ದೇವದಾನವ ಮಾನವಾದಿ ಶರೀರಗಳ ಉಪಾಧಿ ದೃಷ್ಟಿಯಿಂದ, ಆತ್ಮನು ಅನೇಕ ಸಂಬಂತೆ ಭಾಸಕನಾಗುವುದುಂಟು. ಆಯಾ ದೇಹಗಳ ಉಪಾಧಿಯನ್ನು ತೆಗೆದುಹಾಕಿದರೆ, ಆತ್ಮನೊಬ್ಬನೇ ಉಳಿಯುತ್ತಾನೆ ಅನೇಕಾತ್ಮರೆಂಬುದು ಉಪಾಧಿಗಳ ಧರ್ಮವೇ ವಿನಾ ಆತ್ಮನ ಧರ್ಮವಲ್ಲ ಏಕೆಂದರೆ "**ಏಕಧಾ ಬಹುಧಾ ಚೈವ ದೃಶ್ಯತೇ ಜಲಚಂದ್ರವತ್**" ಎಂಬಂತೆ ಒಬ್ಬ ಚಂದ್ರನೇ ಜಲಪೂರಿತ ಅನೇಕ ಘಟಗಳಲ್ಲಿ ಪ್ರತಿಫಲಿಸಿ, ಅನೇಕ ಚಂದ್ರರಾಗಿ ತೋರುವಂತೆ ಒಬ್ಬ ಆತ್ಮನೇ ಅನೇಕ ದೇಹಕರಣಗಳಲ್ಲಿ ಪ್ರತಿಫಲಿಸಿ, ಅನೇಕಾತ್ಮರಾಗಿ ತೋರುತ್ತಾನೆ. ಅನೇಕ ಚಂದ್ರರಾಗಿ ತೋರಿದ್ದು ಘಟಗಳ ದೃಷ್ಟಿಯಿಂದಲ್ಲದೆ ಚಂದ್ರನ ದೃಷ್ಟಿಯಿಂದಲ್ಲ. ಹೇಗೋ ಹಾಗೆ, ಶರೀರಗಳ ದೃಷ್ಟಿಯಿಂದ ಆತ್ಮನು ಅನೇಕಾತ್ಮರಾಗಿ ತೋರುವನಾಗಲೀ ಆತ್ಮನ ದೃಷ್ಟಿಯಿಂದಲ್ಲ. ನಮ್ಮ ತಲೆಯನ್ನು ಮೇಲಕ್ಕೆತ್ತಿ ಊರ್ಧ್ವದೃಷ್ಟಿಯಿಂದ ಚಂದ್ರನನ್ನು ನೋಡಿದರೆ ಅಲ್ಲಿ ಚಂದ್ರನೊಬ್ಬನೇ ಕಾಣುತ್ತಾನಾಗಲೀ, ಹಲವು ಚಂದ್ರರಾಗಿ ತೋರುವುದಿಲ್ಲ. ಆ ನಮ್ಮ ದೃಷ್ಟಿಯನ್ನು ಅಧೋಭಾಗಮಾಡಿದಲ್ಲಿ ಘಟದಲ್ಲಿ ಪ್ರತಿಬಿಂಬಿತವಾದ ಅನೇಕ ಚಂದ್ರರು ಕಾಣುತ್ತಾರೆ. ಅಂದರೆ ನಮ್ಮ ದೃಷ್ಟಿಯು ಊರ್ಧ್ವವಾದಲ್ಲಿ ಒಬ್ಬ ಚಂದ್ರನೂ, ಅಧೋಮುಖವಾದಲ್ಲಿ ಅನೇಕ ಚಂದ್ರರೂ. ತೋರುತ್ತಾರೆ. ಇದರಂತೆ ಆತ್ಮನು ಸುವಿಚಾರ ದೃಷ್ಟಿಯಿಂದ ಒಬ್ಬನಾಗಿಯೂ, ಅವಿಚಾರ ದೃಷ್ಟಿಯಿಂದ ಅನೇಕವಾಗಿಯೂ, ತೋರುತ್ತಾನೆ. ಆ ಏಕಾತ್ಮನಿಗೆ ದೇಹೋಪಾಧಿಗಳಿಂದ ಅನೇಕತ್ವವುಂಟಾಗುವುದಾಗಲೀ, ಸ್ವರೂಪದಿಂದ ಅನೇಕತ್ವವು ಸಿದ್ಧಿಸುವುದಿಲ್ಲ. ಇಲ್ಲಿ ಗ್ರಂಥಕರ್ತರು ಆತ್ಮನು ಅಸಂಗನೂ, ಏಕನೂ, ಎಂದು ಹೇಳಿರುವುದರಿಂದ ಆತ್ಮನು ಅನೇಕ ಶರೀರಗಳಲ್ಲಿ ವ್ಯಾಪಿಸಿಕೊಂಡಿದ್ದರೂ, ಆ ಶರೀರಗಳ ಸಂಗವು

ಆತ್ಮನಿಗೆ ಇಲ್ಲವೆಂದು ಗ್ರಹಿಸಬೇಕು. ಆಕಾಶವು ಅನೇಕ ಸುಗಂಧ ದುರ್ಗಂಧ ಪೂರಿತ ಘಟಗಳಲ್ಲಿ ತುಂಬಿಕೊಂಡಿದ್ದರೂ, ಆ ಸುಗಂಧ ದುರ್ಗಂಧದ ಸಂಬಂಧ ವಿಲ್ಲದೆ ನಿಸ್ಸಂಗವಾಗಿ ಏಕವಾಗಿರುವಂತೆ, ಆತ್ಮನು ಊಚನೀಚ ದೇಹಗಳಲ್ಲಿ ತುಂಬಿ ಕೊಂಡಿದ್ದರೂ, ಆ ಊಚನೀಚತ್ವಗಳು ಆತ್ಮನಿಗಿಲ್ಲದೆ ನಿರ್ಲಿಪ್ತವಾಗಿಯೂ, ಏಕ ವಾಗಿಯೂ, ಇರುತ್ತಾನೆ. ಎಂಬುದನ್ನು ಓದುಗರು ತಿಳಿದುಕೊಳ್ಳಬೇಕು. ಮತ್ತು ನಾನತ್ವಕ್ಕೆ ಕಾರಣವಾದುದು ಉಪಾಧಿಯೇ ಎಂದು ಗ್ರಹಿಸಬೇಕು. ಈ ವಿಷಯವು ಜಡಬುದ್ಧಿಗಳಿಗೂ ಸಹ ವೇದ್ಯವಾಗುವಂತೆ ಭೂಮಿಯ ಉದಾಹರಣೆಯನ್ನು ಗ್ರಂಥ ಕರ್ತರು ಮೇಲಿನ ಶ್ಲೋಕದಲ್ಲಿ ಸೂಚಿಸಿರುತ್ತಾರೆ. ಹೇಗೆಂದರೆ, ಒಂದೇ ಆದ ಭೂಮಿಯನ್ನು ಎತ್ತರವಾಗಿ ಕಟ್ಟುವುದರಿಂದ ಗೋಡೆಯೆಂದೂ, ತಗ್ಗುದಿಬ್ಬವನ್ನು ಸಮ ವಾಗಿ ಮಾಡುವುದರಿಂದ ದಾರಿಯೆಂದೂ, ನಾಲ್ಕುಭಾಗಗಳಲ್ಲಿ ಗೋಡೆಯನ್ನು ನಿರ್ಮಿ ಸಿದರೆ ಪೌಳಿಯೆಂದೂ, ಅದಕ್ಕೆ ಮೇಲ್ಭಾಗದಲ್ಲಿ ಚಾವಣಿಯನ್ನು ಹಾಕಿದರೆ ಮನೆ ಯೆಂದೂ, ಅನ್ನಿಸಿಕೊಳ್ಳುತ್ತದೆ ಇಲ್ಲಿ ಗೋಡೆ ದಾರಿ, ಪೌಳಿ, ಮನೆ, ಎಂದು ಭಿನ್ನಭಿನ್ನವಾದ ಹೆಸರುಗಳು ಬರಬೇಕಾದರೆ ಆಯಾ ಉಪಾಧಿ ದೃಷ್ಟಿಯಿಂದ ಆ ಹೆಸರುಗಳು ಬಂದವಷ್ಟೇ ವಿನಾ ಭೂಮಿಯ ದೃಷ್ಟಿಯಿಂದಲ್ಲ. ಭೂಮಿಯು ಮಾತ್ರ ಒಂದೇ ಆಗಿರುತ್ತದೆ. ಇದರಂತೆ, ಆತ್ಮನು ದೇಹಗಳ ಉಪಾಧಿಯಿಂದ ಅನೇಕ ಜೀವಾತ್ಮರಾಗಿ ತೋರುತ್ತಾನಾಗಲೀ, ಸ್ವರೂಪದೃಷ್ಟಿಯಿಂದಲ್ಲ. ಆದ್ದರಿಂದ ಆತ್ಮನು ನಿಸ್ಸಂಗನಾಗಿಯೂ, ಏಕನಾಗಿಯೂ, ಇರುತ್ತಾನೆಂಬುದನ್ನು ಕೇವಲ ದಡ್ಡರೂ ಸಹ ತಿಳಿದುಕೊಳ್ಳಬಹುದು.

## ಶಾರ್ದೂಲ ವಿಕ್ರೀಡಿತಾವೃತ್ತ.

ಸಂಗಂ ವರ್ಜಿತನೊಬ್ಬ ಶುದ್ಧ ಶಿವನೇ ದೇಹಾಳಿಯಾಪಾಧಿಯಿಂ ।
ಕಂಗಳ್ಗಂ ಬಹುರೂಪ ಜೀವರೆನಿಸು, ತ್ತಂ ಕಾಣ್ಬನೆಂತೆನ್ನಲೀ ।
ತುಂಗಃ ಪೃಥ್ವಿಯದೊಂದೆ ಕಟ್ಟಡದವೋ, ಲಿಂದಂ ಗೃಹಂ ದಾರಿಯೆಂ ।
ದಂಗೀಕಾರವ ಮಾಳ್ಪರೀತಿ ತಿಳಿಯ, ಲ್ಕೀಕಾತ್ಮ ನಿಸ್ಸಂಗದಾ ॥ ೨೧ ॥

**ಅವತಾರಿಕೆ** :– ಆತ್ಮನೊಬ್ಬನೇ ದೇಹಗಳ ಉಪಾಧಿಯಿಂದ ಹಲವಾತ್ಮರಂತೆ ಕಾಣುತ್ತಾನೆಂದು ಪೃಥ್ವಿಯ ಉದಾಹರಣೆಯನ್ನು ಕೊಟ್ಟು ಹೇಳಿದಿರಿ. ಈ ಮಾತು ನಮ್ಮ ಅನುಭವಕ್ಕೆ ಬರುವುದಿಲ್ಲ. ಏಕೆಂದರೆ ಆತ್ಮನು ಒಬ್ಬನೇ ಆದಮೇಲೆ ಒಬ್ಬ ಆತ್ಮನು ಮುಕ್ತನಾದರೆ ಸರ್ವ ಆತ್ಮರೂ ಮುಕ್ತರಾಗಬೇಕು. ಒಬ್ಬ ಆತ್ಮನು ಊಟಮಾಡಿದರೆ ಸರ್ವ ಆತ್ಮರಿಗೆ ತೃಪ್ತಿಯಾಗಬೇಕಾಗಿತ್ತು. ಹೀಗಿಲ್ಲದಿರುವುದರಿಂದ

ಇದು ನಮ್ಮ ಅನುಭವಕ್ಕೆ ವಿರುದ್ಧವಾಗಿದೆ. ಆದ್ದರಿಂದ ಆತ್ಮನೊಬ್ಬನೇ ಎಂದು ಹೇಳುವುದೆಂತು ? ಮತ್ತು ಆತ್ಮನು ಒಬ್ಬನೇ ಆಗಿದ್ದರೆ ಎಲ್ಲಾ ಆತ್ಮರಿಗೆ ಒಂದೇ ಹೆಸರು ಬರಬೇಕಾಗಿತ್ತು. ಆತ್ಮರಲ್ಲಿ ದೇವಾತ್ಮನು, ರಾಕ್ಷಸಾತ್ಮನು, ಮಾನವಾತ್ಮನು, ಪಶ್ವಾತ್ಮನು, ಹೀಗೆ ಭಿನ್ನಭಿನ್ನವಾಗಿ ಹೆಸರುಗಳು ಇರುವುದರಿಂದ ಏಕಾತ್ಮನೆಂಬುದು ಸಿದ್ಧಿಸುವುದೆಂತು ? ಎಂಬ ಪ್ರಶ್ನೆಗಳಿಗೆ ಆತ್ಮನು ಒಬ್ಬನೇ ಇದ್ದರೂ, ಶರೀರಗಳ ಉಪಾಧಿಯಿಂದ ಹಲವಾತ್ಮರಾಗಿತೋರಿ, ಹಲವು ಹೆಸರುಗಳು ಬಂದಿರುತ್ತವೆ. ಎಂಬುದು ಸ್ವಾನುಭವಕ್ಕೆ ಬರುವಂತೆ ಜಾಗ್ರದಾದ್ಯುಪಾಧಿಗಳಿಂದ ವಿಶ್ವಾದಿ ನಾಮಗಳು ಒಬ್ಬಾತ್ಮನಿಗೇ ಸಂಭವಿಸುತ್ತವೆ. ಎಂಬ ಉತ್ತರವನ್ನು ಮುಂದಿನ ಶ್ಲೋಕದಲ್ಲಿ ಸೂಚಿಸುತ್ತಾರೆ.

## ಅನುಷ್ಟುಪ್ ವೃತ್ತ.

**ಜಾಗ್ರಾದ್ಯುಪಾಧೇರ್ವಿಶ್ವಾದಿ । ತ್ರೈವಿಧ್ಯಂ ಚಾತ್ಮನೋ ವಿಭೋಃ ।**
**ಅಂಗಣಾಗಾರಕೋಣಾನಾಂ । ವ್ಯಾಪಾರಾನ್ನಭಸೋಯಥಾ ॥ ೨೨ ॥**

**ಪದಚ್ಛೇದ** :- ಜಾಗ್ರ, ಆದಿ, ಉಪಾಧೇಃ, ವಿಶ್ವ, ಆದಿ, ತ್ರೈವಿಧ್ಯಂಚ, ಆತ್ಮನಃ, ವಿಭೋಃ, ಅಂಗಣ, ಆಗಾರ, ಕೋಣಾನಾಂ, ವ್ಯಾಪಾರಾತ್, ನಭಸಃ, ಯಥಾ,

**ಟೀಕ** ;- ವಿಭೋಃ = ವ್ಯಾಪಕನಾದಂಥ । ಆತ್ಮನಃ = ಆತ್ಮನಿಗೆ । ಜಾಗ್ರ = ಜಾಗ್ರದವಸ್ಥೆಯೇ । ಆದಿ = ಮೊದಲಾದ ( ಸ್ವಪ್ನ ಸುಷುಪ್ತಿಗಳೆಂಬುವ) ಉಪಾಧೇಃ = ಉಪಾಧಿಯಿಂದ । ವಿಶ್ವ = ವಿಶ್ವನೇ । ಆದಿ = ಮುಂತಾದ (ತೈಜಸ, ಪ್ರಾಜ್ಞರೆಂದು) ತ್ರೈವಿಧ್ಯಂ = ತ್ರಿವಿಧತ್ವವು । ಅಂಗಣ = ಅಂಗಳ । ಆಗಾರ = ಮನೆ । ಕೋಣಾನಾಂ = ಮೂಲೆಗಳ । ವ್ಯಾಪಾರಾತ್ = ವ್ಯಾಪಾರದಿಂದ । ನಭಸಃ = ಆಕಾಶಕ್ಕೆ । ಯಥಾ = ಹೇಗೋ ಹಾಗೆ ।

**ತಾತ್ಪರ್ಯ** :- ವ್ಯಾಪಕವಾದಂಥ ಆತ್ಮನಿಗೆ ಜಾಗ್ರತ್ಸ್ವಪ್ನ ಸುಷುಪ್ತಿಗಳೆಂಬ ಅವಸ್ಥೆಗಳ ಉಪಾಧಿಮೂಲಕ ವಿಶ್ವ ತೈಜಸ ಪ್ರಾಜ್ಞ ಎಂಬ ತ್ರಿವಿಧ ಹೆಸರುಗಳು ಬಂದಿರುತ್ತವೆ. ವ್ಯಾಪಕವಾದ ಆಕಾಶವೊಂದೇ ಉಪಾಧಿಮೂಲಕ ಅಂಗಳ ಗೃಹ, ಮೂಲೆ, ಮುಂತಾದ ಹೆಸರುಗಳನ್ನು ಪಡೆದಂತೆಂದು ತಿಳಿಯಬೇಕು.

**ವಿಶೇಷಾರ್ಥ** ;- ಆತ್ಮನು ಒಬ್ಬನೇ ಇದ್ದುದಾದರೆ ಒಬ್ಬಾತ್ಮನು ಮುಕ್ತನಾದರೆ ಸರ್ವ ಆತ್ಮರೂ ಮುಕ್ತರಾಗಬೇಕು. ಒಬ್ಬಾತ್ಮನು ಊಟಮಾಡಿದರೆ

ಸರ್ವಾತ್ಮರೂ ತೃಪ್ತಿಪಡಬೇಕು. ಎಂದು ಅವತಾರಿಕೆಯಲ್ಲಿ ಪ್ರಶ್ನಿಸಿದ ಹಲವಾತ್ಮ ವಾದಿಯ ಮತವು ಸಮಾಚೀನವಲ್ಲ ಏಕೆಂದರೆ ಆತ್ಮನ ಸ್ವರೂಪವನ್ನು ಯಥಾರ್ಥ ವಾಗಿ ಅರಿಯದೆ, ದೇಹಕರಣಾದಿಗಳೇ ಆತ್ಮವೆಂದು ಅರಿತು ಆ ದೇಹಕರಣಾದಿ ಗಳ ಅನೇಕತ್ವದಿಂದ ಆತ್ಮರೂ ಅನೇಕರೆಂದು ಹೇಳುವುದು ತಪ್ಪುತಿಳುವಳಿಕೆಯ ಮಾತಾಗಿದೆ. ಒಂದು ಘಟವು ನಾಶವಾದರೆ ಅದರಲ್ಲಿ ಪ್ರತಿಬಿಂಬಿತನಾದ ಸೂರ್ಯನು, ನಿಜ ಸೂರ್ಯನಲ್ಲಿ ವಿಲಯವಾದಂತೆ, ಉಳಿದ ಘಟಗಳಲ್ಲಿ ಪ್ರತಿಬಿಂಬಿಸಿದ ಸೂರ್ಯನು ನಿಜಸೂರ್ಯನಲ್ಲಿ ವಿಲಯವಾಗುವುದಿಲ್ಲ. ಇದರಂತೆ ಅಂತಃಕರಣ ವಿಶಿಷ್ಟನಾದ (ಅವಿದ್ಯೋಪಾಧಿಯಿಂದ ಕೂಡಿದ) ಜೀವಾತ್ಮನು ಅಂತಃಕರಣ (ಉಪಾಧಿ) ನಾಶವಾದೊಡನೆಯೇ ಪರಮಾತ್ಮನಲ್ಲಿ ವಿಲೀನ ಹೊಂದುತ್ತಾನೆ. ಉಳಿದ ಜೀವಾತ್ಮರು ಪರಮಾತ್ಮನಲ್ಲಿ ವಿಲೀನ ಹೊಂದುವುದಿಲ್ಲ. ಆದ್ದರಿಂದ ಒಬ್ಬಾತ್ಮನು ಮುಕ್ತನಾದರೆ ಸರ್ವಾತ್ಮರೂ ಮುಕ್ತರಾಗುವುದಿಲ್ಲ. ಯಾವ ಜೀವಾತ್ಮನು ತನ್ನ ಅವಿದ್ಯೋಪಾಧಿಯಿಂದ ಬಿಡುಗಡೆಹೊಂದುತ್ತಾನೆಯೋ ಆ ಆತ್ಮನು ಮಾತ್ರ ಮುಕ್ತನಾಗುತ್ತಾನೆ. ಇಲ್ಲಿ ಆತ್ಮನು ಮುಕ್ತನಾಗುತ್ತಾನೆ. ಎಂಬ ಮಾತು ಉಪಚಾರಿಕವಾದುದು. ಆತ್ಮನು ಸದಾ ಮುಕ್ತಸ್ವರೂಪನೇ ಇರುವನು. ಉಪಾಧಿ ಮೂಲಕ ಬಂಧತ್ವವು ಆರೋಪಿತವಾಗಿದೆ. ಉಪಾಧಿಯ ಮೂಲಕ ಆತ್ಮನಲ್ಲಿ ಬಂಧತ್ವ ಮುಕ್ತತ್ವಗಳನ್ನು ಹೇಳಬೇಕು. ಆ ಉಪಾಧಿಗಳು ಅನೇಕವಾಗಿಯೂ, ಪರಿಚ್ಛಿನ್ನವಾಗಿಯೂ, ಇರುವುದರಿಂದ ಆ ಉಪಾಧಿಗೊಳಪಟ್ಟ ಆತ್ಮನು ಅನೇಕನಾಗಿಯೂ, ಪರಿಚ್ಛಿನ್ನನಾಗಿಯೂ, ಭಾಸಿಸುತ್ತಾನೆ. ಅನೇಕತ್ವವು ಉಪಾಧಿಯಲ್ಲಿ ಉಂಟಾಗಲೀ ಆತ್ಮನಲ್ಲಿ ಇರುವುದಿಲ್ಲ. ಅನೇಕತ್ವವು ಘಟೋಪಾಧಿಗಳಲ್ಲಿ ತೋರುವ ಪ್ರತಿಬಿಂಬಗಳಿಗುಂಟಾಗಲೀ, ಬಿಂಬಭೂತವಾದ ಸೂರ್ಯನಲ್ಲಿ ಇರುವುದಿಲ್ಲ. ಆದ್ದರಿಂದ ಅನೇಕಾತ್ಮರುಂಟೆಂಬುದು ತಪ್ಪುತಿಳುವಳಿಕೆಯ ಮಾತಾಗಿದೆ.

ಒಬ್ಬಾತ್ಮನು ಊಟಮಾಡಿದರೆ ಸರ್ವಾತ್ಮರೂ ತೃಪ್ತರಾಗಬೇಕು ? ಎಂಬ ಪ್ರಶ್ನೆಯು ಸಮಾಚೀನವಲ್ಲ ಎಕೆಂದರೆ ,ಆತ್ಮನು ಊಟಮಾಡುವವನಲ್ಲ. ಹಸಿವು ತೃಷೆಗಳು ಪ್ರಾಣದಧರ್ಮವಾಗಲೀ ಆತ್ಮನ ಧರ್ಮವಲ್ಲ. ಆತ್ಮನು ನಿತ್ಯತೃಪ್ತನಾಗಿದ್ದಾನೆ. ಮತ್ತು ಏಕನಾಗಿದ್ದಾನೆ. ಇಂತಹ ಆತ್ಮನಲ್ಲಿ ಅನೇಕತ್ವವೆಂಬುದಕ್ಕೆಡೆಯಿಲ್ಲ. ಆದರೂ ಅನೇಕತ್ವವೆಂಬುದು ಉಪಾಧಿಯ ದೃಷ್ಟಿಯಿಂದರಿಯಬೇಕು. ವಾಸ್ತವಿಕವಾಗಿ ಆತ್ಮನಲ್ಲಿ ಅನೇಕತ್ವವಿಲ್ಲ ಒಂದೇ ದೇಹದಲ್ಲಿರುವ ಆತ್ಮನು ಅವಸ್ಥಾತ್ರಯಗಳ ಉಪಾಧಿಯಿಂದ ಮೂರುಬಗೆಯಿಂದತೋರಿ ಮೂರುನಾಮಗಳನ್ನಾಂತಿರುವನು. ಹೇಗೆಂದರೆ ಜಾಗ್ರದವಸ್ಥೆಯ ಉಪಾಧಿಯಿಂದ ಆ ಒಬ್ಬನಾದ ಆತ್ಮನು ವಿಶ್ವವ್ಯವಹಾರದಲ್ಲಿ ವ್ಯವಹರಿಸಿ ವಿಶ್ವನೆಂಬ ಹೆಸರನ್ನು ಪಡೆದನು. ಸ್ವಪ್ನಾ

ವಸ್ಥೆಯ ಉಪಾಧಿಯಿಂದ ಆ ಆತ್ಮನೇ ಆಭಾಸಾತ್ಮಕ ಸ್ವಪ್ನಪ್ರಪಂಚದಲ್ಲಿ ವ್ಯವಹರಿಸಿ, ತೈಜಸನೆಂಬ ಹೆಸರನ್ನು ಪಡೆದನು. ಸುಷುಪ್ತ್ಯಾವಸ್ಥೆಯ ಉಪಾಧಿಯಿಂದ ಆ ಆತ್ಮನೇ ಅವಿದ್ಯಾಸಹಿತ ನಿದ್ರಾಸುಖವನ್ನು ಅನುಭವಿಸುತ್ತ ಪ್ರಾಜ್ಞನೆಂಬ ಹೆಸರನ್ನು ಪಡೆದನು. ಅಂದರೆ ವ್ಯಾಪಕನಾದ ಒಬ್ಬಾತ್ಮನೇ ಜಾಗ್ರದಾದಿ ಅವಸ್ಥೆಗಳ ಉಪಾಧಿಯಿಂದ ವಿಶ್ವ ತೈಜಸ ಪ್ರಾಜ್ಞ ಎಂಬ ಹೆಸರುಗಳನ್ನು ಪಡೆದಿರುತ್ತಾನೆ ಇದು ಸರ್ವಾನುಭವಗೋಚರವಾದ ಸಂಗತಿ. ಗ್ರಂಥಕರ್ತರು ಒಬ್ಬಾತ್ಮನಿಗೆ ಆ ಮೂರು ಹೆಸರುಗಳು ಉಪಾಧಿಯಿಂದ ಬಂದಿರುವವೆಂಬ ಬಗ್ಗೆ ವ್ಯಾಪಕವಾದ, ಆಕಾಶವೊಂದೇ ಉಪಾಧಿಯ ಮೂಲಕ ಅಂಗಣ, ಮನೆ, ಮೂಲೆ, ಎಂಬ ಹೆಸರುಗಳನ್ನು ಪಡೆದಿರುವುದೆಂಬ ಉದಾಹರಣೆಯನ್ನಿತ್ತಿರುವುದು ಹೃದಯಂಗಮವಾಗಿದೆ ಸಮಂಜಸವಾಗಿದೆ. ಹೇಗೆಂದರೆ ಜಾಗ್ರದವಸ್ಥೆಯು ಮನೆಯ ಮುಂಭಾಗದಲ್ಲಿರುವ ಅಂಗಳವಾಗಿದೆ. ಸ್ವಪ್ನಾವಸ್ಥೆಯು ಮನೆಯಾಗಿದೆ. ಸುಷುಪ್ತ್ಯಾವಸ್ಥೆಯು ಆ ಮನೆಯಲ್ಲಿನ ಮೂಲೆಯಾಗಿದೆ. ಆತ್ಮನು ಆಕಾಶದಂತಿರುವನು. ಆಕಾಶವು ಒಂದೇ ಆಗಿದ್ದರೂ, ಉಪಾಧಿಯಮೂಲಕ ಅಂಗಳ, ಮನೆ. ಮೂಲೆ, ಎಂದೆನಿಸಿಕೊಳ್ಳುವಂತೆ, ಆತ್ಮನೊಬ್ಬನೇ ಜಾಗ್ರದಾದಿ ಅವಸ್ಥೆಗಳ ಉಪಾಧಿಯಿಂದ ವಿಶ್ವ, ತೈಜಸ, ಪ್ರಾಜ್ಞನೆಂದು ಎನಿಸಿಕೊಂಡಿರುತ್ತಾನೆ, ಆತ್ಮನು ಮಾತ್ರ ಒಬ್ಬನೆಂಬುದೇ ಸಿದ್ಧಾಂತವು

**ಕಂದ.**

ನೆನಸಾದ್ಯುಪಾಧಿ ಯಿಂದಲಿ।
ಘನವಿಭುವಾತ್ಮಂಗೆ ವಿಶ್ವ ಮೊದಲಹ ಪೆಸರುಂ॥
ಅನುವಪ್ಪವು ನಭವೊಂದೇ।
ಮನೆ ಮೂಲೆಯು ಮುಂದಣಂಗಣೆಂಬುವ ವಿಧದಿಂ ॥ ೨೨ ॥

**ಅವತಾರಿಕೆ :—** ಆತ್ಮನು ಏಕನೆಂತಲೂ. ತನುಕರಣಾದಿಗಳ ಉಪಾಧಿ ದೃಷ್ಟಿಯಿಂದ ಅನೇಕನಾಗಿ ಭಾಸಿಸುತ್ತಾನೆಂತಲೂ, ಹೇಳಿದಿರಿ. ಮತ್ತು ಆತ್ಮನು ನಿತ್ಯಮುಕ್ತ ನಿರ್ಲಿಪ್ತನಾದರೆ, ಸಂಸಾರ ತೊಂದರೆಗಳಿಗೀಡಾಗಿ, ಬಳಲುವನೇಕೆ? ಆತ್ಮನು ನಿತ್ಯಮುಕ್ತ ನಿರ್ಲಿಪ್ತನಾಗಿದ್ದ ಪಕ್ಷದಲ್ಲಿ ಯಾವತೊಂದರೆಗೀಡಾಗದೆ ಯಾವ ವಿಕಾರತ್ವವನ್ನು ಹೊಂದದೆ ತನ್ನ ಸಹಜಾವಸ್ಥೆಯಲ್ಲಿರಬೇಕಾಗಿತ್ತು. ಈರೀತಿಯಾಗಿರದೆ ಕಾಮ ಕ್ರೋಧಾದಿ ಷಡ್ವರ್ಗದ ಬಲೆಯಲ್ಲಿಬಿದ್ದು, ಅನೇಕ ಸಂಕಟಗಳಿಗೆ ಗುರಿಯಾಗಿ ವ್ಯಥೆಪಡುತ್ತಿರುವನು. ಆದ್ದರಿಂದ ಆತ್ಮನು ನಿತ್ಯಮುಕ್ತನು ಏಕನು, ನಿರ್ಲಿಪ್ತನು. ವಿಕಾರತ್ವವಿಲ್ಲದವನು, ಎಂದು ಹೇಳುವುದು ಹೇಗೆ? ಎಂಬ ಪ್ರಶ್ನೆಗೆ

ಆತ್ಮನು ನಿತ್ಯಮುಕ್ತನಹುದೆಂತಲೂ, ಆ ಸಂಕಟಗಳೆಲ್ಲವೂ ದೇಹಕರಣಾದಿಗಳ ಸಂಸರ್ಗದಿಂದುಂಟಾದಹಾಗೆ ತೋರುವುದೆಂತಲೂ, ಆತ್ಮನು ( ಪ್ರತ್ಯಗಾತ್ಮನು ) ಯಾವ ಬಾಧೆಗೂ ಗುರಿಯಾಗದೆ ನಿರ್ವಿಕಾರಿಯಾಗಿರುತ್ತಾನೆಂತಲೂ, ಮುಂದಿನ ಶ್ಲೋಕದಲ್ಲಿ ಉತ್ತರಿಸುತ್ತಾರೆ.

## * ಮಾಲಿನೀ ವೃತ್ತ.

ವಿವಿಧಕರಣ ದೋಷೋಲ್ಲೀಢನಾತ್ಪ್ರತ್ಯಗಾತ್ಮಾ ।
ವಿವಿಧಇವ ನಟತ್ಯಪ್ಯದ್ವಯೋ ನಿರ್ವಿಕಾರೀ ।
ಕಲುಷಗಮನ ಭಂಗಾವರ್ತತೋಯೇಷು ಬಿಂಬನ್ ।
ಭವತಿಕುಮುದಬಂಧುಃ ಕಿನ್ನುತತ್ತದ್ವ್ಯವಸ್ಥಾಃ ॥ ೨೩ ॥

**ಪದಚ್ಛೇದ** :— ವಿವಿಧ, ಕರಣ, ದೋಷೋಲ್ಲೀಢನಾತ್, ಪ್ರತ್ಯಗಾತ್ಮಾ, ವಿವಿಧಇವ, ನಟತಿ, ಅಪಿ, ಅದ್ವಯಃ, ನಿರ್ವಿಕಾರೀ, ಕಲುಷ, ಗಮನ, ಭಂಗ, ಆವರ್ತಃ, ತೋಯೇಷು, ಬಿಂಬನ್, ಭವತಿ, ಕುಮುದಬಂಧುಃ, ಕಿನ್ನು, ತತ್ತತ್, ವ್ಯವಸ್ಥಾಃ

**ಟೀಕ** :— ಪ್ರತ್ಯಗಾತ್ಮಾ = ಕೂಟಸ್ಥನು । ವಿವಿಧ = ಬಹುವಿಧಗಳಾದ। ಕರಣ = ಇಂದ್ರಿಯಗಳ । ದೋಷೋಲ್ಲೀಢನಾತ್ = ದೋಷಗಳ ಸಂಘರ್ಷಣೆಯ ದೆಶೆಯಿಂದ । ವಿವಿಧ ಇವ = ನಾನಾವಿಧವೆನ್ನುವಹಾಗೆ । ನಟತಿ = ನಟಿಸುತ್ತಾನೆ । ಅಪಿ = ಹಾಗಾದರೂ ( ಆ ಕೂಟಸ್ಥನು ) ಅದ್ವಯಃ = ಅಭಿನ್ನನೂ । ನಿರ್ವಿಕಾರೀ = ವಿಕಾರ ರಹಿತನೂ ( ರೂಪಾಂತರಪ್ರಾಪ್ತಿಯಿಲ್ಲದವನು)ಆಗಿರುವನು. । (ಹೇಗೆಂದರೆ) ಕುಮುದಬಂಧುಃ = ಕನ್ನೈದಿಲೆಗೆ ಬಂಧುವಾದ ಚಂದ್ರನು । ಕಲುಷ = ಕಲ್ಮಷ ವಾದ । ಗಮನ = ಚಲಿಸುವ । ಭಂಗ = ತೆರೆಯು । ಆವರ್ತಃ = ಸುಳಿಯುವ ದೆಶೆಯಿಂದ । ತೋಯೇಷು = ಈ ಮಲಿನಾದಿ ಜಲಗಳಲ್ಲಿ । ಬಿಂಬನ್ = ಪ್ರತಿಬಿಂಬಿಸಿ । ತತ್ತತ್ = ಆಯಾಯ । ವ್ಯವಸ್ಥಾಃ = ಸ್ಥಿತಿಗತಿಗಳನ್ನು । ಭವತಿಕಿನ್ನು = ಹೊಂದುತ್ತಾನೆಯೇ ? (ಹೊಂದಲಾರನು)

**ತಾತ್ಪರ್ಯ** :- ಚಂದ್ರನು ಮಲಿನದಿಂದಲೂ, ಚಲನದಿಂದಲೂ, ತೆರೆಯಿಂದಲೂ, ಸುಳಿಯಿಂದಲೂ, ಕೂಡಿಕೊಂಡಿದ್ದ ಜಲದಲ್ಲಿ ಪ್ರತಿಬಿಂಬಿಸಿದ ಮಾತ್ರಕ್ಕೆ

* ಪ್ರತಿಯೊಂದು ಚರಣದಲ್ಲಿ ನಗಣಗಳೆರಡು, ಒಂದು ಮಗಣ, ಯುಗಣಗಳೆರಡಿದ್ದು ಎಂಟನೇ ಅಕ್ಷರಕ್ಕೆ ಯತಿಯಿದ್ದುದಾದರೆ ಮಾಲಿನೀ ವೃತ್ತವಾಗುವುದು.

ಆ ಮಲಿನತ್ವ ಚಲನತ್ವಾದಿಗಳು, ಆ ಚಂದ್ರನಿಗೆ ಹೇಗಿಲ್ಲವೋ ಹಾಗೆ ಕೂಟಸ್ಥಾತ್ಮನು ನಾನಾವಿಧ ದೇಹೇಂದ್ರಿಯಾದಿಗಳ ಸಂಘರ್ಷಣೆಯಿಂದ, ನಾನಾವಿಧ ನಟಿಸಿದಂತೆ ಕಂಡರೂ, ಆ ನಾನಾವಿಧತ್ವವು ಆ ಕೂಟಸ್ಥನಿಗಿರುವುದಿಲ್ಲ. ಆತ್ಮನು ಯಾವಾಗಲೂ ಅದ್ವಯನೂ, ನಿರ್ವಿಕಾರರೂಪನೂ, ಆಗಿರುತ್ತಾನೆ.

**ವಿಶೇಷಾರ್ಥ ;—** ನಿತ್ಯಮುಕ್ತ ನಿರ್ವಿಕಾರ ಸ್ವರೂಪನಾದ ಆತ್ಮನಲ್ಲಿ, ಕಾಮಕ್ರೋಧಾದಿಗಳ ವಿಕಾರತ್ವವಿರುವುದಿಲ್ಲ. ಕಾಮಕ್ರೋಧಾದಿಗಳ ವಿಕಾರತ್ವವೆಲ್ಲವೂ, ಕರಣಗಳ ಧರ್ಮವೇ ಹೊರತು ಆತ್ಮನ ಧರ್ಮವಲ್ಲ ಆತ್ಮನು ಯಾವ ಸಂಕಟಕ್ಕೂ ಗುರಿಯಾಗುವವನಲ್ಲ ಸಂಸಾರ ಧರ್ಮಗಳೆಲ್ಲವೂ ದೇಹಾದಿಗಳಿಗಲ್ಲದೆ ಅವುಗಳನ್ನರಿಯುತ್ತಿರುವ ಆತ್ಮನಲ್ಲಿರುವುದಿಲ್ಲ. ದೇಹಕರಣಾದಿಗಳ ಸಂಘರ್ಷಣೆಯಿಂದ ಆತ್ಮನು ಸಂಕಟಕ್ಕೊಳಪಟ್ಟಂತೆ ಕಂಡುಬಂದರೂ, ಸುವಿಚಾರ ದೃಷ್ಟಿಯಿಂದ ನೋಡಿದರೆ ಆ ಸಂಕಟಕ್ಕೊಳಪಟ್ಟಿರುವುದಿಲ್ಲ. ಮಲಿನತ್ವದಿಂದಲೂ, ಚಲನತ್ವದಿಂದಲೂ ಸುಳಿಯಿಂದಲೂ, ತೆರೆಗಳಿಂದಲೂ, ಕೂಡಿದ ಜಲದಲ್ಲಿ ಚಂದ್ರಮನು ಪ್ರತಿಬಿಂಬಿಸಿದಾಗ್ಯೂ, ಆ ಮಲಿನತ್ವ ಚಲನತ್ವಾದಿಗಳು ಪ್ರತಿಬಿಂಬದಲ್ಲಿ ಕಂಡುಬಂದರೂ, ಬಿಂಬಭೂತ ಚಂದ್ರನಲ್ಲಿ ಹೇಗೆ ಇರುವುದಿಲ್ಲವೋ ಹಾಗೆಯೇ ವಿವಿಧ ಕರಣಗಳಲ್ಲಿ ಆತ್ಮನು ಪ್ರತಿಬಿಂಬಿಸಿ ( ಆಭಾಸಮಾತ್ರವಾಗಿ ) ವಿವಿಧರೂಪದಿಂದ ಕಂಡುಬಂದರೂ, ಆ ವಿವಿಧತ್ವವು ಆತ್ಮನಲ್ಲಿರುವುದಿಲ್ಲ. ಆತ್ಮನು ಸದಾ ನಿರ್ವಿಕಾರ ಸ್ವರೂಪನಾಗಿರುತ್ತಾನೆ. ಅಂದರೆ ಯಾವಯಾವ ಕರಣಗಳು ಹೇಗೆಹೇಗೆ ಚಲಿಸುತ್ತಿರುತ್ತವೆಯೋ ಅದರಂತೆ ಆತ್ಮನು ಅವುಗಳಲ್ಲಿ ಬೆರೆತುಕೊಂಡಿದ್ದರೂ, ಬೇರೆಬೇರೆಯಾಗಿ, ರೂಪಾಂತರವನ್ನು ಹೊಂದದೆ, ಅವುಗಳನ್ನರಿಯುತ್ತಾ ಸಾಕ್ಷಿಯಾಗಿರುತ್ತಾನೆ

### ಭಾಮಿನಿ ಷಟ್ಪದಿ.

ವಿವಿಧವಾಗಿಹ ಕರಣದೋಷದಿ ।
ವ್ಯವಹರಿಪನೀ ಪ್ರತ್ಯಗಾತ್ಮನು ।
ವಿವರಿಸಲ್ಕೀಯಾತ್ಮನದ್ವಯರೂಪ ನವಿಕಾರಿ ॥
ಭವವಿದೂರನೆ ಯಹುದು, ಚಂದ್ರನು ।
ವಿವಿಧಕಲ್ಮಷ ಜಲದೊಳಗೆ ಪ್ರತಿ ।
ಭವಿಸಿ ನಟಿಸಲ್ಕದರವೋಲಪ್ಪವನೆ ? ತಿಳಿಯಲ್ಕೆ ॥ ೨೩ ॥

**ಅವತಾರಿಕೆ ;** - ಆತ್ಮನು ಕರಣಗಳೊಡನೆ ಬೆರೆತರೂ, ಅವುಗಳ ವಿಕಾರತ್ವವಿಲ್ಲದೆ, ಅವುಗಳಿಗೆ ಸಾಕ್ಷಿಯಾಗಿದ್ದಾನೆಂದು ಹೇಳಿದಿರಿ. ಆದರೆ ಸಾಕ್ಷಿಯಾ

ಗಿರುವುದೆಂತು ? ಆ ಸಾಕ್ಷಿಯಾತ್ಮನಿಗಿರುವ ಲಕ್ಷಣವೇನು ? ಮತ್ತು ಆತ್ಮನು ಸಾಕ್ಷಿಯಾಗಿದ್ದಾನೆಂದು ಅರಿತು ಕೊಳ್ಳುವುದಕ್ಕೆ ಉಪಮಾನವೇನು? ಎಂಬ ಪ್ರಶ್ನೆಗಳಿಗೆ ಆತ್ಮನು ಸರ್ವ ಕರಣೇಂದ್ರಿಯಗಳನ್ನರಿಯುತ್ತ ದೇಹಳಿದೀಪನ್ಯಾಯದಂತೆ ಸಾಕ್ಷಿಸ್ವರೂಪದಿಂದಿರುವನೆಂದು ಮುಂದಿನ ಶ್ಲೋಕದಲ್ಲಿ ಸೂಚಿಸುತ್ತಾರೆ.

## * ತೋಟಕ ವೃತ್ತ.

ಕರಣೇಂದ್ರಿಯ ಯೋರ್ನಿಜಕೃತ್ಯ ಭೃತೋಃ ।
ಪುರುಷಃ ಖಲು ಸಾಕ್ಷಿಕಯೇವ ತನೌ ।
ಜನಯೋರ್ಬಹಿರಂತರ ಸಂಸರತೋಃ ।
ಸ್ಸದನೇ ಸುಖದೇಹಳಿ ದೀಪಇವಾ ॥

ಪದಚ್ಛೇದ :- ಕರಣ, ಇಂದ್ರಿಯ, ಯಃ, ನಿಜ, ಕೃತ್ಯ, ಭೃತೋಃ, ಪುರುಷಃ ಖಲು, ಸಾಕ್ಷಿಕಯೇವ, ತನೌ, ಜನಯೋಃ, ಬಹಿರ್, ಅಂತರ, ಸಂಸರತೋಃ, ಸದನೇ, ಸುಖ, ದೇಹಳಿದೀಪಇವ.

ಟೀಕ :- ಯಃ = ಯಾವನ । ತನೌ = ಶರೀರದಲ್ಲಿ । ನಿಜ = ತನ್ನ । ಕೃತ್ಯ = ಕೆಲಸಗಳನ್ನು (ಮಾಡುವೆನೆಂದು) । ಭೃತೋಃ = ಅವಧರಿಸಿದಂಥ । ಕರಣ = ಮನಸ್ಸಾದಿ ಅಂತಃಕರಣಗಳನ್ನು । (ಮತ್ತು) ಇಂದ್ರಿಯ = ಕಿವಿ ಮುಂತಾದ ಹೊರಗಿನ ಇಂದ್ರಿಯಗಳನ್ನು । (ಅರಿಯುವ) ಪುರುಷಃ = ಪುರಾಣಪುರುಷನಾದ ಆತ್ಮನು । ಸಾಕ್ಷಿಕಯೇವ = ಒಬ್ಬನೇ ಸಾಕ್ಷಿಯಾಗಿರುವುದು । ಖಲು = ನಿಶ್ಚಯವು (ಹೇಗೆಂದರೆ)ಸದನೇ = ಮನೆಯ ।ಬಹಿರ್ = ಹೊರಗಡೆಯಲ್ಲಿಯೂ । ಅಂತರ = ಒಳಗಡೆಯಲ್ಲಿಯೂ । ಸಂಸರತೋಃ = ವ್ಯವಹರಿಸುವಂಥಾ । ಜನಯೋಃ = ಉಭಯ ಜನಗಳಿಗೆ । ಸುಖ = ಸಹಜವಾದ । ದೇಹಳಿದೀಪಇವ = ಹೊಸ್ತಲಮೇಲಿರುವ ದೀಪದಂತೆ ।

ತಾತ್ಪರ್ಯ :- ಮನೆಯ ಹೊಸ್ತಲಮೇಲಿರುವ ದೀಪವು, ಆ ಮನೆಯ ಒಳಗೂ, ಹೊರಗೂ, ವ್ಯವಹರಿಸುವ ಜನರನ್ನು ಬೆಳಗುತ್ತಾ ಸಾಕ್ಷಿಯಾಗಿರುವಂತೆ, ಆತ್ಮನು ವಿಷಯಗಳನ್ನು ಧಾರಣಮಾಡುವ ಮನಸ್ಸಾದಿ ಒಳಗಿನಕರಣಗಳನ್ನೂ,

* ಪ್ರತಿಯೊಂದು ಚರಣದಲ್ಲಿ ನಾಲ್ಕು ಸಗಣಗಳಿದ್ದು ಎಂಟನೇ ಅಕ್ಷರದಲ್ಲಿ ಯತಿಯಿದ್ದುವಾದರೆ ತೋಟಕ ವೃತ್ತವಾಗುವುದು.

ಶ್ರೋತ್ರಾದಿ ಹೊರಗಿನ ಇಂದ್ರಿಯಗಳನ್ನೂ ಅರಿಯುತ್ತಾ ಸಾಕ್ಷಿಸ್ವರೂಪನಾಗಿರುತ್ತಾನೆ.

ವಿಶೇಷಾರ್ಥ :- ಅವತಾರಿಕೆಯಲ್ಲಿ ಪ್ರಶ್ನಿಸಿದ ಸಾಕ್ಷಿ ಆತ್ಮನ ಲಕ್ಷಣವೆಂತೆಂದೊಡೆ " **ಉದಾಸೀನತ್ವೇ ಸತಿ ಬೋದ್ಧಾ ಸಾಕ್ಷೀ** " ಯಾವ ಚೈತನ್ಯವು ನಿರ್ವಿಕಾರವಾಗಿಯೂ, ಉದಾಸೀನವಾಗಿಯೂ, ಇದ್ದು ಬುದ್ಧ್ಯಾದಿಗಳನ್ನು ಪ್ರಕಾಶಿಸುತ್ತಿರುವುದೋ, ಅಂದರೆ ಪ್ರಮಾತೃ, ಪ್ರಮಾಣ, ಪ್ರಮೇಯ:ಗಳೆಂಬಿವುಗಳನ್ನು ಪ್ರಕಾಶಿಸುವಹಾಗೆ ಮಾಡುವುದೋ, ಆ ಚೈತನ್ಯವೇ ಸಾಕ್ಷಿಯೆನ್ನಲ್ಪಡುತ್ತದೆ. ಪ್ರಪಂಚದಲ್ಲಿ ಯಾವಪುರುಷನು ಪರಸ್ಪರ ಜಗಳಮಾಡುವ ಇಬ್ಬರಿಗೆ ಭಿನ್ನನಾಗಿದ್ದು ಆ ಇಬ್ಬರ ಜಗಳವನ್ನು ಅಪರೋಕ್ಷವಾಗಿ ನೋಡಿಯೂ, ಉದಾಸೀನನಾಗಿಯೂ ಅಂದರೆ ಪಕ್ಷಪಾತ ರಹಿತನಾಗಿರುವನೋ, ಆ ಪುರುಷನು ಸಾಕ್ಷಿಯೆನ್ನಲ್ಪಡುವನು. ಇದರಂತೆಯೇ ಯಾವ ಚೈತನ್ಯವು ಉದಾಸೀನವಾಗಿದ್ದು ಬುದ್ಧ್ಯಾದಿ ಸರ್ವವನ್ನು ಪ್ರಕಾಶಿಸಲ್ಪಡುತ್ತದೆಯೋ, ಆ ಚೈತನ್ಯವು ಸಾಕ್ಷಿಯೆನ್ನಲ್ಪಡುತ್ತದೆ. ಇಲ್ಲಿ " **ಬೋದ್ಧಾ ಸಾಕ್ಷೀ** " ಎಂದಿಷ್ಟುಮಾತ್ರ ಸಾಕ್ಷಿಗೆ ಲಕ್ಷಣವೆಂದು ಹೇಳಿ, ಆ ಲಕ್ಷಣದಲ್ಲಿ " **ಉದಾಶೀನತ್ವೇ ಸತಿ** " ಎಂಬುದನ್ನು ಹೇಳದಿದ್ದರೆ, ಪರಸ್ಪರ ಜಗಳಮಾಡುವ ಪುರುಷರಲ್ಲಿಯೂ, ಸಾಕ್ಷ್ಯತ್ವವುಂಟಾಗಬೇಕಾಗುತ್ತದೆ. ಆದರೂ ಆ ಪುರುಷರನ್ನು ಸಾಕ್ಷಿಗಳೆಂದು ಯಾರೂ ಹೇಳುವುದಿಲ್ಲ. ಆದ್ದರಿಂದ ಆ ಸಾಕ್ಷಿಗೆ " **ಉದಾಸೀನತ್ವೇ ಸತಿ** " ಎಂಬ ವಿಶೇಷಣವು ಹೇಳಲ್ಪಟ್ಟಿರುತ್ತದೆ. ಆ ಜಗಳಕರ್ತರಲ್ಲಿ ಉದಾಶೀನತ್ವವಿರುವುದಿಲ್ಲ. ಆದ್ದರಿಂದ ಅವರಲ್ಲಿ ಆ ಸಾಕ್ಷಿಲಕ್ಷಣಕ್ಕೆ ಅತಿವ್ಯಾಪ್ತಿ ದೋಷವುಂಟಾಗುವುದಿಲ್ಲ. ಇಲ್ಲವೇ " **ಉದಾಸೀನಃ ಸಾಕ್ಷೀ** " ಎಂಬುದನ್ನು ಮಾತ್ರ ಆ ಸಾಕ್ಷಿಗೆ ಲಕ್ಷಣವಾಗಿ ಹೇಳಿ, ಆ ಲಕ್ಷಣದಲ್ಲಿ " **ಬೋದ್ಧಾ** " ಎಂಬ ಪದವನ್ನು ಹೇಳದಿದ್ದರೆ, ಜಗಳಜರುಗಿದ ಸ್ಥಳದಲ್ಲಿದ್ದ ಕಲ್ಲು ಕಟ್ಟಿಗೆಗಳಲ್ಲಿ ಉದಾಸೀನತ್ವವಿರುವುದರಿಂದ ಆ ಕಲ್ಲುಕಟ್ಟಿಗೆಗಳೂಸಹ ಸಾಕ್ಷಿಕಗಳಾಗಬೇಕಾಗುತ್ತವೆ ಆ ಕಲ್ಲು ಕಟ್ಟಿಗೆಗಳನ್ನು ಸಾಕ್ಷಿಗಳೆಂದು ಯಾರೂ ಅನ್ನುವುದಿಲ್ಲ. ಆದಕಾರಣ ಆ ಸಾಕ್ಷೀ ಲಕ್ಷಣದಲ್ಲಿ " **ಬೋದ್ಧಾ** " ಎಂಬ ಪದವು ಹೇಳಲ್ಪಟ್ಟಿರುತ್ತದೆ. ಆ ಜಡವಾದ ಕಲ್ಲುಕಟ್ಟಿಗೆಗಳಲ್ಲಿ ಬೋದ್ಧತ್ವವಿರುವುದಿಲ್ಲ. ಇದರಂತೆಯೇ ಕೇವಲ ಬೋದ್ಧತ್ವವಾದರೋ ಭೋಕ್ತೃವಾದ ಜೀವನಲ್ಲಿರುತ್ತದೆ. ಆದರೂ ಆ ಜೀವನಲ್ಲಿ ಉದಾಸೀನತ್ವವಿರುವುದಿಲ್ಲ. ಕೇವಲ ಉದಾಸೀನತ್ವವಾದರೋ ದೇಹೇಂದ್ರಿಯಾದಿ ಜಡಪದಾರ್ಥಗಳಲ್ಲಿಯೂ ಇರುತ್ತದೆ. ಇವುಗಳಲ್ಲಿ ಬೋದ್ಧತ್ವವಿರುವುದಿಲ್ಲ. ಆದ್ದರಿಂದ ಆ ಭೋಕ್ತನಾದ ಜೀವನಲ್ಲಿಯೂ, ಜಡವಾದ ದೇಹೇಂದ್ರಿಯಾದಿಗಳಲ್ಲಿಯೂ ಆ ಸಾಕ್ಷಿಲಕ್ಷಣಕ್ಕೆ ಅತಿವ್ಯಾಪ್ತಿ ದೋಷವು ಸಂಭವಿಸುವುದಿಲ್ಲ. ಇದುವೇ ಸಾಕ್ಷಿಯು

ಲಕ್ಷಣವು. ಇದನ್ನೇ " **ಸಾಕ್ಷೀಚೇತಾ ಕೇವಲೋ ನಿರ್ಗುಣಶ್ಚ** " ಎಂದು ಶ್ರುತಿಯು ಹೇಳುತ್ತದೆ.

ಇಲ್ಲಿ ಆ ಶ್ರುತಿಯಲ್ಲಿರುವ " **ಚೇತಾಃ** " ಎಂಬ ಪದದಿಂದ ಬೋದ್ಧೃತ್ವವನ್ನು ಹೇಳಲ್ಪಟ್ಟದೆ. ಮತ್ತು " **ಕೇವಲಃ** " ಎಂಬ ಪದದಿಂದ ಉದಾಸೀನತ್ವವನ್ನು ಹೇಳಲ್ಪಟ್ಟದೆ. ಆದ್ದರಿಂದ " **ಚೇತಾಃ ಕೇವಲಃ ಸಾಕ್ಷೀ** " ಎಂದು ಸಾಕ್ಷಿಯ ಲಕ್ಷಣವು ಶ್ರುತಿವಾಕ್ಯದಿಂದಲೇ ಸಿದ್ಧಿಸುತ್ತದೆ. ಆ ಶ್ರುತಿಯಲ್ಲಿ ಆತ್ಮನಿಗೆ ನಿರ್ಗುಣತ್ವವನ್ನು ಹೇಳಿರುವುದರಿಂದ ಆತ್ಮನು ಜ್ಞಾನಾದಿ ಗುಣಸಹಿತನೆಂದು ಹೇಳುವ ನೈಯಾಯಿಕರ ಮತವನ್ನು ಖಂಡಿಸಲ್ಪಟ್ಟತೆಂದು ತಿಳಿಯಬೇಕು. ಮತ್ತು ಆ ಶ್ರುತಿವಾಕ್ಯದಲ್ಲಿ ಚಕಾರ ಪದಪ್ರಯೋಗವಿರುವುದರಿಂದ, ಆತ್ಮನು ನಿಷ್ಕ್ರಿಯನೆಂದು ಹೇಳಿದಂತಾಗಿದೆ. ಆತ್ಮನು ನಿಷ್ಕ್ರಿಯನೆಂದು ಹೇಳಿದ್ದರಿಂದ ಆತ್ಮನು ಮಧ್ಯ ಪರಿಮಾಣ ಸಹಿತನೆಂತಲೂ, ಕ್ರಿಯಾಸಹಿತನೆಂತಲೂ, ಅಂಗೀಕರಿಸುವ ದಿಗಂಬರರ ಮತವನ್ನು ಖಂಡಿಸಲ್ಪಟ್ಟತೆಂದೂ ಗ್ರಹಿಸಬೇಕು.

ಗ್ರಂಥಕರ್ತರು ಆತ್ಮನು ಸಾಕ್ಷಿಸ್ವರೂಪನಿದ್ದಾನೆಂಬ ಬಗ್ಗೆ ದೇಹಳಿದೀಪನ್ಯಾಯರೂಪ ಉದಾಹರಣೆಯನ್ನಿತ್ತಿರುವುದು ಸರ್ವ ಜನರಿಗೂ ಮನವರಿಕೆಯಾಗುವಂತಿದೆ. ಹೇಗೆಂದರೆ ಮನೆಯ ಹೊಸ್ತಲಮೇಲಿರುವ ದೀಪವು, ಮನೆಯಲ್ಲಿರುವ ಜನರನ್ನೂ, ಮನೆಯ ಹೊರಗೆ ಸಂಚರಿಸುವ ಜನರನ್ನೂ, ಬೆಳಗುತ್ತ ಆ ಜನರ ಹಾಗುಹೋಗುಗಳಿಗೆ ತಾನು ಭಾಗಿಯಾಗದೆ ಉದಾಸೀನತ್ವದಿಂದಿರುತ್ತದೆ. ಇದರಂತೆ ಆತ್ಮನು ಮನೋಬುದ್ಧಿಚಿತ್ತ ಅಹಂಕಾರಗಳೆಂಬ ಅಂತಃಕರಣಗಳು ತಮ್ಮ ತಮ್ಮ ವಿಷಯಗಳನ್ನು ಗ್ರಹಿಸುವುದನ್ನೂ, ಬಿಡುವುದನ್ನೂ, ಅರಿಯುತ್ತಾ (ಬೆಳಗುತ್ತಾ) ಉದಾಸೀನನಾಗಿರುತ್ತಾನೆ. ಮತ್ತು ಬಹಿರಿಂದ್ರಿಯಗಳಾದ ಶ್ರೋತ್ರ, ತ್ವಚ, ನೇತ್ರ, ಜಿಹ್ವೆ, ನಾಶಿಕಗಳು ತಮ್ಮ ತಮ್ಮ ವಿಷಯಗಳನ್ನು ಗ್ರಹಿಸುವುದನ್ನೂ, ಬಿಡುವುದನ್ನೂ, ಅರಿಯುತ್ತಾ ಉದಾಸೀನದಿಂದಿರುತ್ತಾನೆ. ಆದ್ದರಿಂದ ಆತ್ಮನು ಸಾಕ್ಷೀರೂಪದಿಂದಿರುತ್ತಾನೆಂಬುದನ್ನು ದೇಹಳಿದೀಪನ್ಯಾಯದಿಂದ ಬಹುಸುಲಭವಾಗಿ ಮನವರಿಕೆ ಮಾಡಿಕೊಳ್ಳಬಹುದು ಕೆಲವು ಗ್ರಂಥಗಳಲ್ಲಿ ನಾಟಕಶಾಲೆಯ ದೀಪದ ದೃಷ್ಟಾಂತವನ್ನು ಕೊಟ್ಟು ಸಾಕ್ಷಿ ಆತ್ಮನ ಸ್ವರೂಪವನ್ನು ಬೋಧಿಸುವುದುಂಟು.

**ಭಾಮಿನಿ ಷಟ್ಪದಿ.**

ಮನೆಯ ಹೊರಗೊಳಗಡೆಯೊಳಿರುತಿಹ ।
ಜನಕೆ ದೇಹಳಿದೀಪ ಬೆಳಗಂ ।
ಮಿಸುಗುತೀಯುತ್ತವರ ಸೋಂಕದಲಿರ್ಪ ವಿಧದಂತೆ ।

ಮನಸು ಮೊದಲಾದೊಳ ಕರಣಗಳ ।
ಮಿನುಪ ಹೊರಗಿರುವಿಂದ್ರಿಯಂಗಳ ।
ಗಣವನರಿವುದರಿಂದಲಾತ್ಮನು ಸಾಕ್ಷಿಯಾಗಿಹನು. ॥ ೨೪ ॥

**ಅವತಾರಿಕೆ :–** ಆತ್ಮನು ದೇಹೇಂದ್ರಿಯಾದಿಗಳಿಗೆ ಸಾಕ್ಷಿಯಾಗಿರುವನೆಂಬುದನ್ನು ಹೇಳಿದಿರಿ. ಇಂತಹ ಸಾಕ್ಷಿಯಾಗಿರುವ ಆತ್ಮನಿಗೆ ಜನನ ಮರಣಾದಿ ಬಂಧವು ಅದೆಂತು ಪ್ರಾಪ್ತವಾಯಿತು ? ಆತ್ಮನಿಗೆ ಬಂಧವು ಪ್ರಾಪ್ತವಾಗಿಲ್ಲವೆಂದು ಹೇಳಿದರೆ ವೇದಾಂತೋಪದೇಶದಿಂದ ಮುಕ್ತಿಯನ್ನು ಹೇಳುವಮಾತು ವ್ಯರ್ಥವಾಗುತ್ತದೆ. ಒಂದು ಪಕ್ಷ ಆತ್ಮನಿಗೆ ಬಂಧವಿಲ್ಲವೆಂದರೆ ಬಂಧವೆಂಬುದು ಯಾರಿಗುಂಟು ? ಮತ್ತು ಮುಕ್ತಿಯೆಂಬುದು ಯಾರಿಗೆ ? ಎಂಬ ಪ್ರಶ್ನೆಗಳಿಗೆ ನಾನು, ನನ್ನದೆಂಬ ಅಭಿಮಾನರೂಪ ಮೂಲಾಹಂಕಾರ, ಚಿತ್‌ಪ್ರತಿಬಿಂಬಗಳ ತಾದಾತ್ಮ್ಯ ಭ್ರಮೆಯಿಂದ ಬಂಧತ್ವವೂ ಅದರ ನಿವೃತ್ತಿಯೇ ಮುಕ್ತತ್ವವೂ, ಜೀವಿಗಳಿಗೆ ಉಂಟಾಗುವುದೆಂದು ಮುಂದಿನ ಶ್ಲೋಕದಲ್ಲಿ ಉತ್ತರಿಸುತ್ತಾರೆ.

## * ಶಾರ್ದೂಲ ವಿಕ್ರೀಡಿತಾವೃತ್ತ.

**ಕ್ಲೇಶಾಃಪಂಚಷಡೂರ್ಮಯೋನವಗುಣಾಷ್ಷಡ್ಭ್ರಾಂತಯೋಷ್ಟೌಮದಾಃ।**
**ಕೋಶಾಃ ಷಡ್ವ್ಯಸನಾನಿ ಸಪ್ತರಿಪವ, ಷ್ಷಟ್ತ್ರೀಣಿ ಕರ್ಮಾಣಿಚ ।**
**ಇತ್ಯೇಷಾಮಭಿಮಾನಲೇಪ ಶಬಲಾ, ಹಂಕಾರ ಚಿಚ್ಛಾಯಯೋ ।**
**ರಧ್ಯಾಸಃ ಖಲು ಬಂಧನಂ ತದುಭಯೋಃ, ರ್ಮುಕ್ತಿರ್ವಿವಿಕ್ತಿರ್ನೃಣಾಂ ॥**
॥ ೨೫ ॥

ಪದಚ್ಛೇದ — ಕೋಶಾಃಪಂಚ, ಷಡೂರ್ಮಯಃ, ನವಗುಣಾಃ, ಷಡ್ ಭ್ರಾಂತಯಃ, ಅಷ್ಟೌಮದಾ, ಕೋಶಾಃಷಟ್, ವ್ಯಸನಾನಿ ಸಪ್ತಃ, ರಿಪವಃಷಟ್, ತ್ರೀಣಿಕರ್ಮಾಣಿ, ಚ, ಇತಿ, ಏಷಃ, ಅಭಿಮಾನಾವಲೇಪ ಶಬಲಾಃ ಅಹಂಕಾರ, ಚಿಚ್ಛಾಯಯೋಃ, ಅಧ್ಯಾಸಃ, ಖಲು, ಬಂಧನಂ, ತದುಭಯೋಃ, ಮುಕ್ತಿಃ, ವಿವಿಕ್ತಿಃ, ನೃಣಾಂ.

ಟೀಕ :– ತ್ರೀಣಿಕರ್ಮಾಣಿ = ಮೂರುವಿಧ ಕರ್ಮಗಳೂ । ಪಂಚಕ್ಲೇಶಾಃ = ಪಂಚಕ್ಲೇಶಗಳೂ । ಷಡ್‌ರಿಪವಃ = ಅರಿಷಡ್ವರ್ಗಗಳೂ । ಷಡ್‌ಭ್ರಾಂತಯಃ ಆರುವಿಧಗಳಾದ ಭ್ರಮೆಗಳೂ । ಕೋಶಾಃಷಟ್ ಆರುವಿಧಗಳಾದ ಕೋಶಗಳೂ।

---

* ಹನ್ನೊಂದನೇ ಶ್ಲೋಕದ ಛಂದಸ್ಸನ್ನು ನೋಡಿ.

ಷಡೂರ್ಮಯಃ = ಷಡೂರ್ಮಿಗಳೂ | ವ್ಯಸನಾನಿಸಪ್ತಃ = ಸಪ್ತವ್ಯಸನಗಳೂ | ಅಷ್ಟೌಮದಾಃ = ಎಂಟುವಿಧಮದಗಳೂ | ಚ = ಮತ್ತು | ನವಗುಣಾಃ = ಒಂಬತ್ತುಗುಣಗಳೂ | ಇತಿ = ಈ ಪ್ರಕಾರವಾದ | ಏಷಾಂ = ಇವುಗಳ | ಅಭಿಮಾನ ಲೇಪ ಶಬಲಾಃ = ನಾನುನನ್ನದೆಂಬ ಅಭಿಮಾನಲೇಪನೆಯಿಂದ ಸವಿಕಲ್ಪವಾದ | ಅಹಂಕಾರ = ಮೂಲ ಅಹಂಕಾರವು | (ಮತ್ತು) ಚಿಚ್ಛಾಯಯೋಃ = ಚಿತ್ಪ್ರತಿಬಿಂಬಗಳೆರಡರ (ಕೂಡುವಿಕೆಯಿಂದಾದ) | ಅಧ್ಯಾಸಃ = ತಾದಾತ್ಮ್ಯರೂಪವಾದ ಭ್ರಮೆಯೇ | ಭಂಧನಂ = ದುಃಖವು | ತದುಭಯೋಃ = ಆ ಮೇಲೆಹೇಳಲ್ಪಟ್ಟ ಚಿತ್ಪ್ರತಿಬಿಂಬಗಳೆರಡರಿಂದಕೂಡಿದ (ಅಧ್ಯಾಸದ) | ಮುಕ್ತಿಃ = ಬಿಡುಗಡೆಯೇ | ನೃಣಾಂ = ಮನುಷ್ಯರಿಗೆ | ಖಲು = ಸತ್ಯವಾದ | ವಿವಿಕ್ತಿಃ = ಪವಿತ್ರವಾದ ಮೋಕ್ಷವಾಗಿದೆ.

**ತಾತ್ಪರ್ಯ** — ಮನುಷ್ಯರಿಗೆ ಮೂರುಕರ್ಮಗಳೂ, ಪಂಚಕ್ಲೇಶಗಳೂ, ಅರಿಷಡ್ವರ್ಗಗಳೂ, ಆರುವಿಧವಾದ ಭ್ರಾಂತಿಗಳೂ ಆರುವಿಧವಾದ ಕೋಶಗಳೂ, ಷಡೂರ್ಮಿಗಳೂ, ಸಪ್ತವ್ಯಸನಗಳೂ ಅಷ್ಟಮದಗಳೂ, ಮತ್ತು ಒಂಬತ್ತುವಿಧಗಳಾದ ಗುಣಗಳೂ, ಇವುಗಳಲ್ಲಿ ನಾನುನನ್ನದೆಂಬ ಅಭಿಮಾನ ಲೇಪನೆಯಿಂದ ಸವಿಕಲ್ಪವಾದ ಮೂಲಾಹಂಕಾರ, ಚಿತ್ಪ್ರತಿಬಿಂಬಗಳೆರಡರ ತಾದಾತ್ಮ್ಯ ಭ್ರಮೆಯೇ ಬಂಧವೆಂದೆನಿಸಿಕೊಳ್ಳುತ್ತದೆ. ಆ ತಾದಾತ್ಮ್ಯ ಭ್ರಮೆಯ ನಿವೃತ್ತಿಯೇ ಮೋಕ್ಷವೆಂದೆನೆಸಿಕೊಳ್ಳುತ್ತದೆ.

**ವಿಶೇಷಾರ್ಥ** :— ಆತ್ಮನಿಗೆ ಬಂಧವಾಗಲೀ ಮುಕ್ತಿಯಾಗಲೀ ಕಲ್ಪನಾ ಮಾತ್ರವಾಗಿ (ಭ್ರಮಾತ್ಮಕವಾಗಿ) ಸಂಘಟಿಸುತ್ತದೆ. ವಾಸ್ತವ್ಯದಲ್ಲಿ ಆತ್ಮನಿಗೆ ಬಂಧವಾಗಲೀ ಮುಕ್ತಿಯಾಗಲೀ, ಇರುವುದಿಲ್ಲ ಜನರಿಗೆ ಜನನಮರಣಾತ್ಮಕ ಬಂಧತ್ವವು ಪ್ರಾಪ್ತವಾದ ವಿಧಾನವೆಂತೆಂದೊಡೆ ಸಂಚಿತ, ಆಗಾಮಿ, ಪ್ರಾರಾಬ್ಧಗಳೆಂಬ ಕರ್ಮತ್ರಯಗಳಲ್ಲಿಯೂ, ಅವಿದ್ಯಾ, ಅಸ್ಮಿತೆ, ರಾಗ, ದ್ವೇಷ, ಅಭಿನಿವೇಶಗಳೆಂಬ. ಪಂಚಕ್ಲೇಶಗಳಲ್ಲಿಯೂ, ಕಾಮ, ಕ್ರೋಧ ಲೋಭ, ಮೋಹ, ಮದ, ಮತ್ಸರಗಳೆಂಬ, ಅರಿಷಡ್ವರ್ಗಗಳಲ್ಲಿಯೂ, ಜಾತಿ. ವರ್ಣ. ಆಶ್ರಮ, ಕುಲ, ಗೋತ್ರ, ರೂಪು ಗಳೆಂಬ ಷಡ್ಭ್ರಮೆಗಳಲ್ಲಿಯೂ. ಚರ್ಮ. ರಕ್ತ. ಮಾಂಸ, ಮಜ್ಜ, ನರ, ಅಸ್ತಿಗಳೆಂಬ ಆರುವಿಧ ಕೋಶಗಳಲ್ಲಿಯೂ. ಜನನ. ಮರಣ. ಹಸಿವು. ತೃಷೆ, ಶೋಕ, ಮೋಹಗಳೆಂಬ ಷಡೂರ್ಮಿಗಳಲ್ಲಿಯೂ, ತನುವ್ಯಸನ. ಮನೋವ್ಯಸನ, ಧನವ್ಯಸನ. ವಿಶ್ವವ್ಯಸನ, ಉತ್ಸಾಹವ್ಯಸನ, ಸೇವಕವ್ಯಸನ, ರಾಜ್ಯವ್ಯಸನಗಳೆಂಬ ಸಪ್ತವ್ಯಸನಗಳಲ್ಲಿಯೂ. ಕುಲಮದ, ರೂಪಮದ, ಯವ್ವನ



2911







ಮದ, ಧನಮದ, ಸ್ತ್ರೀಮದ, ಪುತ್ರಮದ, ವಿದ್ಯಾಮದ, ರಾಜ್ಯಮದಗಳೆಂಬ, ಅಷ್ಟಮದಗಳಲ್ಲಿಯೂ, ಧರ್ಮ, ಅಧರ್ಮ, ಯತ್ನ. ದ್ವೇಷ, ಭಾವನಾ, ರಾಗ, ಸುಖ, ದುಃಖ, ಬುದ್ಧಿಗಳೆಂಬ, ನವಗುಣಗಳಲ್ಲಿಯೂ, ಮತ್ತು ಇನ್ನುಳಿದವುಗಳಲ್ಲಿಯೂ, ನಾನು, ನನ್ನದೆಂಬ ಅಭಿಮಾನಲೇಪನೆಯಿಂದ, ಸವಿಕಲ್ಪವಾದ ಮೂಲಾಹಂಕಾರವೂ, ಚಿಚ್ಛಾಯೆಯೂ, ಇವೆರಡರ ತಾದಾತ್ಮ್ಯ ಸಂಬಂಧದ ಭ್ರಮೆಯಿಂದ, ಬಂಧವು ಪ್ರಾಪ್ತವಾಗಿದೆ. ತಾದಾತ್ಮ್ಯವೆಂದರೆ ವಸ್ತುಗಳೆರಡಿದ್ದು, ಅವುಗಳ ಸತ್ತಾ ಏಕದೇಶದಲ್ಲಿ ಪರ್ಯವಸಾನ ಹೊಂದುವಿಕೆ. ಹೇಗೆಂದರೆ ಬೆಂಕಿಯು ಕಬ್ಬಿಣಗುಂಡು ಇವೆರಡು ವಸ್ತುಗಳು ಭಿನ್ನಭಿನ್ನವಾಗಿದ್ದರೂ, ಇವುಗಳ ಸತ್ತೆಯು ತಪ್ತವಾದ ಕಬ್ಬಿಣಗುಂಡಿನೊಂದರಲ್ಲಿಯೇ ಪರ್ಯವಸಾನ ಗೊಳ್ಳುತ್ತದೆ ಇಂತಾದರೆ ಬೆಂಕಿಗೂ, ಕಬ್ಬಿಣಕ್ಕೂ ತಾದಾತ್ಮ್ಯ ಸಂಬಂಧವಾಗಿದೆಯೆಂದು ತಿಳಿಯಬೇಕು. ಸುಡುವಕಬ್ಬಿಣದ ಗುಂಡನ್ನು ಎತ್ತಿ ನೆಲಕ್ಕೆಹಾಕಿದರೆ ನೆಲವು ತಗ್ಗಾಗುವುದು. ಅಲ್ಲಿದ್ದ ಕಸಕಡ್ಡಿಗಳು ದಹಿಸುತ್ತವೆ. ನೆಲವನ್ನು ತಗ್ಗುಮಾಡಿದ್ದು ಬೆಂಕಿಯೋ ಕಬ್ಬಿಣದದ ಗುಂಡೋ? ಎಂದು ಪ್ರಶ್ನಿಸಿದರೆ ಕಬ್ಬಿಣದಗುಂಡೆಂಬ ಉತ್ತರವು ಬರುತ್ತದೆ. ಅಲ್ಲಿನ ಕಸಕಡ್ಡಿಯನ್ನು ದಹಿಸಿದ್ದು ಬೆಂಕಿಯೋ ಕಬ್ಬಿಣದ ಗುಂಡೋ? ಎಂದು ಪ್ರಶ್ನಿಸಿದಾಗ ಕಬ್ಬಿಣದ ಗುಂಡಲ್ಲ ಬೆಂಕಿಯೇ ಎಂಬ ಉತ್ತರ ಬರುತ್ತದೆ. ಅಲ್ಲಿ ಬೆಂಕಿಯು ಕಬ್ಬಿಣವು ಬೇರೆಬೇರೆಯುಂಟೇನು? ಎಂದು ಪ್ರಶ್ನಿಸಿದರೆ ಬೇರೆ ಬೇರೆ ಇರುವುದಿಲ್ಲ ಒಂದಾಗಿಯೇ ಇರುವುದೆಂಬ ಉತ್ತರವು ಬರುತ್ತದೆ. ಆ ಒಂದಾಗಿರುವುದೇ ಅವುಗಳ ಸತ್ತೆಯು ಏಕದೇಶದಲ್ಲಿ ಪರ್ಯವಸಾನಹೊಂದಿತೆಂತಲೂ, ತಾದಾತ್ಮ್ಯಸಂಬಂಧವಾಯಿತೆಂತಲೂ, ತಿಳಿಯಬೇಕು. ಇದರಂತೆ, ಸವಿಕಲ್ಪವಾದ ಮೂಲಾಹಂಕಾರವು ಕಬ್ಬಿಣದ ಗುಂಡಿನಂತಿದೆ. ಆ ಅಹಂಕಾರದಲ್ಲಿ ಆತ್ಮನ ಛಾಯೆಯು (ಆಭಾಸವು) ಬೆಂಕಿಯಂತಿದೆ. ಇವೆರಡರ ವಿಶಿಷ್ಟತ್ವವೇ ತಾದಾತ್ಮ್ಯ ಸಂಬಂಧವೆನಿಸಿಕೊಳ್ಳುತ್ತದೆ. ಈ ತಾದಾತ್ಮ್ಯ ಸಂಬಂಧದ ಭ್ರಮೆಯೇ ಜೀವನಿಗೆ ಬಂಧವಾಗಿರುತ್ತದೆ. ಈ ತಾದಾತ್ಮ್ಯದಲ್ಲಿ ಸಹಜ ತಾದಾತ್ಮ್ಯವೆಂತಲೂ ಕರ್ಮಜ ತಾದಾತ್ಮ್ಯವೆಂತಲೂ, ಭ್ರಾಂತಿಜ ತಾದಾತ್ಮ್ಯ ವೆಂತಲೂ, ಮೂರುವಿಧಗಳುಂಟು. ಮೂಲಾಹಂಕಾರದಲ್ಲಿ ಚಿಚ್ಛಾಯೆಯ ವಿಶಿಷ್ಟತ್ವವೇ ಸಹಜ ತಾದಾತ್ಮ್ಯವೆನಿಸಿಕೊಳ್ಳುತ್ತದೆ. ದೇಹದಲ್ಲಿ ಅಭಿಮಾನತ್ವವೇ ಕರ್ಮಜ ತಾದಾತ್ಮ್ಯವೆನಿಸಿಕೊಳ್ಳುತ್ತದೆ ಜಾತಿ, ಕುಲ ಗೋತ್ರಗಳಲ್ಲಿರುವ, ಅಭಿಮಾನವೇ ಭ್ರಾಂತಿಜ ತಾದಾತ್ಮ್ಯವೆನಿಸಿಕೊಳ್ಳುತ್ತದೆ. ಈ ತಾದಾತ್ಮ್ಯ ಭ್ರಮೆಯು ಜೀವನಿಗೆ ಬಂಧತ್ವವಾಗಿರುತ್ತದೆ. ಈ ತಾದಾತ್ಮ್ಯದ ಬಿಡುಗಡೆಯೇ ಜೀವನಿಗೆ ಮುಕ್ತತ್ವವಾಗಿರುತ್ತದೆ. ಆದ್ದರಿಂದ ಬಂಧತ್ವ ಮುಕ್ತತ್ವಗಳೆರಡು, ಆಭಾಸಾತ್ಮಕ ಜೀವನಿಗೇ ಹೇಳಬೇಕು. ಆತ್ಮನಿ

ಗಲ್ಲ. ಆತ್ಮನು ನಿತ್ಯ, ಶುದ್ಧ, ಮುಕ್ತ, ಸ್ವರೂಪನಾಗಿರುತ್ತಾನೆ. ಆದರೆ ತನ್ನ ಸ್ವರೂಪವನ್ನು ಮರೆತಿರುವುದರಿಂದ ಬಂಧತ್ವವು ಆರೋಪಮಾತ್ರವಾಗಿರುತ್ತದೆ.

### ವಾರ್ಧಿಕ ಷಟ್ಪದಿ.

ಮೂರಾದ ಕರ್ಮಂಗ ಳೈದಾದಕ್ಲೇಶಂಗ ।
ಳಾರಾದವೈರಿ ಮೇಣಾರಾದ ಭ್ರಾಂತಿಮೇ ।
ಣಾರಾದ ಕೋಶಂಗ ಳಾರೂರ್ಮಿ ವ್ಯಸನಂಗಳೇ ಳೆಂಟುವಿಧಮದಗಳು ॥
ಆರೈಯಲೊಂಬತ್ತು ಗುಣಗಳಿಂತಿವುಗಳಲಿ ।
ತೋರುವಭಿಮಾನ ಮೂಲಾಹಂತೆ ಚಿಚ್ಛಾಯೆ ।
ಸೇರಿ ಬಂಧವದೆನಿಪುದದು ಕೆಡಲು ಮುಕ್ತಿಯೆಂಬುವುದಕ್ಕು ಜೀವಿಗಳಿಗೆ ॥ ೨೫

**ಅವತಾರಿಕೆ** :- ಮೂಲಾಹಂಕಾರ ಚಿಚ್ಛಾಯೆಯ ತಾದಾತ್ಮ್ಯ ಭ್ರಮೆಯಿಂದ ಬಂಧತ್ವವುಂಟಾಗುವುದೆಂತಲೂ, ಅದರ ಬಿಡುಗಡೆಯೇ ಮೋಕ್ಷವೆಂತಲೂ, ಹೇಳಿದಿರಿ. ಮತ್ತು ಜೀವನು ಸದಾ ಮುಕ್ತಸ್ವರೂಪನೇ ಇರುತ್ತಾನೆ. ಆದರೆ ಜೀವನು ತನ್ನ ಸ್ವರೂಪವನ್ನು ಮರೆತಿರುವುದರಿಂದ ಬಂಧವು ಆರೋಪಮಾತ್ರವಾಗಿ ಬಂದಿರುತ್ತದೆಂದು ಹೇಳಿದಿರಿ. ಆದರೆ ತನ್ನಸ್ವರೂಪವನ್ನು ತಾನು ಮರೆಯುವುದಾದೀತೇ ? ತನಗೆ ಬೇರೆಯಾದ ವಸ್ತುಗಳನ್ನು ಎಲ್ಲಿಯೋ ಒಂದು ಸ್ಥಳದಲ್ಲಿಟ್ಟು ಅವುಗಳನ್ನು ಮರೆಯ ಬಹುದಾಗಲಿ, ತನ್ನನ್ನೇ ತಾನು ಮರೆಯುವುದುಂಟೇ ? ಎಂಬ ಪ್ರಶ್ನೆಗೆ ತನ್ನನ್ನು ತಾನು ಮರೆಯುವುದುಂಟೆಂಬುದಕ್ಕೆ ದಶಮಪುರುಷನ ಉದಾಹರಣೆಯನ್ನು ಮುಂದಿನ ಶ್ಲೋಕದಲ್ಲಿ ಉತ್ತರಿಸುತ್ತಾರೆ.

## * ಆರ್ಯಾವೃತ್ತ.

ಜೀವತ್ವಂ ಸ್ವಕಮೌಢ್ಯಾಲ್ಲೋಕಃ ।
ಕಲಯನ್ ಕ್ಲಿಶ್ಯತಿ ಭೃತಭವಶೋಕಃ ।
ಅತ್ರಮುಧಾಕಲಶೋಕಶ್ಯ ಥಕಾಂಯಃ ।
ಕೃಶಧೀರ್ದಶಮಃ ಪುರುಷೋಧ್ಯೇಯಃ ॥ ॥ ೨೬ ॥

**ಪದಚ್ಛೇದ** :- ಜೀವತ್ವಂ, ಸ್ವಕ, ಮೌಢ್ಯಾತ್, ಲೋಕಃ, ಕಲಯನ್,

---

* ಒಂದನೇ ಶ್ಲೋಕದ ಛಂದಸ್ಸನ್ನು ನೋಡಿ.

ಕ್ಲಿಶ್ಯತಿ, ಭೃತ, ಭವ, ಶೋಕಃ, ಅತ್ರ, ಮುಧಾ, ಕಿಲಶೋಕಃ, ಶ್ಲಥಕಾಯಃ, ಕೃಶಧೀಃ ದಶಮಃ, ಪುರುಷಃ, ಧ್ಯೇಯಃ,

ಟೀಕ :— ಶೋಕಃ = ದುಃಖರೂಪವಾದ । ಭವ = ಹುಟ್ಟುಸಾವುಗಳನ್ನು । ಭೃತ = ಧರಿಸಿಕೊಂಡಿರುವ । ಲೋಕಃ = ಜನವು । ಸ್ವಕ = ತಮ್ಮ । ಮೌಢ್ಯಾತ್ = ಮೂಢತ್ವದಿಂದ । ಜೀವತ್ವಂ = ಜೀವಭಾವವನ್ನು । ಕಲಯನ್ = ಹಿಡಿದು । ಮುಧಾ = ವ್ಯರ್ಥವಾಗಿ । ಕ್ಲಿಶ್ಯತಿ = ದುಃಖಪಡುತ್ತದೆ । (ಹೇಗೆಂದರೆ) ಶ್ಲಥಕಾಯಃ = ಶಿಥಿಲವಾದ ಶರೀರವುಳ್ಳ । ಕೃಶಧೀಃ = ಕೃಶವಾದಬುದ್ಧಿಯಿಂದ ಕೂಡಿದ । ಕಿಲಶೋಕಃ = (ತನ್ನನ್ನು ಮರೆತುಕೊಂಡು) ಮಿಥ್ಯಾರೂಪ ದುಃಖದಿಂದ ಕೂಡಿದ । ದಶಮಃ = ಹತ್ತನೇಯವನಾದ । ಪುರುಷಃ = ಮನುಷ್ಯನು । (ಹೇಗೋಹಾಗೆ ಎಂದು) ಅತ್ರ = ಇಲ್ಲಿ । ಧ್ಯೇಯಃ = ತಿಳಿಯಬೇಕು ।

ತಾತ್ಪರ್ಯ ;— ಮತಿಯಿಲ್ಲದ ದಶಮ ಪುರುಷನು ತನ್ನನ್ನೇ ತಾನುಮರೆತುಕೊಂಡು ಮಿಥ್ಯಾರೂಪ ದುಃಖದಿಂದ ವ್ಯಥೆಪಟ್ಟಂತೆ, ಲೌಕಿಕರು ಅಜ್ಞಾನದಿಂದ ಜೀವತ್ವಭಾವನೆಯನ್ನು ಹಿಡಿದುಕೊಂಡು, ಸುಮ್ಮನೆ ಜನನಮರಣಾದಿ ದುಃಖಕ್ಕೆ ಭಾಗಿಯಾಗಿರುತ್ತಾರೆ.

ವಿಶೇಷಾರ್ಥ ;— ಹತ್ತುಮಂದಿ ಮಿತ್ರರು ಕೂಡಿಕೊಂಡು ಹೊಳೆಯನ್ನು ದಾಂಟಿದ ನಂತರ ನಾವು ಹತ್ತುಮಂದಿ ಇರುವೆವೋ, ಅಥವಾ ಇಲ್ಲವೋ ಎಂಬ ಸಂದೇಹದಿಂದ ಲೆಕ್ಕವನ್ನು ಹಾಕುವಾಗ, ತನ್ನನ್ನು ಬಿಟ್ಟು ಒಂಬತ್ತು ಮಂದಿಯನ್ನು ಎಣಿಸಿಕೊಂಡು ಹತ್ತನೇಯವನು ನದಿಯಲ್ಲಿ ಕೊಚ್ಚಿಕೊಂಡು ಹೋಗಿದ್ದಾನೆಂದು ಭಾವಿಸಿ, ದುಃಖಿಸುತ್ತಾನೆ. ಈ ಹತ್ತನೇಯವನ ದುಃಖವು ಮಿಥ್ಯಾರೂಪವಾದುದು ಹತ್ತನೇಯವನು ನಾನೇ ಇದ್ದೇನೆಂಬ ಅರುವನ್ನು ಮಾಡಿಕೊಳ್ಳದೆ, ತನ್ನನ್ನೇತಾನು ಮರೆತಿರುವುದರಿಂದ ಆ ಮಿಥ್ಯಾರೂಪವಾದ ದುಃಖಕ್ಕೆ ಗುರಿಯಾದನು. ಇಲ್ಲಿ ಎಣಿಸುವಾಗ ಹತ್ತೆಂಬ ಸಂಖ್ಯೆಯನ್ನು ಮರೆತಿರುವನಾಗಲೀ ತನ್ನನ್ನು ತಾನು ಮರೆತಂತೆ ಕಾಣುವುದೇ ? ಎಂದು ಪ್ರಶ್ನಿಸಿದರೆ ಅವನು ಹತ್ತನೆಯ ಸಂಖ್ಯೆಯನ್ನು ಮರೆತಿರುವುದಿಲ್ಲ. ಆ ಹತ್ತನೇ ಸಂಖ್ಯೆಗೆ ಅರ್ಥರೂಪನಾದ ತನ್ನನ್ನೇ ಮರೆತಿರುವುದರಿಂದ ತನ್ನನ್ನೇ ತಾನು ಮರೆತನೆಂಬುದು ಸಿದ್ಧವಾಗುತ್ತದೆ. ಈ ಹತ್ತನೇ ಪುರುಷನಂತೆ ಲೌಕಿಕರು ತಮ್ಮ ಅಜ್ಞಾನ ಪ್ರಭಾವದಿಂದ ತಮ್ಮ ಆತ್ಮಸ್ವರೂಪವನ್ನು ಮರೆತು, ಕರ್ತೃತ್ವ ಭೋಕ್ತೃತ್ವಾಭಿಮಾನರೂಪ ಜೀವಭಾವನೆಯನ್ನು ಹಿಡಿದುಕೊಂಡು ಜನನಮರಣಾದಿ ಮಿಥ್ಯಾ ದುಃಖಕ್ಕೆ ಗುರಿಯಾಗಿರುತ್ತಾರೆ. ಇವರ

ದುಃಖಕ್ಕೆ ಸ್ವರೂಪಜ್ಞಾನ ವಿಸ್ಮೃತಿಯೇ ಕಾರಣವೆಂದು ಹೇಳಬೇಕು. "**ವೇಷ ವಿಭ್ರಾಂತ ನಟನಂತೆ**" "**ವಿಸ್ಮೃತಿ ಕಂಠಾಭರಣನ್ಯಾಯದಂತೆ**" ಇತ್ಯಾದಿ ಉದಾಹರಣೆಗಳು ತನ್ನನ್ನು ತಾನು ಮರೆಯುವುದು ಉಂಟೆಂಬುದಕ್ಕೆ ನಿದರ್ಶನಗಳಾಗಿವೆ.

**ಕಂದ,**

ಹತ್ತನೆಯುವ ಮತಿಯಿಲ್ಲದೆ ।
ಮಿಥ್ಯಾದುಃಖದಲಿ ಕೊರಗುವಂದದಿ ಜನಗಳ್ ॥
ಅತ್ಯಧಿಕ ಮೂಢತನ ಜೀ ।
ವತ್ವದ ಭಾವನೆಯ ಪಿಡಿದು ಭವದೋಳ್ ಬಳಲ್ವರ್ ॥ ೨೬

**ಅವತಾರಿಕೆ** ;— ಸ್ವರೂಪ ವಿಸ್ಮೃತಿಯಿಂದ ಜಗಜ್ಜೀವಿಗಳು ದಶಮ ಪುರುಷನಂತೆ ದುಃಖಕ್ಕೆ ಗುರಿಯಾದವೆಂದು ಹೇಳಿದಿರಿ. ಮತ್ತು ಅನೇಕಜೀವಾತ್ಮರಾಗುವುದಕ್ಕೆ ತನುಕರಣಗಳ ಉಪಾಧಿಯೇ ಕಾರಣವೆಂದು ಹೇಳಿದಿರಿ. ಆದರೆ ದುಃಖಕ್ಕೆ ಗುರಿಯಾದ ಜೀವಿಗಳಲ್ಲಿಯೂ, ನಿತ್ಯಸುಖಿಯಾದ ಈಶ್ವರನಲ್ಲಿಯೂ, ಆತ್ಮನು ( ಬ್ರಹ್ಮವು ) ಅನುಸ್ಯೂತನಾಗಿ ಇರುತ್ತಾನೆಂಬುದು ತಮ್ಮ ಸಿದ್ಧಾಂತವು. ದುಃಖಕ್ಕೆ ಗುರಿಯಾದ ಜೀವಿಗಳಲ್ಲಿ ಆ ಆತ್ಮನು ಯಾವರೂಪದಿಂದಿರುತ್ತಾನೆ ? ನಿತ್ಯಸುಖಿಯಾದ ಈಶ್ವರನಲ್ಲಿ ಆ ಆತ್ಮನು ಯಾವರೂಪದಿಂದಿರುತ್ತಾನೆ ? ಎಂಬ ಪ್ರಶ್ನೆಗೆ ಆ ಜೀವ ಶಿವರಲ್ಲಿ ಆತ್ಮನು ವಿವರ್ತರೂಪದಿಂದಿರುತ್ತಾನೆಂಬ ಉತ್ತರವನ್ನು ಮುಂದಿನ ಶ್ಲೋಕದಲ್ಲಿ ಹೇಳುತ್ತಾರೆ.

## ಗೀತಿ ವೃತ್ತ.

**ವ್ಯಷ್ಟಿಸಮಷ್ಟಿ ವಿಭುತ್ಯೋಃ ।**
**ರೇಕಂ ವಿಕ್ಷೇಪಜೀವಶತ ಶಿವಯೋಃ ॥**
**ಗುಣಶತತದುದರ ಪಟಯೋಃ ।**
**ಕಾರ್ಪಾಸ ವಿವರ್ತವತ್ಪರಂ ವಿಂದ್ಯಾತ ॥ ೨೭ ॥**

**ಪದಚ್ಛೇದ ;**— ವ್ಯಷ್ಟಿ, ಸಮಷ್ಟಿ, ವಿಭುತ್ಯೋಃ, ಏಕಂ, ವಿಕ್ಷೇಪ, ಜೀವ, ಶತ, ಶಿವಯೋಃ, ಗುಣಶತ, ತದುದರ, ಪಟಯೋಃ, ಕಾರ್ಪಾಸ ವಿವರ್ತವತ್, ಪರಂ, ವಿಂದ್ಯಾತ್.

**ಟೀಕ ;—** ವ್ಯಷ್ಟಿ = ವ್ಯಷ್ಟಿಉಪಾಧಿಯಿಂದ ಕೂಡಿದ । ವಿಕ್ಷೇಪ = ಭ್ರಮಾತ್ಮಕವಾದ । ಜೀವಶತ = ನೂರಾರು ಸಂಖ್ಯೆಯುಳ್ಳ ಜೀವಿಗಳ । (ಮತ್ತು) ಸಮಷ್ಟಿ = ಸಮಷ್ಟಿ ಉಪಾಧಿಯಿಂದ ಕೂಡಿದ । ಶಿವಯೋಃ = ಈಶ್ವರ ಜೀವರಲ್ಲಿ ವಿಭುತ್ವೋಃ = ವ್ಯಾಪಕವಾದ ಬ್ರಹ್ಮ ಚೈತನ್ಯವು । ಏಕಂ = ಏಕರೂಪವಾಗಿದೆ। (ಹೇಗೆಂದರೆ) ಗುಣಶತ = ನೂರಾರು ಎಳೆಗಳ । (ಮತ್ತು) ತದುದರ = ಆ ಎಳೆಗಳಿಂದ ಕೂಡಿದ । ಪಟಯೋಃ = ಬಟ್ಟೆಗಳಲ್ಲಿ । ಕಾರ್ಪಸ = ಹತ್ತಿಯು । ವಿವರ್ತವತ್ = ವಿವರ್ತನಾದಹಾಗೆ । ಪರಂ = ಪರಬ್ರಹ್ಮವು । ವಿಂದ್ಯಾತ್ = ಹೊಂದುತ್ತದೆ.

**ತಾತ್ಪರ್ಯ :—** ಭ್ರಮೆಯಿಂದೊಡಗೂಡಿದ, ದುಃಖದಲ್ಲಿ ಬಳಲುವ ವ್ಯಷ್ಟಿ ರೂಪವಾದ ನೂರಾರು ಜೀವಿಗಳಲ್ಲಿಯೂ, ಸದಾನಂದದಲ್ಲಿರುವ ಸಮಷ್ಟಿ ಸ್ವರೂಪನಾದ ಈಶ್ವರನಲ್ಲಿಯೂ, ಚೇತನಸ್ವರೂಪನಾದ ಆತ್ಮನು (ಪರಬ್ರಹ್ಮವು) ಏಕತ್ವದೊಡನೆ ವಿವರ್ತರೂಪವಾಗಿರುವನು. ಹೇಗೆಂದರೆ ನೂರಾರು ಎಳೆಗಳಲ್ಲಿಯೂ, ಆ ಎಳೆಗಳಿಂದಕೂಡಿದ ವಸ್ತ್ರದಲ್ಲಿಯೂ, ಹತ್ತಿಯು ಏಕತ್ವದೊಡನೆ ವಿವರ್ತರೂಪದಿಂದಿರುವಂತೆಂದು ತಿಳಿಯಬೇಕು.

**ವಿಶೇಷಾರ್ಥ :—** ಜೀವಿಗಳಿಗೆ ವ್ಯಷ್ಟಿಚೈತನ್ಯವೆಂತಲೂ, ಈಶ್ವರನಿಗೆ ಸಮಷ್ಟಿ ಚೈತನ್ಯವೆಂತಲೂ, ಹೇಳುವ ರೂಢಿಯಿದೆ. ವ್ಯಷ್ಟಿಯೆಂದರೆ ಒಂದು ವೃಕ್ಷದಂತೆಂತಲೂ, ಸಮಷ್ಟಿ ಯೆಂದರೆ ಅನೇಕ ವೃಕ್ಷಗಳಿಂದ ಕೂಡಿದ ತೋಟದಂತೆಂತಲೂ, ತಿಳಿಯುಬೇಕು. ವ್ಯಷ್ಟಿರೂಪವಾದ ಅನೇಕ ಜೀವಿಗಳಲ್ಲಿಯೂ, ಸಮಷ್ಟಿ ಸ್ವರೂಪನಾದ ಈಶ್ವರನಲ್ಲಿಯೂ, ಚೇತನಾತ್ಮಕವಾದ ಆತ್ಮನು (ಪರಬ್ರಹ್ಮವು) ಏಕರೂಪದಿಂದ ವ್ಯಾಪಕವಾಗಿರುತ್ತಾನೆ. ಮತ್ತು ವಿವರ್ತರೂಪದಿಂದಿರುತ್ತಾನೆ. ವಿವರ್ತವೆಂದರೆ ಹಗ್ಗವು ಹಾವಾಗದೆ ಹಾವಿನಂತೆ ತೋರುವಿಕೆ. ಗ್ರಂಥಕರ್ತರು ಶಿವಜೀವರೀರ್ವರಲ್ಲಿ ಬ್ರಹ್ಮಚೈತನ್ಯವು ಏಕರೂಪದಿಂದ ವಿವರ್ತವಾಗಿರುವುದೆಂಬುದಕ್ಕೆ ನೂತನವಾದ ಹತ್ತಿಯ ಉದಾಹರಣೆಯನ್ನು ಕೊಟ್ಟು ಮನವರಿಕೆಯಾಗುವಂತೆ ಹೇಳಿರುತ್ತಾರೆ. ಹೇಗಂದರೆ ಹತ್ತಿಯು ಎಳೆಗಳಾಗದೆ ಎಳೆಗಳಂತೆ ತೋರುತ್ತದೆ. ವಸ್ತ್ರವಾಗದೆ ವಸ್ತ್ರದಂತೆ ತೋರುತ್ತದೆ. ಅಂದರೆ ಹತ್ತಿಯ ದೃಷ್ಟಿಯಿಂದ ಎಳೆಗಳೂ, ವಸ್ತ್ರವೂ, ಕಲ್ಪಿತವೆಂದು ಹೇಳಬೇಕು. ಇಲ್ಲಿ ಅನೇಕ ಜೀವಿಗಳು ಎಳೆಗಳಂತಿರುತ್ತವೆ. ಈಶ್ವರನು ವಸ್ತ್ರದಂತಿರುತ್ತಾನೆ. ಆತ್ಮನು ಹತ್ತಿಯಂತಿರುತ್ತಾನೆ. ಎಳೆಗಳಲ್ಲಿಯೂ, ವಸ್ತ್ರದಲ್ಲಿಯೂ, ಹತ್ತಿಯು ಏಕತ್ವದೊಡನೆ ವಿವರ್ತರೂಪದಿಂದಿರುವಂತೆ, ಜೀವಿಗಳಲ್ಲಿಯೂ, ಈಶ್ವರನಲ್ಲಿಯೂ, ಆತ್ಮನು ಏಕತ್ವದೊಡನೆ ವಿವರ್ತರೂಪದಿಂದಿರು

ತ್ತಾನೆ. ಹತ್ತಿಯು ಎಳೆಗಳಾಗದೆ ಎಳೆಗಳಂತೆಯೂ, ವಸ್ತ್ರವಾಗದೆ ವಸ್ತ್ರದಂತೆಯೂ ತೋರುವಂತೆ, ಆತ್ಮನು ಜೀವಿಗಳಾಗದೆ ಜೀವಿಗಳಂತೆಯೂ, ಈಶ್ವರನಾಗದೆ ಈಶ್ವರನಂತೆಯೂ, ತೋರುತ್ತಾನೆ. ಹತ್ತಿಯು ಎಳೆಗಳಿಗೂ, ವಸ್ತ್ರಕ್ಕೂ ಆಶ್ರಯ ಅಧಿಷ್ಠಾನ ವಾಗಿರುವಂತೆ, ಆತ್ಮನು ಜೀವಿಗಳಿಗೂ, ಈಶ್ವರನಿಗೂ, ಆಶ್ರಯ ಅಧಿಷ್ಠಾನನಾಗಿರುತ್ತಾನೆ. ಆತ್ಮವೆಂದರೆ ಶುದ್ಧಬ್ರಹ್ಮವೆಂದರಿಯಬೇಕು. ಹತ್ತಿಯಲ್ಲಿ ಎಳೆಗಳು ವಸ್ತ್ರವು ಕಲ್ಪಿತವಾದಂತೆ (ಅಧ್ಯಾಸನಾದಂತೆ) ಆತ್ಮನಲ್ಲಿ ಜೀವಿಗಳೂ, ಈಶ್ವರನೂ, ಕಲ್ಪಿತರಾಗಿರುತ್ತಾರೆ. ಆತ್ಮನು ಮಾತ್ರ ಅವಿಕಲ್ಪನೂ, ಏಕನೂ, ವ್ಯಾಪಕನೂ, ಆಗಿರುತ್ತಾನೆ. ಹತ್ತಿಯ ಉಪಮಾನವು ಯಾವ ಗ್ರಂಥಕಾರರೂ ಕೊಟ್ಟಂತೆ ತೋರುವುದಿಲ್ಲ. ಈ ಹತ್ತಿಯ ಉಪಮಾವವು ನವೀನೋಪಮಾನವು. ಬಹುಸ್ವಾರಸ್ಯವಾದುದು. ಈ ಗ್ರಂಥಕರ್ತರ ಸ್ವಾನುಭವ ಉಪಮಾನದ ಝುರಿಯು ಅವರ್ಣನೀಯುವಾದುದು ಇಲ್ಲಿ ಒಟ್ಟಾರೆ ದುಃಖಿಗಳಾದ ಜೀವಿಗಳಲ್ಲಿಯೂ, ಸುಖಿಯಾದ ಈಶ್ವರನಲ್ಲಿಯೂ ಆತ್ಮನು ವಿವರ್ತರೂಪದಿಂದಿರುತ್ತಾನೆಂದು ತಿಳಿಯಬೇಕು.

## ವಾರ್ಧಿಕ ಷಟ್ಪದಿ.

ನೂರಾರು ಜೀವಿಗಳು ವ್ಯಷ್ಟಿ ರೂಪದಲಿದ್ದು ।
ಭೂರಿ ದುಃಖಕೆ ಭಾಗಿಯುಪ್ಪರುಸಮೇಷ್ಟಿ ತಾಂ ।
ಪೂರಿತಾನಂದದಿಂ ಶಿವನಿರುವ ನಿವರಿಗೇಕತ್ವವೊಪ್ಪಿಹುದೆಂತೆನೆ ॥
ನೂರಾರು ತುಂತುವಿಗು ಬಳಿಕವುಗಳಂ ಕೂಡಿ ।
ತೋರುತಿಹ ವಸ್ತ್ರಕ್ಕು ಹತ್ತಿಹೊದ್ದಿದರೀತಿ ।
ಸಾರಚಿನ್ಮಯ ಶುದ್ಧ ಬ್ರಹ್ಮವೊಪ್ಪಿರುತಿಹುದು ಸೈವರ್ತ್ಯರೂಪದಿಂದ ॥ ೨೭ ॥

**ಅವತಾರಿಕೆ** ;— ದುಃಖಿಗಳಾದ ಜೀವಿಗಳಲ್ಲಿಯೂ, ಸುಖಿಯಾದ ಈಶ್ವರನಲ್ಲಿಯೂ, ವಿವರ್ತರೂಪದಿಂದ ಆತ್ಮನಿರುವನೆಂದು ಹೇಳಿದಿರಿ. ಆದರೆ ಆತ್ಮನು ವಿವರ್ತರೂಪದಿಂದ ಜೀವಿಗಳಲ್ಲಿಯೂ. ಈಶ್ವರನಲ್ಲಿಯೂ. ಇದ್ದಮೇಲೆ ಜೀವಿಗಳು ದುಃಖಿಗಳಾಗುವುದಕ್ಕೂ, ಈಶ್ವರನು ಸುಖಿಯಾಗುವುದಕ್ಕೂ, ಕಾರಣವೇನು ? ಎಂಬ ಪ್ರಶ್ನೆಗೆ ಆ ದುಃಖಕ್ಕೂ. ಆ ಸುಖಕ್ಕೂ, ಉಪಾಧಿಗಳೇ ಕಾರಣವೆಂತಲೂ ಆ ಉಪಾಧಿಗಳು ನಾಶವಾದರೆ ಆತ್ಮನೊಬ್ಬನೇ ಉಳಿಯುವನೆಂತಲೂ, ಮುಂದಿನ ಶ್ಲೋಕವಲ್ಲಿ ಉತ್ತರಿಸುತ್ತಾರೆ.

## ಅನುಷ್ಟುಪ್ಪುವೃತ್ತ

**ಅವಿದ್ಯೋಪಾದಿತೋ ಜೀವೋ । ಮಾಯೋಪಾಧೇಸ್ಸದಾಶಿವಃ ॥**
**ಜ್ಞಾನೋಪಾಧೇಸ್ತು ಕೂಟಸ್ಥಾ । ಸ್ತನ್ನಾಶೇಬ್ರಹ್ಮ ಪೂರ್ವವತ್ ॥೨೮**

**ಪದಚ್ಛೇದ :-** ಅವಿದ್ಯ, ಉಪಾಧಿತಃ, ಜೀವಃ, ಮಾಯಾ, ಉಪಾಧೇಃ, ಸದಾಶಿವಃ, ಜ್ಞಾನಃ, ಉಪಾಧೇಃ, ಅಸ್ತು, ಕೂಟಸ್ಥಾಃ, ತನ್ನಾಶೇ, ಬ್ರಹ್ಮ ಪೂರ್ವವತ್,

**ಟೀಕ ;-** ಅವಿದ್ಯಃ = ಅಜ್ಞಾನದ । ಉಪಾಧಿತಃ = ಉಪಾಧಿಯಿಂದ। ಜೀವಃ = ಜೀವನಾಗಿಯೂ, । ಮಾಯಾ = ಮಾಯೆಯ । ಉಪಾಧೇಃ = ಉಪಾಧಿಯಿಂದ । ಸದಾಶಿವಃ = ಈಶ್ವರನೂ । ಜ್ಞಾನಃ = ಜ್ಞಾನದ । ಉಪಾಧೇಃ = ಉಪಾಧಿಯಿಂದ । ಕೂಟಸ್ಥಃ = ಕೂಟಸ್ಥನೂ । ಅಸ್ತು = ಆಗಲಿ । (ಹಾಗಾದರೂ) ತನ್ನಾಶೇ = ಆ ಉಪಾಧಿಗಳು ನಾಶವಾಗಲಾಗಿ । ಪೂರ್ವವತ್ = ಮೊದಲಿನಂತೆಯೇ । ಬ್ರಹ್ಮ = ಪರಬ್ರಹ್ಮವು । (ಇರುತ್ತದೆ.)

**ತಾತ್ಪರ್ಯ ;—** ಅವಿದ್ಯೋಪಾಧಿಯಿಂದ ಜೀವನೂ, ಮಾಯೋಪಾಧಿಯಿಂದ ಈಶ್ವರನೂ, ಜ್ಞಾನೋಪಾಧಿಯಿಂದ ಕೂಟಸ್ಥನೂ, ಆಗಿರುವರು. ಹಾಗಾದರೂ, ಆ ಅವಿದ್ಯ, ಮಾಯ, ಜ್ಞಾನ, ಈ ಉಪಾಧಿಗಳು ನಾಶವಾದರೆ ( ಕಳೆದರೆ ) ಮೊದಲಿನಂತೆ ಪರಬ್ರಹ್ಮವೊಂದೇ ಉಳಿದಿರುತ್ತದೆ.

**ವಿಶೇಷಾರ್ಥ ;—** ಜೀವನು ದುಃಖಿಯಾಗುವುದಕ್ಕೂ ಈಶ್ವರನು ಸುಖಿಯಾಗುವುದಕ್ಕೂ, ಕೂಟಸ್ಥನು ಸುಖದುಃಖಗಳೆರಡನ್ನು ಅಂಟಿಸಿಕೊಳ್ಳದಿರುವುದಕ್ಕೂ, ಆಯಾಯ ಉಪಾಧಿಗಳೇ ಕಾರಣಗಳಾಗಿರುತ್ತವೆ. ಹೇಗೆಂದರೆ ಅವಿದ್ಯೋಪಾಧಿಯಿಂದ ಜೀವನು ದುಃಖಿಯಾಗಿರುತ್ತಾನೆ. ಅವಿದ್ಯೆಯೆಂದರೆ " **ಸ್ವಾಶ್ರಯ ವ್ಯಾಮೋಹ ಕರೀ ಅವಿದ್ಯಾ** " ತನ್ನ ಆಶ್ರಯಕ್ಕೆ ಯಾವುದು ಮೋಹವನ್ನು ಉಂಟುಮಾಡುತ್ತಿರುವುದೋ ಅದು ಅವಿದ್ಯೆಯೆನ್ನಲ್ಪಡುತ್ತದೆ. ಅಂದರೆ ಅವಿದ್ಯೆಗೆ ಆಶ್ರಯ ಕೊಟ್ಟವನು ಜೀವನಾಗಿರುತ್ತಾನೆ. ಅವಿದ್ಯೆಯು ತನಗೆ ಆಶ್ರಯ ಕೊಟ್ಟಂಥ ಜೀವನಿಗೆ ನಾನಾತರದ ದುಃಖಗಳನ್ನು ಉಂಟುಮಾಡುವಂಥಾದ್ದಾಗಿದೆ. ಆದ್ದರಿಂದ ಅವಿದ್ಯೋಪಾಧಿಯಿಂದಲೇ ಜೀವನಿಗೆ ದುಃಖವೆಂಬುದುಂಟಾಗಲೀ ಸ್ವರೂಪತಃ ಜೀವಚ್ಚೈತನ್ಯದಲ್ಲಿ ದುಃಖವಿರುವುದಿಲ್ಲ. ಮಾಯೋಪಾಧಿಯಿಂದ ಈಶ್ವರನು ನಿತ್ಯಸುಖಿಯಾಗಿರುತ್ತಾನೆ. ಮಾಯೆಯೆಂದರೆ " **ಸ್ವಾಶ್ರಯಾಽ ವ್ಯಾಮೋಹ**

ಕರೀ ಮಾಯಾ” ತನ್ನ ಆಶ್ರಯಕ್ಕೆ ಯಾವುದು ಮೋಹವನ್ನು ಉಂಟು ಮಾಡುವುದಿಲ್ಲವೋ ಅದು ಮಾಯೆಯೆನ್ನಲ್ಪಡುತ್ತದೆ. ಅಂದರೆ ಮಾಯೆಗೆ ಆಶ್ರಯ ಕೊಟ್ಟವನು ಈಶ್ವರನಾಗಿರುತ್ತಾನೆ. ಮಾಯೆಯು ತನಗೆ ಆಶ್ರಯಕೊಟ್ಟಂಥ ಈಶ್ವರನಿಗೆ ದುಃಖವನ್ನು ಉಂಟುಮಾಡದೆ ಸುಖವನ್ನೇ ಉಂಟುಮಾಡುವಂಥಾ ದ್ದಾಗಿದೆ. ಆದ್ದರಿಂದ ಮಾಯೋಪಾಧಿಯಿಂದಲೇ ಈಶ್ವರನಿಗೆ ಸುಖವುಂಟಾಗುವು ದಾಗಲೀ ಸ್ವರೂಪತಃ ಈಶ್ವರಚೈತನ್ಯದಲ್ಲಿ ಸುಖವಿರುವುದಿಲ್ಲ. ಅಂದರೆ ಉಪಾಧಿ ಸಹಿತವಾದ ಸುಖವಿರುವುದಿಲ್ಲ. ಚೈತನ್ಯವೆಂಬುದು ಸ್ವಯಂ ಸುಖಸ್ವರೂಪವಾದುದು ಅದರಲ್ಲಿ ಉಪಾಧಿಯಿಂದುಂಟಾದ ಸುಖವಿರುವುದಿಲ್ಲ. ಇನ್ನು ಕೂಟಸ್ಥನು ಜ್ಞಾ ನೋಪಾಧಿಯಿಂದ ಸುಖದುಃಖಗಳೀಡನ್ನು ಅಂಟಿಸಿಕೊಳ್ಳದಿರುತ್ತಾನೆ. ಜ್ಞಾನ ವೆಂದರೆ ತನ್ನ ಆಶ್ರಯಕ್ಕೆ ಯಾವುದು ಸುಖದುಃಖಗಳನ್ನುಂಟು ಮಾಡುವುದಿಲ್ಲವೋ ಇದ್ದಕ್ಕಿದ್ದಂತೆ ಅರಿಯುವುದೋ ಅದು ಜ್ಞಾನವೆನ್ನಲ್ಪಡುತ್ತದೆ. ಅಂದರೆ ಜ್ಞಾನಕ್ಕೆ ಆಶ್ರಯ ಕೊಟ್ಟವನು ಕೂಟಸ್ಥನಾಗಿರುತ್ತಾನೆ. ಜ್ಞಾನವು ತನಗೆ ಆಶ್ರಯಕೊಟ್ಟಂಥ ಕೂಟಸ್ಥನಿಗೆ ಇಹಪರ ವಿಷಯಸಂಬಂಧ ಸುಖದುಃಖಗಳನ್ನು ಉಂಟುಮಾಡದಂಥಾ ದ್ದಾಗಿದೆ. ಆದ್ದರಿಂದ ಜ್ಞಾನೋಪಾಧಿಯಿಂದಲೇ ಕೂಟಸ್ಥನಿಗೆ ಸುಖದುಃಖಗಳ ನ್ನು ಅಂಟಿಸಿಕೊಳ್ಳದ ಸ್ಥಿತಿಯು ಉಂಟಾಗಿರುವುದಾಗಲೀ ಸ್ವರೂಪತಃ ಕೂಟಸ್ಥ ಚೈತನ್ಯದಲ್ಲಿ ಇಹಪರಸಂಬಂಧ ಸುಖದುಃಖಗಳನ್ನು ಅಂಟಿಸಿಕೊಳ್ಳಬಾರದೆಂಬುದು ಇರುವುದಿಲ್ಲ. ಸುಖವಾಗಲೀ, ದುಃಖವಾಗಲೀ, ಸುಖದುಃಖಗಳನ್ನು ಅಂಟಿಸಿ ಕೊಳ್ಳದಿರುವುದಕ್ಕಾಗಲೀ, ಆಯಾಯ ಉಪಾಧಿಗಳಧರ್ಮವೇ ಹೊರತು ನಿರುಪಾ ಧಿಕವಾದ ಶುದ್ಧಬ್ರಹ್ಮದಲ್ಲಿ ಇವುಯಾವೂ ಇರುವುದಿಲ್ಲ. ಅವಿದ್ಯಾ, ಮಾಯಾ, ಜ್ಞಾನ ಈ ಉಪಾಧಿಗಳನ್ನು ತೆಗೆದುಹಾಕಿದರೆ ಪೂರ್ವದಂತೆ ಪರಿಶುದ್ಧ ಬ್ರಹ್ಮ ವೊಂದೇ ಉಳಿಯುತ್ತದೆ. ಆ ಉಪಾಧಿಗಳನ್ನು ತೆಗೆದು ಹಾಕುವುದೆಂದರೆ ಉ ಪಾಧಿಗಳು ಮಿಥ್ಯವೆಂದು ಅರಿತರೆಸಾಕು. ಅವುಗಳನ್ನು ತೆಗೆದುಹಾಕಿದಂತಾಗುತ್ತದೆ ಆ ಉಪಾಧಿಗಳನ್ನು ತೆಗೆದುಹಾಕುವುದರಿಂದ ಶಿವಜೀವರಲ್ಲಿ ಏಕತ್ವವೆಂಬುದು ಸಿದ್ಧಿ ಸುತ್ತದೆ. ಅರುವು ಮರವು ಸುಖ ದುಃಖ ಮುಂತಾದ ಗಡಬಿಡಿಯೆಲ್ಲವೂ ಉಪಾ ಧಿಯ ಕೈಚಳಕವೆಂದು ಒಟ್ಟಾರೆ ತಿಳಿಯಬೇಕು.

**ಕಂದ**

ವಿದ್ಯೋಪಾಧಿಯುಳೀಶನ ।
ವಿದ್ಯೋಪಾಧಿಯುಲಿ ಜೀವನಿಪ್ಪನು ಜ್ಞಾನಃ ॥
ಹೊದ್ದಿರಲಾತ್ಮನು ಇವು ಕೆಡೆ ।
ಶುದ್ಧದ್ವಯ ಬ್ರಹ್ಮ ಮೊದಲಿನಂದದಲಿರ್ಕುಂ । ॥ ೨೮ ॥

**ಅವತಾರಿಕೆ :—** ಸುಖದುಃಖಾದಿಗಳೆಲ್ಲವೂ, ಉಪಾಧಿಗಳ ಧರ್ಮವೆಂತಲೂ ಉಪಾಧಿಗಳನ್ನು ತೆಗೆದುಹಾಕಿದರೆ ಶುದ್ಧಬ್ರಹ್ಮವೊಂದೇ ಉಳಿಯುವುದೆಂತಲೂ, ಮತ್ತು ಆ ಉಪಾಧಿಗಳನ್ನು ತೆಗೆದುಹಾಕಿದಾಗ, ಶಿವಜೀವರಲ್ಲಿ ಏಕತ್ವವು ಸಿದ್ಧಿಸುವುದೆಂತಲೂ, ತಾವು ಹೇಳಿದಿರಿ. ಆದರೆ ತತ್ತ್ವಮಸಿ ಮಹಾವಾಕ್ಯವನ್ನರಿಯಲು ಶಿವಜೀವರಲ್ಲಿ ಐಕ್ಯತ್ವವನ್ನು ಹೇಳುತ್ತದೆ. ಶಿವಜೀವರಲ್ಲಿ ಐಕ್ಯತ್ವವನ್ನು ಹೇಳುವ ತತ್ತ್ವಮಸಿ ಮಹಾವಾಕ್ಯದಲ್ಲಿ ಉಪಾಧಿಗಳನ್ನು ತೆಗೆದುಹಾಕಬೇಕೆಂಬುವ ಅರ್ಥವು ಇರುವುದಿಲ್ಲ. ತತ್, ತ್ವಂ, ಅಸಿ, ಎಂಬುದರಲ್ಲಿ ಅದುವೇ ನೀನಿದ್ದೀಯಿ. ಎಂದು ಹೇಳಿದಂತಾಯಿತಾಗಲೀ ಉಪಾಧಿಗಳನ್ನು ತೆಗೆದು ಹಾಕಬೇಕೆಂಬ ಅರ್ಥವು ಆ ವಾಕ್ಯದಲ್ಲಿ ಇರುವುದಿಲ್ಲ. ಆದ್ದರಿಂದ ಉಪಾಧಿಗಳನ್ನು ತೆಗೆದುಹಾಕದೆ ಶ್ರುತಿಯು ಶಿವಜೀವರಲ್ಲಿ ಐಕ್ಯತ್ವವನ್ನು ಹೇಳುತ್ತದೆ. ತಾವು ಉಪಾಧಿಗಳನ್ನು ತೆಗೆದು ಹಾಕಿದರೆ ಐಕ್ಯತ್ವವು ಸಿದ್ಧಿಸುತ್ತದೆ, ಎಂದು ಹೇಳುವುದು ಶ್ರುತಿಗೆ ವಿರೋಧ ವಾಗದೆ ? ಎಂಬ ಪ್ರಶ್ನೆಗೆ ಶಿವಜೀವರಲ್ಲಿರುವ ಮಾಯಾ ಅವಿದ್ಯಗಳನ್ನು ತೆಗೆದುಹಾಕದೆ ಅವರೀರ್ವರಿಗೆ ಐಕ್ಯವನ್ನು ಹೇಳಿದರೆ ವಿಜಾತೀಯ ದೋಷವು ಭೇದದೋಷವು ಸಂಭವಿಸುವುದೆಂದು ಮುಂದಿನ ಶ್ಲೋಕದಲ್ಲಿ ಉತ್ತರಿಸುತ್ತಾರೆ.

## * ಇಂದ್ರವಂಶ ವೃತ್ತ.

**ವಿಜಾತೀಯದೋಷಸ್ಸುಧಾಜ್ಯೈಕ್ಯತಾ ।**
**ಪುರಾಭಿನ್ನ ದೋಷೋ ಜಲಾದ್ಯೈಕ್ಯತಾ ।**
**ತಯೋರ್ಭಾತಿಪಾರೇ ನಭೋಭ್ರೈಕ್ಯತಾ ।**
**ಹ್ಯಸೌನೇತಿ ವಾಚ್ಯಾತ್ಮನೋರ್ಮೇಮತಾ ॥** ॥ ೨೯ ॥

**ಪದಚ್ಛೇದ :—** ವಿಜಾತೀಯದೋಷಃ, ಸುಧಾ, ಆಜ್ಯ, ಐಕ್ಯತಾ, ಪುರಾಃ, ಭಿನ್ನದೋಷಃ, ಜಲಾದಿ, ಐಕ್ಯತಾ, ತಯೋಃ, ಭಾತಿ, ಪಾರೇ, ನಭಃ ಅಭ್ರ, ಐಕ್ಯತಾ, ಅಸೌ, ನ, ಇತಿ, ವಾಚಾತ್ಮನಃ, ಮೇ, ಮತಾ.

**ತಾತ್ಪರ್ಯ ;—** ಪುರಾಃ = ತತ್ತ್ವಂಪದಾರ್ಥ ಜೀವೇಶ್ವರರಿಗೆ ಏಕತ್ವವನ್ನು ಹೇಳುವುದರ ಪೂರ್ವದಲ್ಲಿ । ಸುಧಾ = ಹಾಲಿಗೂ । ಆಜ್ಯ = ತುಪ್ಪಕ್ಕೂ । ಐಕ್ಯತಾ = ಐಕ್ಯತ್ವವನ್ನು ಹೇಳಿದರೆ । ವಿಜಾತೀಯ ದೋಷಾಃ = ವಿಜಾತೀಯ ದೋಷವು । (ಬರುತ್ತದೆ.) ಜಲಾದಿ = ನೀರಿಗೂ ಹಾಲಿಗೂ । ಐಕ್ಯತಾ = ಐಕ್ಯತ್ವ

* ಆರನೇ ಶ್ಲೋಕದ ಛಂದಸ್ಸನ್ನು ನೋಡಿ.

ವನ್ನು ಹೇಳಿದರೆ | ಭಿನ್ನದೋಷಃ = ಭೇದದೋಷವು (ಬರುತ್ತದೆ) ನಭಃ = ಆಕಾಶಕ್ಕೂ | ಅಭ್ರ = ಮೇಘಕ್ಕೂ | ಐಕ್ಯತಾ = ಐಕ್ಯತ್ವವನ್ನು ಹೇಳುವುದಾದರೆ | ತಯೋಃ = ಆ ವಿಜಾತೀಯ ಭೇದದೋಷಗಳೇ | ಪಾರೇ = ಅಂತ್ಯದಲ್ಲಿ | ಭಾತಿ ತೋರುತ್ತದೆ | (ಆದ್ದರಿಂದ) ವಾಚ್ಯಾತ್ಮನಃ = ವಿಶಿಷ್ಟಾತ್ಮನಿಗೆ | ಅಸೌ = ಈ ರೀತಿಯ ಏಕತ್ವವು | ನ = ಇಲ್ಲವು | ಇತಿ = ಹೇಗೆಂಬುದೇ | ಮೇ = ನನ್ನ | ಮತಾ = ಅಭಿಪ್ರಾಯವು |

**ತಾತ್ಪರ್ಯ ;—** ತತ್ತ್ವಂಪದ ವಾಚ್ಯಾರ್ಥ ಸ್ವರೂಪರಾದ ಶಿವಜೀವರಿಗೆ ಐಕ್ಯತ್ವವನ್ನು ಹೇಳಿದರೆ, ಆ ಐಕ್ಯತ್ವಕ್ಕಿಂತಲೂ, ಪೂರ್ವದಲ್ಲಿ ವಿಜಾತೀಯದೋಷವೂ, ಭೇದದೋಷವೂ, ಉಂಟಾಗುವುದೆಂಬುದು ನನ್ನ ಅಭಿಪ್ರಾಯವು. ಹಾಲು ತುಪ್ಪಗಳಿಗೈಕ್ಯತ್ವದಂತೆಂದರೆ ವಿಜಾತೀಯ ದೋಷವೂ, ಹಾಲುನೀರಿಗೈಕ್ಯತ್ವದಂತೆಂದರೆ ಭೇದತ್ವದೋಷವೂ, ಆಕಾಶ ಮೇಘಗಳ ಐಕ್ಯತ್ವದಂತೆಂದರೆ ಮುನ್ನಿನಂತೆ, ವಿಜಾತೀಯ ದೋಷವು ಪ್ರಾಪ್ತಿಯಾಗುತ್ತದೆ.

**ವಿಶೇಷಾರ್ಥ ;—** ತತ್ಪದವಾಚ್ಯಾರ್ಥವಾದ ಈಶ್ವರನಿಗೂ, ತ್ವಂಪದ ವಾಚ್ಯಾರ್ಥವಾದ ಜೀವನಿಗೂ ಐಕ್ಯತ್ವವು ಸಂಭವಿಸುವುದಿಲ್ಲ. ಐಕ್ಯತ್ವವು ಸಂಭವಿಸುವುದೆಂದರೆ ಮೊದಲೇ ವಿಜಾತೀಯ ಭೇದಗಳೆಂಬ ದೋಷಗಳನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಹೇಗೆಂದರೆ ಸರ್ವಜ್ಞತ್ವಾದಿ ಗುಣಗಳಿಂದ ಕೂಡಿದ ಈಶ್ವರನಿಗೂ, ಅಲ್ಪಜ್ಞತ್ವಾದಿಗುಣಗಳಿಂದ ಕೂಡಿದ ಜೀವನಿಗೂ, ಐಕ್ಯತ್ವಮಾಡುವುದಕ್ಕೆ ಹೊರಟರೆ ಹಾಲಿಗೂ, ತುಪ್ಪಕ್ಕೂ, ಐಕ್ಯ ಮಾಡಿದಂತಾಗುತ್ತದೆ. ಹಾಲಿನ ಗುಣಧರ್ಮಗಳು ತುಪ್ಪದಲ್ಲಿಲ್ಲ. ತುಪ್ಪದ ಗುಣಧರ್ಮಗಳು ಹಾಲಿನಲ್ಲಿಲ್ಲ. ಆ ಹಾಲು ತುಪ್ಪಗಳು ವಿಜಾತೀಯಗಳಾಗಿರುತ್ತವೆ ಇದರಂತೆ ಈಶ್ವರನ ಗುಣಧರ್ಮಗಳು ಜೀವನಲ್ಲಿಲ್ಲ. ಜೀವನ ಗುಣಧರ್ಮಗಳು ಈಶ್ವರನಲ್ಲಿಲ್ಲ. ಆದ್ದರಿಂದ ಆ ಈಶ್ವರಜೀವರಿಗೆ ಐಕ್ಯತ್ವವು ಸಂಭವಿಸುವುದಿಲ್ಲ. ಒಂದು ಪಕ್ಷ ಹಾಲು ನೀರು ಏಕತ್ವವಾಗುವುದು ಪ್ರತ್ಯಕ್ಷ ಕಂಡುಬರುವುದಿಲ್ಲವೆ? ಹಾಲನ್ನೂ ನೀರನ್ನೂ ಕೂಡಿಸುವುದರಿಂದ ಒಂದೇರೂಪವಾಗಿ ತೋರುವುದಿಲ್ಲವೇ ? ಎಂದು ಹೇಳಬಹುದು. ಆದರೆ ಆ ಹಾಲು ನೀರು ಕೂಡುವುದಕ್ಕಿಂತ ಪೂರ್ವದಲ್ಲಿ ಆವೆರಡು ಭಿನ್ನಭಿನ್ನವಾಗಿರುವುದರಿಂದ ಆ ಶಿವಜೀವರಲ್ಲಿ ಮೊದಲೇ ಭೇದತ್ವದೋಷವನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಭೇದತ್ವವನ್ನು ಒಪ್ಪಿಕೊಂಡನಂತರ ಐಕ್ಯತ್ವವೆಂಬುದು ಸಿದ್ಧಿಸುವುದುಂಟೆ? ಆದ್ದರಿಂದ ಶಿವಜೀವರಿಗೆ ಐಕ್ಯತ್ವವನ್ನು ಹೇಳಬಾರದು. ಒಂದುಪಕ್ಷ ಆಕಾಶದಂತೆ ಈಶ್ವರನಿರುತ್ತಾನೆ. ಮೇಘದಂತೆ ಜೀವನಿರುತ್ತಾನೆ ಆಕಾಶದಲ್ಲಿ ಮೇಘವು ಐಕ್ಯ

ವಾದಂತೆ ಈಶ್ವರನಲ್ಲಿ ಜೀವನು ಐಕ್ಯನಾಗುತ್ತಾನೆ. ಎಂದು ಹೇಳಿದರೆ ಮೊದಲಿನಂತೆ ವಿಜಾತೀಯ ದೋಷವೇ ಸಿದ್ಧವಾಗುತ್ತದೆ. ಹೇಗಂದರೆ ಆಕಾಶದ ಗುಣಧರ್ಮವು ಮೇಘದಲ್ಲಿರುವುದಿಲ್ಲ. ಮೇಘದ ಗುಣಧರ್ಮವು ಆಕಾಶದಲ್ಲಿರುವುದಿಲ್ಲ ಅವೆರಡು ವಿಜಾತೀಯಗಳಾಗಿವೆ. ಆದ್ದರಿಂದ ತತ್ತ್ವಂಪದಗಳಿಗೆ ವಾಚ್ಯಾರ್ಥರೂಪರಾದ ಶಿವಜೀವರಿಗೆ ಏಕತ್ವವನ್ನು ಹೇಳಬಾರದು. ಇದುನನ್ನ ಮತವೆಂದು ಗ್ರಂಥಕರ್ತರು ಒತ್ತಿಹೇಳಿರುತ್ತಾರೆ

## ವಾರ್ಧಿಕ ಷಟ್ಪದಿ.

ಅರಿಯಲ್ಕೆ ವಾಚ್ಯಾತ್ಮರಾದ ಶಿವಜೀವರ್ಗೆ ।
ಸರಿಯಪ್ಪದೈಕ್ಯತ್ವ ವೆಂದೊಡಾ ಪೂರ್ವದಲಿ ।
ಬರುತಿಹುದು ದೋಷವಿದು ನನ್ನಮತವೆಂತೆನಲ್ ಪಾಲ್ತುಪ್ಪಕೈಕ್ಯವೇಳೆ ॥
ಬರುವುದು ವಿಜಾತೀಯ ದೋಷಮೇಣ್ ಪಾಲ್ನೀರಿ ।
ಗೊರೆದೊಡೈಕ್ಯತ್ವವಂ ಭೇದದೋಷವು ಬರ್ಪು ।
ದರಿಯಲ್ಕೆ ನಭಕಭ್ರಕೇಕತ್ವವೆನೆ ಬರುವುದಾದೋಷ ಮೊದಲಿನಂತೆ ॥

ಅವತಾರಿಕೆ ;— ತತ್ತ್ವಮಸಿ ಮಹಾವಾಕ್ಯವು ಶಿವಜೀವರಿಗೇಕತ್ವವನ್ನು ಬೋಧಿಸುವುದೆಂದು ಅದ್ವೈತಿಗಳೆಲ್ಲರೂ ಹೇಳುತ್ತಿರಲು ತಾವು ಐಕ್ಯತ್ವವು ಕೂಡುವುದಿಲ್ಲವೆಂದು ಹೇಳಿದಂತಾಯಿತು. ಆದರೆ ದ್ವೈತಿಗಳು ಹೇಳುವಂತೆ ತಾವೂ ಹೇಳಿದಂತಾಯಿತು. ನಿಮ್ಮ ಸಿದ್ಧಾಂತವು ಅದ್ವೈತವಾಗಿರುವುದರಿಂದ ಶಿವಜೀವರಲ್ಲಿ ಐಕ್ಯತ್ವವು ಸಂಭವಿಸುವುದಿಲ್ಲವೆಂದು ಹೇಳಿದಮೇಲೆ ನಿಮ್ಮ ಸಿದ್ಧಾಂತವನ್ನು ನೀವೇ ಹಾನಿಮಾಡಿಕೊಂಡಂತಾಗಲಿಲ್ಲವೆ ? ಅಥವಾ ಆ ತತ್ತ್ವಮಸಿ ಮಹಾವಾಕ್ಯದಲ್ಲಿ ಶಿವಜೀವರಿಗೆ ಏಕತ್ವವನ್ನು ಹೇಳುವಂತಹ ಮತ್ತೊಂದು ವಿಧಾನವೇನಾದರೂ ಇರುವುದೇ ? ಇರುವುದಾದರೆ ಆ ವಿಧಾನವಾವುದು ? ಎಂಬ ಪ್ರಶ್ನೆಗಳಿಗೆ ಅದ್ವೈತ ಸಿದ್ಧಾಂತವೇ ನಮ್ಮ ಸಿದ್ಧಾಂತವೆಂತಲೂ, ತತ್ತ್ವಮಸಿ ಮಹಾವಾಕ್ಯದಲ್ಲಿರುವ ಶಿವಜೀವರ ಏಕತ್ವದ ವಿಷಯದಲ್ಲಿ ತತ್, ತ್ವಂ, ಪದಗಳ ವಾಚ್ಯಾರ್ಥಮಂ ಬಿಟ್ಟು ಲಕ್ಷ್ಯಾರ್ಥವನ್ನು ಹಿಡಿದು ಏಕತ್ವವನ್ನು ಹೇಳುವ ವಿಧಾನ ಉಂಟೆಂತಲೂ, ತತ್ತ್ವಂ ಪದಗಳ ವಾಚ್ಯಾರ್ಥವನ್ನು ಬಿಟ್ಟು ಲಕ್ಷ್ಯಾರ್ಥವನ್ನು ಅರಿತು ಅಳವಡಿಸಿಕೊಂಡು ಸ್ವಲೀಲೆಯಿಂದ ಸಂಚರಿಸುವ ಮಹನೀಯರೂ ಇರುವರೆಂತಲೂ, ಮುಂದಿನ ಶ್ಲೋಕದಲ್ಲಿ ಉತ್ತರಿಸುತ್ತಾರೆ.

## * ಶಾರ್ದೂಲ ವಿಕ್ರೀಡಿತಾವೃತ್ತ.

ವಾಚ್ಯಾರ್ಥಂ ವ್ಯಪನೀಯ ತತ್ತ್ವಮುಭಯೋ ರಂತಸ್ತಯೋರ್ಲಕ್ಷಿತೇ ।
ಚೈತನ್ಯದ್ವಿತಯೇ ವಿಸರ್ಜ್ಯಚಪುನ ರ್ಭೇದಾಪರೋಕ್ಷದ್ವಯಂ ।
ಐಕ್ಯಂ ತಚ್ಛಿವಜೀವಯೋ ರನುಮನನ್ಭಾಗಾಹ್ವಯಾಲ್ಲಕ್ಷಣಾ ।
ದಾತ್ಮಾಸನ್ನಸಿಚೋದಿತೋ ವಿಹರತೇ ಯೋಗೀಗಳದ್ಬಂಧನಃ ॥ ೬೯ ॥

**ಪದಚ್ಛೇದ** ;— ವಾಚ್ಯಾರ್ಥಂ, ವ್ಯಪನೀಯ, ತತ್, ತ್ವಂ, ಉಭಯೋಃ ಅಂತಃ ತಯೋಃ, ಲಕ್ಷಿತೇ, ಚೈತನ್ಯಾದ್ವಿತಯೇ, ವಿಸರ್ಜ್ಯ, ಚ, ಪುನಃ, ಭೇದಾ ಪರೋಕ್ಷದ್ವಯಂ, ಐಕ್ಯಂ, ತತ್, ಶಿವಜೀವಯೋಃ, ಅನುಮನನ್, ಭಾಗಾಹ್ವ ಯಾತ್, ಲಕ್ಷಣಾತ್, ಆತ್ಮಾ, ಸನ್, ಅಸಿ, ಚೋದಿತಃ, ವಿಹರತೇ, ಯೋಗೀ, ಗಳತ, ಬಂಧನಃ.

**ಟೀಕ** ;— ತತ್ = ತತ್ಪದ । ತ್ವಂ = ತ್ವಂಪದ । ಉಭಯೋಃ = ಇವೆರ ಡರ । ವಾಚ್ಯಾರ್ಥಂ = ಶಕ್ಯಾರ್ಥವನ್ನು । ವ್ಯಪನೀಯ = ಬಿಟ್ಟು । ತಯೋಃ = ಆ ತತ್ ತ್ವಂ ಉಭಯ ಪದಗಳ । ಅಂತಃ = ಒಳಗೆ । ಲಕ್ಷಿತೇ = ಲಕ್ಷಣಾ ವೃತ್ತಿಯಿಂದ ಲಕ್ಷಿಸುವಂಥ । ಚೈತನ್ಯದ್ವಿತಯೇ = ಕೂಟಸ್ಥ ಬ್ರಹ್ಮವೆಂಬುಭಯ ಚೇತನಗಳಲ್ಲಿ । ಪುನಃ = ಮತ್ತು । ಭೇದಾಪರೋಕ್ಷದ್ವಯಂ = ಭಿನ್ನತ್ವ ಅಪ ರೋಕ್ಷತ್ವಗಳೆರಡನ್ನು । ವಿಸರ್ಜ್ಯ = ಕಳೆದು । ಚ = ಮತ್ತು । ತತ್ = ಆ । ಶಿವಜೀವಯೋಃ = ಶಿವಜೀವರುಗಳಿಗೆ । ಭಾಗಾಹ್ವಯಾತ್ = ಭಾಗತ್ಯಾಗವೆಂಬ ಹೆಸರಿನ । ಲಕ್ಷಣಾತ್ = ಲಕ್ಷಣದಿಂದ । ಐಕ್ಯಂ = ಏಕತ್ವವನ್ನು । ಅನುಮನನ್ = ನಿಶ್ಚಯಿಸಿಕೊಂಡು । ಆತ್ಮಾ = ಆತ್ಮನು । ಸತ್ = ಸತ್ತಾಮಾತ್ರನಾಗಿ । ಅಸಿ = ಇರುವನೆನ್ನುವ ಅಸಿಪದದಿಂದ । ಚೋದಿತಃ = ಪ್ರವರ್ತಿಸಿದಂಥಃ । ಬಂಧನಃ = ಬಂ ಧನವು । ಗಳತ = ಕಳಚಿಬಿದ್ದಂಥಾ । ಯೋಗೀ = ಮಹಾತ್ಮನು । ವಿಹರತೇ = ವಿಹಾರಮಾಡುತ್ತಾನೆ.

**ತಾತ್ಪರ್ಯ** ;— ತತ್ಪದ ತ್ವಂಪದ ಇವೆರಡರ ವಾಚ್ಯಾರ್ಥಗಳನ್ನು ಬಿಟ್ಟು ಲಕ್ಷ್ಯಾರ್ಥವನ್ನು ಲಕ್ಷಣಾವೃತ್ತಿಯಿಂದ ಲಕ್ಷಿಸಿ, ಕೂಟಸ್ಥ, ಬ್ರಹ್ಮವೆಂಬುಭ ಯ ಚೇತನಗಳಲ್ಲಿ ಪುನಃ ಭಿನ್ನತ್ವ ಅಪರೋಕ್ಷತ್ವಗಳೆರಡನ್ನು ಕೈಬಿಟ್ಟು ಆ ಶಿವ ಜೀವರುಗಳಿಗೆ ಭಾಗತ್ಯಾಗನಾಮಕ ಲಕ್ಷಣದಿಂದ ಏಕತ್ವವನ್ನು ನಿಶ್ಚಯಿಸಿ. ಸತ್ತಾ ಮಾತ್ರನು ನಿರ್ವಿಕಲ್ಪ ಚೇತನನು ಇರುವಿಯೆಂಬ ಅಸಿಪದದಿಂದ ತಿಳಿದು, ಜ್ಞಾನಿಯು ಬಂಧ ರಹಿತನಾಗಿ ವಿಹರಿಸುತ್ತಾನೆ.

**ವಿಶೇಷಾರ್ಥ :—** ತತ್ತ್ವಮಸಿ ಮಹಾವಾಕ್ಯದಿಂದ ಶಿವಜೀವರಲ್ಲಿ ಏಕತ್ವವನ್ನು ತಿಳಿದುಕೊಳ್ಳುವ ವಿಧಾನವೆಂತೆಂದರೆ, ತತ್ ಪದಕ್ಕೆ ವಾಚ್ಯಾರ್ಥವು ಸರ್ವಜ್ಞತ್ವಾದಿ ಗುಣಗಳಿಂದಕೂಡಿದ ಈಶ್ವರನು. ಲಕ್ಷ್ಯಾರ್ಥವು ನಿರುಪಾಧಿಕವಾದ ಬ್ರಹ್ಮವು. ತ್ವಂಪದಕ್ಕೆ ವಾಚ್ಯಾರ್ಥವು ಅಲ್ಪಜ್ಞತ್ವಾದಿ ಗುಣಗಳಿಂದ ಕೂಡಿದ ಜೀವನು. ಲಕ್ಷ್ಯಾರ್ಥವು ಕೂಟಸ್ಥಾತ್ಮನು. ತತ್ತ್ವಂಪದಗಳಿಗೆ ವಾಚ್ಯಾರ್ಥ ಸ್ವರೂಪರಾದ ಶಿವಜೀವರಿಗೆ ಏಕತ್ವವು ಸಂಭವಿಸುವುದಿಲ್ಲ. ಲಕ್ಷ್ಯಾರ್ಥ ಸ್ವರೂಪವಾದ ನಿರುಪಾಧಿಕ ಶುದ್ಧಬ್ರಹ್ಮಕ್ಕೂ ಕೂಟಸ್ಥನಿಗೂ, ಏಕತ್ವವು ಸಂಭವಿಸುತ್ತದೆ. ಶಿವಜೀವರಿಗೆ ಏಕತ್ವವನ್ನು ಹೇಳುವ ಸಂದರ್ಭದಲ್ಲಿ ಶಿವಚೈತನ್ಯಕ್ಕೂ, ಜೀವಚೈತನ್ಯಕ್ಕೂ ಏಕತ್ವವನ್ನು ಗ್ರಹಿಸಬೇಕಾಗಲೀ, ಮಾಯಾ ಅವಿದ್ಯ ಉಪಾಧಿ ಸಹಿತರಾದ ಶಿವಜೀವರಿಗೆ ಏಕತ್ವವನ್ನು ಹೇಳಬಾರದು. ಮಾಯಾ ಅವಿದ್ಯ ಉಪಾಧಿ ಸಹಿತರಾದ ಶಿವಜೀವರು ತತ್ತ್ವಂ ಪದಗಳಿಗೆ ವಾಚ್ಯಾರ್ಥರು. ತತ್ತ್ವಂ ಪದಗಳ ವಾಚ್ಯಾರ್ಥವನ್ನು ತೆಗೆದುಹಾಕುವುದಕ್ಕೆ ಲಕ್ಷಣಾವೃತ್ತಿಯುಬೇಕು. ಲಕ್ಷಣಾವೃತ್ತಿಯೆಂದರೆ ಶಕ್ತಿವೃತ್ತಿಗೆ ಯಾವುದು ವಿಷಯವಾಗಿರುತ್ತದೆಯೋ ಅದು ಶಕ್ಯವಾಗಿರುತ್ತದೆ. ಈ ಶಕ್ಯವನ್ನು ವಾಚ್ಯವೆಂದುಹೇಳುತ್ತಾರೆ. ಆ ಶಕ್ಯಪದಾರ್ಥಕ್ಕೆ ಲಕ್ಷ್ಯಮಾಣ ಪದಾರ್ಥದೊಡನೆ ಇರುವ ಯಾವಸಂಬಂಧ ವಿರುವುದೋ ಅದು ಲಕ್ಷಣವೆನ್ನಲ್ಪಡುತ್ತದೆ. ಉದಾ ;— ಒಬ್ಬ ಆಪ್ತನಾದ ವಕ್ತನು ಮಂಟಪಸ್ಥ ಪುರುಷನಿಗೆ ಭೋಜನಮಾಡಿಸಬೇಕೆಂಬ ಅಭಿಪ್ರಾಯದಿಂದ " **ಮಂಟಪಂಭೋಜಯ** " ಎಂದು ಒಬ್ಬಪುರುಷನನ್ನುಕುರಿತುಹೇಳಿದನು. ಆ ವಚನವನ್ನು ಶ್ರವಣಮಾಡಿದ ಆ ಪುರುಷನು ಜಡವಾದ ಮಂಟಪದಲ್ಲಿ ಭೋಜನಕರ್ತೃತ್ವದ ಅಯೋಗ್ಯತೆಯನ್ನು ತಿಳಿದು ಆ ಮಂಟಪ ಪದಕ್ಕೆ ಆ ಮಂಟಪಸ್ಥ ಪುರುಷನಲ್ಲಿ ಲಕ್ಷಣಮಾಡುತ್ತಾನೆ. ಇಲ್ಲಿ ಮಂಟಪ ಶಬ್ದಕ್ಕೆ ಶಕ್ಯಾರ್ಥವಾದ ಯಾವ ಗೃಹವಿಶೇಷವಿರುವುದೋ ಅದಕ್ಕಾಪುರುಷನಲ್ಲಿ ಸಂಯೋಗ ಸಂಬಂಧವಿರುತ್ತದೆ. ಇದು ಲಕ್ಷಣವೆನ್ನಲ್ಪಡುತ್ತದೆ. " **ಶಕ್ಯಸಂಬಧಃ ಲಕ್ಷಣಾ** " ಇನ್ನು ಆ ಲಕ್ಷಣಾವೃತ್ತಿಯಲ್ಲಿ ಜಹಲ್ಲಕ್ಷಣವೆಂತಲೂ, ಅಜಹಲ್ಲಕ್ಷಣವೆಂತಲೂ, ಜಹದಜಹಲ್ಲಕ್ಷಣವೆಂತಲೂ, ಮೂರುವಿಧಗಳುಂಟು. ಜಹಲ್ಲಕ್ಷಣವೆಂದರೆ, " **ಶಕ್ಯಾರ್ಥ ಪರಿತ್ಯಾಗೇನ ತತ್ಸಂಬಂಧ್ಯರ್ಥಾಂತರೇ ವೃತ್ತಿಃ ಜಹಲ್ಲಕ್ಷಣಾ** " ಪದದ ಶಕ್ಯಾರ್ಥ (ವಾಚ್ಯಾರ್ಥ) ವನ್ನು ಪರಿತ್ಯಜಿಸಿ ಆ ಶಕ್ಯಾರ್ಥಕ್ಕೆ ಸಂಬಂಧವುಳ್ಳ ಅನ್ಯಪದಾರ್ಥದಲ್ಲಿ ಆಪದದ ಯಾವ ಲಕ್ಷಣಾವೃತ್ತಿಯಿರುವುದೋ ಅದು ಜಹಲ್ಲಕ್ಷಣವೆನ್ನಲ್ಪಡುತ್ತದೆ. ಉದಾ — ಶ್ರೋತ್ರನಿಗೆ ಮದ್ರಾಸಿನಲ್ಲಿ ಒಬ್ಬ ವಿದ್ಯಾವಂತನಿಗೆ ತನ್ನ ಮಗಳನ್ನು ಕೊಡುತ್ತೇನೆಂಬುದನ್ನು ತಿಳುಹಿಸಬೇಕೆಂದು ಆಪ್ತನಾದ ವಕ್ತಾ ಪುರುಷನಿಂದ ಉಚ್ಚರಿಸಲ್ಪಟ್ಟ " **ನನ್ನ ಮಗಳನ್ನು ಮದ್ರಾ**

**ಸಿಗೆ ಕೊಡುತ್ತೇನೆ"** ಎಂಬ ಯಾವ ವಾಕ್ಯ ವಿರುವುದೋ ಆ ವಾಕ್ಯ ಶ್ರವಣ ದಿಂದ ಶ್ರೋತ್ರನಿಗೆ ಮದ್ರಾಸುಪದದ ಶಕ್ಯಾರ್ಥರೂಪ ನಗರದಲ್ಲಿ ಅನುಪಪತ್ತಿ ಯನ್ನು ಕಂಡು ಮದ್ರಾಸುಪದಕ್ಕೆ ವಿದ್ಯಾವಂತನಲ್ಲಿ ಲಕ್ಷಣಮಾಡುತ್ತಾನೆ. ಇಲ್ಲಿ ಮದ್ರಾಸುಪದಕ್ಕೆ ಶಕ್ಯಾರ್ಥವಾದ ನಗರವನ್ನು ಪರಿತ್ಯಜಿಸಿ ( ಮದ್ರಾಸೆಂಬ ಆ ಊರಿಗೇ ಮಗಳನ್ನು ಕೊಡುವುದಿಲ್ಲವೆಂದು ತಿಳಿದು ಆ ಊರನ್ನೇ ಪರಿತ್ಯಜಿಸಿ ) ಆ ಶಕ್ಯಾರ್ಥಕ್ಕೆ ಸಂಯೋಗ ಸಂಬಂಧವುಳ್ಳ ಯಾವ ವಿದ್ಯಾವಂತರೂಪ ಅರ್ಥ ವಿರುವುದೋ ಆ ವಿದ್ಯಾವಂತನಲ್ಲಿ ಆ ಮದ್ರಾಸು ಪದದ ಲಕ್ಷಣಾವೃತ್ತಿ ಇರು ತ್ತದೆ. ಇದು ಜಹಲ್ಲಕ್ಷಣವೆನ್ನಲ್ಪಡುತ್ತದೆ. ಪದಗಳ ವಾಚ್ಯಾರ್ಥವನ್ನು ಸಂಪೂರ್ಣ ತ್ಯಾಗಮಾಡಿ, ತತ್ಸಂಬಂಧದ ಅರ್ಥವನ್ನು ಗ್ರಹಿಸುವುದೇ ಜಹಲ್ಲಕ್ಷಣವೆಂದು ತಿಳಿಯ ಬೇಕು.

ಇನ್ನು ಅಜಹಲ್ಲಕ್ಷಣವೆಂದರೆ " **ಶಕ್ಯಾರ್ಥಾಽಪರಿತ್ಯಾಗೇನ ತತ್ಸಂಬಂಧ್ಯ ರ್ಥಾಂತರೇ ವೃತ್ತಿಃ ಅಜಹಲ್ಲಕ್ಷಣಾ** " ಪದದ ಶಕ್ಯಾರ್ಥಕ್ಕೆ ಪರಿತ್ಯಾಗವಿಲ್ಲದೆ ಆ ಶಕ್ಯಾರ್ಥದ ಸಂಬಂಧವುಳ್ಳ ಅನ್ಯಪದಾರ್ಥದಲ್ಲಿ ಆ ಪದದ ಯಾವ ಲಕ್ಷಣಾ ವೃತ್ತಿ ಇರುವುದೋ ಅದು ಅಜಹಲ್ಲಕ್ಷಣವೆನ್ನಲ್ಪಡುತ್ತದೆ. ಉದಾ :- ಮಂಚಸ್ಥ ಪುರುಷನನ್ನು ತಿಳುಹಿಸಿಕೊಡಬೇಕೆಂಬ ಉದ್ದೇಶದಿಂದ ಕೂಡಿದ ಆಪ್ತನಾದ ಪುರುಷ ನಿಂದ ಉಚ್ಚರಿಸಲ್ಪಟ್ಟ " **ಮಂಚಾಃ ಕ್ರೋಶಂತಿ** " ಎಂಬ ಯಾವ ವಚನ ವಿರುವುದೋ ಆ ವಚನವನ್ನು ಶ್ರವಣಮಾಡಿದ ಶ್ರೋತ್ರನಾದ ಪುರುಷನು, ಜಡ ವಾದ ಮಂಚದಲ್ಲಿ ಶಬ್ದಕರ್ತೃತ್ವದಲ್ಲಿ ಯೋಗ್ಯತೆಯಿಲ್ಲದಿರುವುದನ್ನು ಕಂಡು ಆ ಮಂಚ ಪದಕ್ಕೆ ಶಕ್ಯಾರ್ಥರೂಪ ಮಂಚಪದವನ್ನು ತ್ಯಾಗಮಾಡದೆ ಆ ಮಂಚಪದಕ್ಕೆ ಮಂಚಸ್ಥ ಪುರುಷನಲ್ಲಿ ಯಾವ ಲಕ್ಷಣಾವೃತ್ತಿ ಇರುವುದೋ ಅದನ್ನು ಅಜಹಲ್ಲಕ್ಷಣ ವೆನ್ನುತ್ತಾರೆ. ಅಂದರೆ ಪದದ ವಾಚ್ಯಾರ್ಥಸಹಿತ ಅಧಿಕಾರ್ಥವನ್ನು ಊಹಿಸಿ, ನಿಶ್ಚಯಿಸುವುದೇ ಅಜಹಲ್ಲಕ್ಷಣವೆಂದು ತಿಳಿಯಬೇಕು.

ಇನ್ನು ಜಹದಜಹಲ್ಲಕ್ಷಣವೆಂದರೆ " **ಶಕ್ಯೈಕದೇಶ ಪರಿತ್ಯಾಗೇನೈಕದೇಶೇ ವೃತ್ತಿಃ ಜಹದಜಹಲ್ಲಕ್ಷಣಾ** " ಪದದ ಶಕ್ಯಾರ್ಥದಲ್ಲಿ ಏಕದೇಶವನ್ನು ಪರಿತ್ಯಾಗ ಮಾಡಿ, ಏಕದೇಶದಲ್ಲಿ ಪದದ ಯಾವ ಲಕ್ಷಣಾವೃತ್ತಿಯಿರುವುದೋ ಅದು ಜಹದಜ ಹಲ್ಲಕ್ಷಣವೆನ್ನಲ್ಪಡುತ್ತದೆ. ಈ ಲಕ್ಷಣಕ್ಕೆ ಅರ್ಧ ಲಕ್ಷಣವೆಂತಲೂ ಖಂಡಲಕ್ಷಣ ವೆಂತಲೂ, ಭಾಗತ್ಯಾಗಲಕ್ಷಣವೆಂತಲೂ, ಪರ್ಯಾಯನಾಮಗಳಿವೆ. ಉದಾಹರಣೆ ದೇವದತ್ತ ಪುರುಷನ ಅಭೇದವನ್ನು ಬೋಧಿಸುವ ತಾತ್ಪರ್ಯದಿಂದ ಆಪ್ತ ಪುರುಷ ನಿಂದ ಉಚ್ಚರಿಸಲ್ಪಟ್ಟ " **ಸೋಽಯಂ ದೇವದತ್ತಃ** " ಎಂಬ ಯಾವವಾಕ್ಯ ವಿರುವುದೋ ಆ ವಾಕ್ಯವನ್ನು ಶ್ರವಣಮಾಡಿದ ಶ್ರೋತಾ ಪುರುಷನು **'ಸಃ'**

ಹೊಡೆದು ಸೋತನು. ಕೊನೆಗೆ ವಿವೇಕ ಉಂಟಾಗಿ ಇದು ಸರ್ಪವು ಅಹುದೋ ಅಲ್ಲವೋ ಎಂದು ಬೆಳಕನ್ನು ಹಚ್ಚಿ ವಿಚಾರಿಸಿದನು. ಆಗ ಆ ಸರ್ಪಕ್ಕೆ ಅಧಿಷ್ಠಾನವಾದ ಹಗ್ಗದ ಜ್ಞಾನವಾಯಿತು. ತನಗೆ ಆ ಹಗ್ಗದ ಜ್ಞಾನವಾದ ಕೂಡಲೆ ಆ ಸರ್ಪದ ಭೀತಿಯು ನಾಶವಾಯಿತು. ಅಲ್ಲದೆ ತಾನು ಮೊದಲೆಸಗಿದ ಮಂತ್ರ ತಂತ್ರಾದಿಗಳೆಲ್ಲವೂ ನಿಷ್ಪ್ರಯೋಜನವಾದವೆಂದು ನಿರ್ಧರಿಸಿದನು. ಅಂದರೆ ಹಗ್ಗದ ಅಜ್ಞಾನದಿಂದ ಉಂಟಾದ ಸರ್ಪ ಭೀತಿಯು ಆ ಹಗ್ಗದ ಜ್ಞಾನದಿಂದಲೇ ನಿವೃತ್ತಿಯಾಯಿತಾಗಲಿ ತಾನೆಸಗಿದ ಮಂತ್ರಾದಿಗಳಿಂದಲ್ಲ. ಎಂತೋ ಅಂತೆಯೇ ಸ್ವರೂಪದ ಅಜ್ಞಾನದಿಂದ ಉಂಟಾದ ಜೀವಭವವು (ಬಂಧವು) ಸ್ವರೂಪ ಜ್ಞಾನದಿಂದಲೇ ನಿವೃತ್ತಿಯಾಗುವುದು. ಅರ್ಥಾತ್ ನಾನಾರು ? ಎಂಬ ವಿಚಾರದಿಂದ ನಿವೃತ್ತಿಯಾಗುವುದು. ಮುಮುಕ್ಷುವಾದವನು ನಾನಾರೆಂಬ ವಿಚಾರವನ್ನು ಮುಖ್ಯವಾಗಿ ಮಾಡತಕ್ಕದ್ದು. ನಾನಾರೆಂಬ ವಿಚಾರವನ್ನು ಮಾಡದೆ ನಿತ್ಯನೈಮಿತ್ತಿಕ ಕಾಮ್ಯಪ್ರಾಯಶ್ಚಿತ್ತಗಳೆಂಬ ವಿಹಿತ ಕರ್ಮಗಳನ್ನು ಆಚರಿಸಿದರೂ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಿಗಳೆಂಬ ಆಶ್ರಮ ಧರ್ಮಗಳನ್ನು ಆಚರಿಸಿದರೂ, ತನ್ನಬುದ್ಧಿಗಂಟಿ ಕೊಂಡಿರುವ ಜೀವತ್ವ ಭಾವನೆಯು ಬಿಡುಗಡೆ ಹೊಂದುವುದಿಲ್ಲ. ಆದ್ದರಿಂದ ಮುಮುಕ್ಷು ವಾದವನು ತನ್ನ ಸ್ವರೂಪ ಜ್ಞಾನವನ್ನೇ ಮಾಡಿಕೊಳ್ಳಬೇಕು. ತನ್ನ ಸ್ವರೂಪ ಜ್ಞಾನ ಮಾಡಿಕೊಂಡಾಗ "ಅಹಂಬ್ರಹ್ಮಾಸ್ಮಿ" ನಾನು ಶುದ್ಧ ಬ್ರಹ್ಮನಿದ್ದೇನೆ. ಎಂಬ ತಿಳಿವು ಬುದ್ಧಿಯಲ್ಲಿ ಮೂಡುವುದರಿಂದ ಕರ್ತೃತ್ವಭೋಕ್ತೃತ್ವ ರೂಪವಾದ ಜೀವಭಾವವು ತನ್ನಷ್ಟಕ್ಕೆ ತಾನೇ ನಿವೃತ್ತಿಯಾಗುತ್ತದೆ. ಆದ್ದರಿಂದ ಮುಕ್ತಿಗೆ ಜ್ಞಾನವೊಂದೇ ಪರಮಸಾಧನವಾಗಲಿ ಕರ್ಮಧರ್ಮಗಳು ಸಾಧನವಲ್ಲ. "ನಕರ್ಮಣಾ" ಎಂಬ ಶ್ರುತಿಯು ಕರ್ಮ ತಿರಸ್ಕಾರವನ್ನು ಸಹಜವಾಗಿ ಮಾಡುತ್ತದೆ ಎಂಬ ಭಾವವು.

## ಪರಿವರ್ಧಿನಿ ಷಟ್ಪದಿ.

ಗುಣದಲಿ ಫಣಿಭಯ ಪೋಗಲು ಪರಿಕಿಪ ।
ಗುಣದಿಂದಲ್ಲವೆ ಮಂತ್ರ ತಂತ್ರಗಳ ।
ಗಣದಿಂ ಪೋಗದ ವಿಧದಿಂ ಜಗದೊಳ್ ಮೋಕ್ಷವ ಕಾಂಕ್ಷಿಸುವ ॥
ಗುಣವಂತನು ಪುಸಿ ಜೀವಭಾವ ಕಡೆ ।
ಗೆಣೆಸಲ್ಕರಿವಿಂದಲ್ಲದೆ ಕರ್ಮದ ।
ಗುಣದಿಂ ಧರ್ಮದ ಗುಣದಿಂ ಪೋಗದು ಶ್ರುತಿತತಿಸಿದ್ಧವಿದು ॥ ೩೨ ॥

ತಿಯು ಬಲಿತರೆ ಮೋಕ್ಷವುಂಟಾಗುವುದೆಂದು ತಿಳಿಯುತ್ತಾರೆ. ಇವರಲ್ಲಿಯೂ ಸಹ ದ್ವೈತಮತಿಯು ಬಲಗೊಂಡಿರುವುದೆಂದು ತಿಳಿಯಬೇಕು. ಏಕೆಂದರೆ ತನಗೆ ಹೊರತಾಗಿ ದುಃಖವನ್ನುಂಟು ಮಾಡುವ ವಿಷಯಗಳಿರುತ್ತವೆ. ಆ ವಿಷಯಗಳನ್ನು ಬಿಟ್ಟರೆ ಸುಖವಾಗುತ್ತದೆ ಎಂಬ ತಿಳುವಿನಲ್ಲಿ ವೈರಾಗ್ಯವು ಸಂಜನಿಸುವುದರಿಂದ ವೈರಾಗ್ಯವು ದ್ವೈತಮತಿಯ ಅಡಿಗಲ್ಲಾಗಿದೆ. ಬರೀ ವೈರಾಗ್ಯದಿಂದ ನಿಜಸುಖವು ಸಿದ್ಧಿಸುವುದಿಲ್ಲ. ಒಂದುಪಕ್ಷ ಬರೀ ವೈರಾಗ್ಯದಿಂದಲೇ ಮುಕ್ತಿಯಾಗುವುದಿದ್ದರೆ ಸ್ವರೂಪ ಜ್ಞಾನೋಪದೇಶವು ನಿಷ್ಪ್ರಯೋಜನವಾಗಬೇಕಾದೀತು. ಆದ್ದರಿಂದ ಬರೀ ವೈರಾಗ್ಯದಿಂದ ಮೋಕ್ಷವು ಸಿದ್ಧಿಸುವುದಿಲ್ಲ. ಇನ್ನು ಕೆಲವರು ಇಂದ್ರಿಯಗಳನ್ನು ನಿಗ್ರಹಿಸುವುದರಿಂದ ಮೋಕ್ಷವಾಗುವುದೆಂದು ತಿಳಿಯುತ್ತಾರೆ. ಇವರ ತಿಳುವಳಿಕೆಯಲ್ಲಿಯೂ ಸಹ ದ್ವೈತವಾಸನೆಯು ನೆಲೆಗೊಂಡಿರುತ್ತದೆ ಮತ್ತೆ ಕೆಲವರು ಪಂಚಾಗ್ನ್ಯಾದಿ ತಪಸ್ಸನ್ನಾಚರಿಸಿದರೆ ಮೋಕ್ಷವಾಗುವುದೆಂದು ಬಗೆಯುತ್ತಾರೆ. ಇವರಲ್ಲಿಯೂ ದ್ವೈತವಾಸನೆಯು ತುಂಬಿಕೊಂಡಿರುತ್ತದೆ. ಬೇರೆ ಕೆಲವರು ಯಮನಿಯಮಾದಿ ಅಷ್ಟಾಂಗಪೂರ್ವಕ ಯೋಗವನ್ನು ಸಾಧಿಸಿದರೆ ಮೋಕ್ಷವಾಗುವುದೆಂದು ಬಗೆಯುತ್ತಾರೆ. ಇವರಲ್ಲಿಯೂ ಸಹ ಭೇದಜ್ಞಾನರೂಪ ದ್ವೈತವಾಸನೆಯು ನೆಲೆಗೊಂಡಿರುತ್ತದೆ. ಯೋಗವು ಚಿತ್ತ ಚಂಚಲವನ್ನು ಕಳೆಯುವುದಾಗಲಿ, ಸ್ವರೂಪಾವರಣವಾದ ಅಜ್ಞಾನವನ್ನು ಕಳೆಯುವುದಿಲ್ಲ. ಆದರೆ ಮೇಲ್ಕಂಡವರೆಲ್ಲರೂ ದ್ವೈತವಾಸನೆಯುಳ್ಳವರು. ನಾವು ಅದ್ವೈತಿಗಳಾದ್ದರಿಂದ "ತತ್ತ್ವಮಸಿ" ಮಹಾವಾಕ್ಯ ವಿಚಾರದಿಂದಲೇ ಮೋಕ್ಷವು ಸಿದ್ಧಿಸುವುದೆಂದು ಪ್ರಬಲ ಶ್ರುತಿ ಪ್ರಮಾಣ ವಾಕ್ಯಗಳಿಂದ ತಿಳಿಯುತ್ತೇವೆ. ಅಲ್ಲದೆ ಆ ಮುಕ್ತಿಯು ಸ್ವಾನುಭವ ಸಂಸಿದ್ಧವಾದುದು. ಮೇಲ್ಕಂಡವರೆಲ್ಲರೂ, ದ್ವೈತವಾಸನೆಯುಳ್ಳವರಾದ್ದರಿಂದ ಆ ದ್ವೈತವಾಸನೆಯು(ಭೇದಮತಿಯು) ದುಃಖಕ್ಕೆ (ಜನನಮರಣಗಳಿಗೆ) ಹೇತುವಾದುದೆಂದು ನಾವು ಯಥಾರ್ಥವಾಗಿ ತಿಳಿದಿರುತ್ತೇವೆ. ಆದ್ದರಿಂದ ಸ್ವರೂಪಜ್ಞಾನವೊಂದೇ ಮೋಕ್ಷಕ್ಕೆ ಪರಮಸಾಧನವಾದುದು.

### ಭಾಮಿನಿ ಷಟ್ಪದಿ

ಕೆಲರು ಕರ್ಮದಿ ಕೆಲರು ಯೋಗದಿ ।
ಕೆಲರುತಪದಿಂ ಚಿತ್ತಶಮನದಿ ।
ಕೆಲರು ಕೆಲವರು ಭಕ್ತಿಯಿಂದಲಿ ಮುಕ್ತಿಯಹುದೆಂದು ॥
ತಿಳಿವರಿವರಲಿ ದ್ವೈತವಾಸನೆ ।
ಯುಳಿದಿರುವು ದದ್ವೈತಿಗಳುತಾಂ ।
ತಿಳುವಿನಿಂದಲೆ ಮುಕ್ತಿಪೇಳು ವರಿದು ಶ್ರುತಿಯುಮತವು ॥ ೩೩ ॥

ಅವತಾರಿಕೆ.— ಜ್ಞಾನವೊಂದೇ ಮುಕ್ತಿಗೆ ಸಾಧನವಾದುದೆಂದು ತಾವು ಹೇಳಿದಿರಿ. ಇದು ನಿಜವಾದ ಪಕ್ಷಕ್ಕೆ ಮೋಕ್ಷಾಪೇಕ್ಷಿಗಳಾದ ಜಗಜ್ಜನರೆಲ್ಲರೂ ಜ್ಞಾನವನ್ನೇ ಅವಲಂಬಿಸಿಕೊಳ್ಳಬೇಕಾಗಿತ್ತು. ಹಾಗೆ ಅವಲಂಬಿಸಿಕೊಳ್ಳದೆ ಕರ್ಮ, ಭಕ್ತಿ, ವೈರಾಗ್ಯಾದಿಗಳನ್ನು ಅವಲಂಬಿಸಿಕೊಳ್ಳಲು ಕಾರಣವೇನು ? ಎಂಬ ಪ್ರಶ್ನೆಗೆ ಜಗಜ್ಜನರು ಜ್ಞಾನವನ್ನು ಅವಲಂಬಿಸಿಕೊಳ್ಳದಿರುವುದಕ್ಕೆ ಅವರಲ್ಲಿ ಉತ್ತಮ ಮಧ್ಯಮ ಕನಿಷ್ಠಾಧಮರೆಂಬ ಅಧಿಕಾರಿತ್ವದಲ್ಲಿ ತಾರತಮ್ಯ ಉಂಟೆಂಬ ಉತ್ತರವನ್ನು ಮುಂದಿನ ಶ್ಲೋಕದಲ್ಲಿ ಹೇಳುತ್ತಾರೆ.

## ಗೀತಿ ವೃತ್ತ.

ಶ್ಲೋ॥ ನಕಿಮಪ್ಯಧಮಾದಧಮಃ ।
ಕದಾಪ್ಯಧಮಸ್ಸ್ಪೃಹ್ಯತಿಕರ್ಮ ಮಧ್ಯಮಃ ॥
ಸ್ವಕದೈವತ ಭಕ್ತಿಮುತ್ತಮೋ।
ಯಮಮುಖ್ಯಶ್ಚಿದ ಮುತ್ತಮೋತ್ತಮಃ ॥ ೩೪ ॥

ಪದಚ್ಛೇದ:— ನ, ಕಿಮಪಿ, ಅಧಮಾದಧಮಃ, ಕದಾಪಿ, ಅಧಮಃ, ಸ್ಪೃಹ್ಯತಿ, ಕರ್ಮ, ಮಧ್ಯಮಃ, ಸ್ವಕ, ದೈವತಭಕ್ತಿಂ, ಉತ್ತಮಃ, ಅಯಂ, ಅಮುಖ್ಯಃ ಚಿದಂ, ಉತ್ತಮೋತ್ತಮಃ.

ಟೀಕೆ:— ಅಧಮಾದಧಮಃ = ಕನಿಷ್ಠನಿಗಿಂತಲೂ ಕನಿಷ್ಠನು । ಕಿಮಪಿ = ಯಾವುದನ್ನೂ । ನಸ್ಪೃಹ್ಯತಿ = ಅಪೇಕ್ಷಿಸುವುದಿಲ್ಲ । ಅಧಮಃ = ಕನಿಷ್ಠನು । ಕದಾಪಿ = ಯಾವಾಗಲೋ । ಸ್ಪೃಹ್ಯತಿ = ಅಪೇಕ್ಷಿಸುತ್ತಾನೆ । ಉತ್ತಮಃ = ಉತ್ತಮನು । ಸ್ವಕ = ತನ್ನ ಇಷ್ಟವಾದ । ದೈವಭಕ್ತಿಂ = ದೇವತಾಭಕ್ತಿಯನ್ನು । ಸ್ಪೃಹ್ಯತಿ = ಅಪೇಕ್ಷಿಸುತ್ತಾನೆ । ಅಯಂ = ಇವನು । ಅಮುಖ್ಯಂ = ಪ್ರಾಮುಖ್ಯನಲ್ಲ । ಉತ್ತಮೋತ್ತಮಃ = ಉತ್ತಮೋತ್ತಮನು । ಚಿದಂ = ಜ್ಞಾನವನ್ನು । ಸ್ಪೃಹ್ಯತಿ = ಅಪೇಕ್ಷಿಸುತ್ತಾನೆ ।

ತಾತ್ಪರ್ಯ;— ಅಧಮರಲ್ಲಿ ಅಧಮನು ಕರ್ಮಭಕ್ತಿ ಜ್ಞಾನಗಳಲ್ಲಿ ಯಾವುದನ್ನೂ ಅವಲಂಬಿಸಿಕೊಳ್ಳುವುದಿಲ್ಲ. ಅಧಮನಾದವನು ಒಂದಾನೊಂದು ಸಮಯದಲ್ಲಿ ಅವಲಂಬಿಸಿಕೊಳ್ಳಲು ಅಪೇಕ್ಷಿಸುತ್ತಾನೆ. ಮಧ್ಯಮನು ಕರ್ಮವನ್ನು ಅವಲಂಬಿಸಿಕೊಳ್ಳುತ್ತಾನೆ. ಉತ್ತಮನು ದೈವಭಕ್ತಿ ತತ್ಪರನಾಗುತ್ತಾನೆ. ಉತ್ತಮೋತ್ತಮನು ಸಮ್ಯಜ್ಞಾನವನ್ನೇ ಅವಲಂಬಿಸಿಕೊಳ್ಳುತ್ತಾನೆ.

**ವಿಶೇಷಾರ್ಥ**; – ಪ್ರಪಂಚದಲ್ಲಿ ಒಬ್ಬರ ತಿಳುವಳಿಕೆ ಇದ್ದಂತೆ ಮತ್ತೊಬ್ಬರ ತಿಳುವಳಿಕೆ ಇರುವುದಿಲ್ಲ. ಆದರೆ ಒಟ್ಟಾರೆ ಜಗಜ್ಜನರ ನಡೆನುಡಿ ತಿಳುವಳಿಕೆಗಳ ಮೇಲಿಂದ ನಾಲ್ಕು ಭಾಗಮಾಡಲು ಬರುತ್ತದೆ. ಕೆಲವರು ವೇದೋಕ್ತ ಕರ್ಮ ಭಕ್ತಿ ಜ್ಞಾನಗಳೇನೆಂಬುದನ್ನು ಸಹ ಅರಿಯದೆ ಪಶುಪ್ರಾಯ ರಾಗಿ ಬರೀ ವ್ಯವಹಾರದಲ್ಲಿಯೇ ತಮ್ಮ ಜೀವಮಾನವನ್ನು ಕಳೆದು ಬಿಡುತ್ತಾರೆ. ಈ ವಿಧವಾದ ಜನರನ್ನು ಮೂರ್ಖರ ಗುಂಪಿಗೆ ಸೇರಿಸಬೇಕು ಇವರಿಗೆ ಅಧಮಾಧಮರೆಂಬ ಹೆಸರು ಕೆಲವರು ವೇದ ಪುರಾಣಶಾಸ್ತ್ರ ಅನ್ನುತ್ತಾರಲ್ಲ ಅವುಗಳಲ್ಲಿ ಏನು ಹೇಳಿರಬಹುದು ? ಕರ್ಮಭಕ್ತಿ ಜ್ಞಾನವೆಂದು ಮಹನೀಯರು ಹೇಳುತ್ತಾರಲ್ಲ. ಅವುಗಳ ಸ್ವರೂಪವೇನಿರಬಹುದು ? ಎಂದು ಯೋಚಿಸುತ್ತ ತನಗೆ ವ್ಯವಹಾರದಲ್ಲಿ ತೊಡಕು ತೊಂದರೆಗಳು ಬಂದಾಗಮಾತ್ರ ಅತ್ತ ಕಡೆ ಚಿತ್ತವನ್ನು ಹೊರಳಿಸುತ್ತಾರೆ. ಇಂಥವರನ್ನು ಸಂಸಾರಿಗಳ ಗುಂಪಿಗೆ ಸೇರಿಸಬೇಕು. ಇವರಿಗೆ ಅಧಮರೆಂಬ ಹೆಸರು. ಕೆಲವರು ವೇದೋಕ್ತವಾದ ಸತ್ಕರ್ಮಗಳಲ್ಲಿ ತತ್ಪರರಾಗಿ ಯಜ್ಞ, ಯಾಗ, ಜಪ ದಾನ-ಧರ್ಮ ಪರೋಪಕಾರಾದಿ ಸದ್ಗುಣಗಳಿಂದ ವ್ಯವಹರಿಸುತ್ತಾರೆ. ಇಂಥವರನ್ನು ಕರ್ಮಟರ ಗುಂಪಿಗೆ ಸೇರಿಸಬೇಕು. ಇವರಿಗೆ ಮಧ್ಯಮರೆಂಬ ಹೆಸರು. ಕೆಲವರು ಇಹಪರ ಸಂಬಂಧವಾದ ವಿಷಯಗಳಲ್ಲಿ ಮನಸ್ಸೀಯದೆ ದೈವಭಕ್ತಿ ತತ್ಪರರಾಗಿ ಮನಸ್ಸಿನ ಚಂಚಲತ್ವವನ್ನು ಅಡಗಿಸಿಕೊಂಡು ಏಕಾಯತ್ತಚಿತ್ತದಿಂದ ಭಗವಂತನನ್ನು ಧ್ಯಾನಿಸುತ್ತಾರೆ ಇವರನ್ನು ಉಪಾಸಕರ ಗುಂಪಿಗೆ ಸೇರಿಸಬೇಕು, ಇವರಿಗೆ ಉತ್ತಮರೆಂಬ ಹೆಸರು ಕೆಲವರು, ನಾನುಯಾರು ? ನಾನು ಎಲ್ಲಿಂದಿಲ್ಲಿಗೆ ಬಂದೆನು, ಮುಂದೆ ನನ್ನ ಗಮ್ಯ ಸ್ಥಾನವಾವುದು " ನಾಮ ರೂಪಾತ್ಮಕವಾಗಿ ತೋರುವ ಈ ಜಗತ್ತೆಂದರೇನು ? ಈ ಜಗತ್ಕರ್ತನಾರು ? ನನಗೆ ಜನನ ಮರಣಾತ್ಮಕ ದುಃಖವು ಬರಲು ಕಾರಣವೇನು ? ಈ ದುಃಖವನ್ನು ನಿವೃತ್ತಿ ಮಾಡಿಕೊಳ್ಳಲು ಉಪಾಯವೇನು ? ಇತ್ಯಾದಿ ವಿಚಾರದಲ್ಲಿ ತತ್ಪರರಾಗಿ ನಾನೆಂದರೆ ಪರಬ್ರಹ್ಮವು. ನಾನು ಎಲ್ಲಿಂದಲೂ ಬಂದಿರುವುದಿಲ್ಲ. ಮುಂದೆ ನನ್ನ ಗಮ್ಯ ಸ್ಥಾನವು ಯಾವುದೂ ಇಲ್ಲ." ನಾಮರೂಪಾತ್ಮಕವಾದ ಜಗತ್ತು ಮಿಥ್ಯಾಸ್ವರೂಪವುಳ್ಳದ್ದು. ಈ ಜಗತ್ತಿಗೆ ಕರ್ತನು ಅಭಿನ್ನ ನಿಮಿತ್ತೋಪಾದಾನ ಸ್ವರೂಪದಿಂದ ಪರಮಾತ್ಮನಿರುವನು. ನನಗೆ ಜನನಮರಣಾತ್ಮಕ ದುಃಖವು ನನ್ನ ಸ್ವರೂಪವನ್ನು ನಾನು ಮರೆತಿರುವುದರಿಂದ ಪ್ರಾಪ್ತವಾಗಿದೆ ಈ ದುಃಖವು ನನ್ನ ಸ್ವರೂಪವನ್ನು ನಾನು ಯಥಾರ್ಥವಾಗಿ ತಿಳಿದಾಗ ನಿವೃತ್ತಿಯಾಗುತ್ತದೆ ಎಂದು ತಿಳಿದು ವ್ಯವಹರಿಸುವ ಜನರೂ ಇರುತ್ತಾರೆ. ಇವರು ಜಗತ್ತಿನಲ್ಲಿ ಬಹಳ ಕಡಿಮೆ. ಇವರನ್ನು ಜ್ಞಾನಿಗಳ ಗುಂಪಿಗೆ ಸೇರಿಸಬೇಕು. ಇವರಿಗೆ ಉತ್ತಮೋತ್ತಮರೆಂಬ ಹೆಸರು.

ಅಂದರೆ ಅಧಮಾಧಮ, ಅಧಮ, ಉತ್ತಮ, ಉತ್ತಮೋತ್ತಮರೆಂಬ ನಾಲ್ಕು ಬಗೆಯ ಜನರು ಇರುವುದರಿಂದ ಎಲ್ಲರೂ ಸಮ್ಯಗ್ಜ್ಞಾನವನ್ನು ಅವಲಂಬಿಸಿಕೊಳ್ಳುವುದಿಲ್ಲ. ಶ್ರುತಿಗಳಲ್ಲಿಯು ಸಹ ಅಧಿಕಾರ ತಾರತಮ್ಯವನ್ನು ಬಣ್ಣಿಸಿದ್ದುಂಟು, ಎಂಬ ಭಾವವು.

### ವಾರ್ಧಿಕ ಷಟ್ಪದಿ.

ಶ್ರುತ್ಯುಕ್ತ ಕರ್ಮಭಕ್ತಿ ಜ್ಞಾನ ಮಿವುಗಳ।
ನ್ನತ್ಯಧಮ ನಾಪೇಕ್ಷಿಸುವುದಿಲ್ಲ ವಧಮನುರೆ।
ಚಿತ್ತದೊಳಗೊವ್ಮೊಕಾಂಕ್ಷಿಪ್ಪದುಂಟು ಮಧ್ಯಮನು ಕರ್ಮವನ್ನಾಪೇಕ್ಷಿಪಂ॥
ಉತ್ತಮನು ಭಕ್ತಿಯನ್ನಾಪೇಕ್ಷಿಸುವನುತ್ತ।
ಮೋತ್ತಮನು ಸುಜ್ಞಾನವನ್ನೊಂದೆ ಕಾಂಕ್ಷಿಪನು।
ಶ್ರುತ್ಯುಕ್ತ ವಿದ್ಯಕಧಿಕಾರಿಗಳ ಸೀರೀತಿ ಶ್ರುತಿಗಳೇ ಪೇಳುತಿಹವು ॥ ೩೪॥

ಅವತಾರಿಕೆ;— ಕರ್ಮ, ಭಕ್ತಿ, ಜ್ಞಾನಗಳಿಗೆ ಅಧಿಕಾರಿಗಳನ್ನು ಹೇಳಿದಿರಿ. ಇದರ ಮೇಲಿಂದ ಜ್ಞಾನಿಯೊಬ್ಬನೇ ಮುಕ್ತನಾಗಲು ಅರ್ಹನೆಂದು ಹೇಳಿದಂತಾಯಿತು. ಉಳಿದವರ ಗತಿಯೇನು? ಎಂಬ ಪ್ರಶ್ನೆಗೆ ಉಳಿದವರು. ಕಾಲನಬಲೆಯಲ್ಲಿ ಬಿದ್ದು ಆ ಕಾಲನಿಗೆ ತುತ್ತಾಗುವುದೇಗತಿ ಎಂಬುದನ್ನು ಮುಂದಿನ ಶ್ಲೋಕದಲ್ಲಿ ಉತ್ತರಿಸುತ್ತಾರೆ.

## ಆರ್ಯಾವೃತ್ತ

**ಶ್ಲೋ॥ ಯಮಶಬರೋಮೋಹವನೇ।**
**ಜೀವಮೃಗಾನ್ ಕರ್ಮವಾಗುರಾಲುಠಿತಾನ್॥**
**ಭಿತ್ವಾಭೇದ ಮನೀಷಾನ್।**
**ಭವದುಃಖಾಗ್ನೌಪಚನ್ ಭುಂಕ್ತೆ॥ ೩೫॥**

ಪದಚ್ಛೇದ:— ಯಮಶಬರಃ, ಮೋಹವನೇ. ಜೀವಮೃಗಾನ್, ಕರ್ಮವಾಗುರಾ, ಲುಠಿತಾನ್, ಭಿತ್ವಾ, ಭೇದಮನೀಷಾನ್, ಭವದುಃಖ, ಅಗ್ನೌ, ಪಚನ್, ಭುಂಕ್ತೆ.

ಟೀಕೆ,— ಯಮಶಬರಃ = ಕಾಲನೆಂಬ ಬೇಟೆಗಾರನು। ಮೋಹವನೇ = ಅಜ್ಞಾನವೆಂಬ ಅರಣ್ಯದಲ್ಲಿ। ಭೇದಮನೀಷಾನ್ = ಭೇದಮತಿಗಳುಳ್ಳ। ಕರ್ಮವಾಗುರಾ = ಕರ್ಮವೆಂಬ ಬಲೆಯಲ್ಲಿ। ಲುಠಿತಾನ್ = ಪದ್ದಾಡುವ। ಜೀವ

ಮೃಗಾನ್ । ಜೀವಿಗಳೆಂಬ ವನಮೃಗಗಳನ್ನು । ಭಿತ್ವಾ = ಕೊಂದುಹಾಕಿ । ಭವ ದುಃಖ = ಜನನ ಮರಣಾದಿ ದುಃಖವೆಂಬುವ । ಅಗ್ನೌ = ಬೆಂಕಿಯಲ್ಲಿ । ಪಚೇನ್ = ಪಕ್ವಮಾಡಿ । ಭುಙ್ಕ್ತೆ = ಭುಜಿಸುತ್ತಾನೆ ।

**ತಾತ್ಪರ್ಯ:—** ಯಮನೆಂಬ ಬೇಟೆಗಾರನು ಅಜ್ಞಾನವೆಂಬ ಅರಣ್ಯದಲ್ಲಿ ಭೇದಬುದ್ಧಿಗಳೆಂಬ ಕಂಡಿಗಳುಳ್ಳ ಕರ್ಮವೆಂಬ ಬಲೆಯನ್ನೊಡ್ಡಿರಲು ಅದರಲ್ಲಿ ಜೀವಿಗಳೆಂಬ ಮೃಗಗಳು ಬಿದ್ದು ಹೊರಳುತ್ತಿರಲು ಅವುಗಳನ್ನು ಛೇದಿಸಿ ಜನನ ಮರಣ ದುಃಖವೆಂಬ ಅಗ್ನಿಯಲ್ಲಿ ಪಕ್ವಮಾಡಿ ಉಣ್ಣುತ್ತಾನೆ.

**ವಿಶೇಷಾರ್ಥ:—** ತಾತ್ಪರ್ಯಾರ್ಥವೇ ಸ್ಪಷ್ಟವಾಗಿರುವುದರಿಂದ ವಿಶೇಷಾರ್ಥವನ್ನು ಬರೆದಿರುವುದಿಲ್ಲ.

## ವಾರ್ಧಿಕ ಷಟ್ಪದಿ

ಕಾಲನೆಂಬುವ ಶಬರನಜ್ಞಾನವೆಂತೆಂಬ ।
ಕಾಳವನದಲಿ ಕರ್ಮವೆಂಬ ಹೆಬ್ಬಲೆಯನ್ನು ।
ಕೀಲಿಸಿರಲದರಲ್ಲಿ ನರದೇಹವಂ ಪೊತ್ತಜೀವ ಮೃಗಗಳು ಬೀಳುತ ॥
ಗೋಳಾಡು ತುರುಳುತಿರಲಾ ಶಬರನವುಗಳಂ ।
ಶೀಳುತಂ ಜನನ ಮೇಣ್ ಮರಣಾದಿ ಬಹುದುಃಖ ।
ಜ್ವಾಲೆಯಲಿ ಪಕ್ವವಂ ಮಾಡುತ್ತಲೂಟವಂ ಮಾಡುತಿಹ ನೆಡೆಬಿಡದಲೆ ॥೬೫॥

**ಅವತಾರಿಕೆ:—** ಅಜ್ಞಾನಾರಣ್ಯದಲ್ಲಿ ಕರ್ಮವೆಂಬ ಬಲೆಯಲ್ಲಿ ಬಿದ್ದು ಮಾನವ ಮೃಗಗಳು ಯಮನಿಗೆ ತುತ್ತಾಗುತ್ತಾರೆಂದು ಹೇಳಿದಿರಿ. ಅಂದರೆ ಜನನ ಮರಣಾತ್ಮಕ ದುಃಖದಲ್ಲಿ ಬಳಲುತ್ತಾರೆಂದು ಹೇಳಿದಿರಿ. ಈ ಬಳಲಿಕೆಯು ಜೀವಿಗಳಿಗೆ ಎಂದಿಗೆ ತಪ್ಪುತ್ತದೆ ? ಅಂದರೆ ಕರ್ಮಗಳನ್ನು ಮಾಡಬೇಕೆಂಬ ಬುದ್ಧಿಯು ಎಂದಿಗೆ ನಿವೃತ್ತಿಯಾಗುತ್ತದೆ ? ಎಂಬ ಪ್ರಶ್ನೆಗೆ ಜೀವನಿಗೆ ಕರ್ತವ್ಯಮತಿಯು ಯದುವರಿಗೆ ಇರುತ್ತದೆಯೋ ಅದುವರೆಗೆ ಕರ್ಮವನ್ನು ಮಾಡಬೇಕೆಂಬ ಬುದ್ಧಿಯು ಇರುತ್ತದೆ. ಎಂಬುದನ್ನು ಮುಂದಿನ ಶ್ಲೋಕದಲ್ಲಿ ಉತ್ತರಿಸುತ್ತಾರೆ.

## * ವಿದ್ಯುನ್ಮಾಲಾವೃತ್ತ

* ಪ್ರತಿಯೊಂದು ಚರಣದಲ್ಲಿ ಎರಡು ಮಗಣಗಳು ಎರಡು ಗುರುಗಳಿದ್ದು ನಾಲ್ಕನೇ ಅಕ್ಷರಕ್ಕೆ ಯತಿಯಿದ್ದುದಾದರೆ ವಿದ್ಯುನ್ಮಾಲಾವೃತ್ತ ವಾಗುವುದು.

ಶ್ಲೋ || ಮೇಯೇಸ್ವಸ್ಮಿನ್ ಮಾತೃಭ್ರಾಂತ್ಯಾ |
ಮಾನಂಭ್ರಾಜೇ ದ್ಯಾವಚ್ಚಿತ್ತೇ ||
ಕ್ರೀಯೈಸ್ವಸ್ಮಿನ್ ಕರ್ತೃಭ್ರಾಂತ್ಯಾ |
ಕರ್ಮ ಭ್ರಾಜೇತ್ತಾವದ್ದೇಹೇ || ೩೬ ||

ಪದಚ್ಛೇದ;— ಮೇಯೇ, ಸ್ವಸ್ಮಿನ್, ಮಾತೃಭ್ರಾಂತ್ಯಾ, ಮಾನಂ, ಭ್ರಾಜೇತ್, ಯಾವತ್, ಚಿತ್ತೇ, ಕ್ರೀಯೈ, ಸ್ವಸ್ಮಿನ್, ಕರ್ತೃಭ್ರಾಂತ್ಯಾ, ಕರ್ಮ, ಭ್ರಾಜೇತ್, ತಾವತ್, ದೇಹೇ.

ಟೀಕೆ;— ಯಾವತ್ = ಎಲ್ಲಿಯವರೆವಿಗೂ | ಮೇಯೇ = ವಿಷಯ ರೂಪವಾದ | ಸ್ವಸ್ಮಿನ್ = ತನ್ನ | ಚಿತ್ತೇ = ಮನಸ್ಸಿನಲ್ಲಿ | ಮಾತೃಭ್ರಾಂತ್ಯಾ= ಪ್ರಮಾತೃವೆಂಬ ಭ್ರಾಂತಿಯಿಂದ | ಮಾನಂ = ಜ್ಞಾನವು | ಭ್ರಾಜೇತ್ = ಬೆಳಗುತ್ತದೆಯೋ | ತಾವತ್ = ಅಲ್ಲೀವರೆವಿಗೆ | ಕ್ರೀಯೈ = ಕರ್ಮದಿಂದುಂಟಾದ | ಸ್ವಸ್ಮಿನ್ = ತನ್ನ | ದೇಹೇ = ತನುವಿನಲ್ಲಿ | ಕರ್ತೃಭ್ರಾಂತ್ಯಾ = ಕರ್ತೃತ್ವದ ಭ್ರಾಂತಿಯಿಂದ | ಕರ್ಮ = ಕರ್ಮವು | ಭ್ರಾಜೇತ್ = ಬೆಳಗುತ್ತದೆ |

ತಾತ್ಪರ್ಯ;— ಎಲ್ಲೀಯವರೆವಿಗೂ ವಿಷಯಾಕಾರವಾದ ಚಿತ್ತದಲ್ಲಿಪ್ರಮಾತೃವೆಂಬ ಭ್ರಾಂತಿಯಿಂದ ಪ್ರಮೇಯವು ಭಾಸಿಸುವುದೋ ಅದುವರೆವಿಗೂ ಕರ್ಮಜನ್ಯವಾದ ಶರೀರದಲ್ಲಿ ಕರ್ತೃತ್ವ ಭ್ರಮೆಯಿಂದ ಕರ್ಮವು ಭಾಸಿಸುತ್ತದೆ.

ವಿಶೇಷಾರ್ಥ;— ಶಬ್ದ ಸ್ಪರ್ಶರೂಪ ರಸಗಂಧಗಳೆಂಬ ವಿಷಯಾಕಾರವಾದ ಅಂತಃಕರಣದಲ್ಲಿ. ನಾನು ಪ್ರಮಾತೃವಿದ್ದೇನೆಂಬ ಭ್ರಾಂತಿಯು ಉಂಟಾಗುತ್ತದೆ. ಈ ಭ್ರಾಂತಿಯು ಎಲ್ಲೀವರೆಗೆ ಇರುತ್ತದೆಯೋ ಅಲ್ಲೀವರೆಗೆ ಇಹಪರ ಸಂಬಂಧವಾದ ಪ್ರಮೇಯುಗಳು ( ವಿಷಯಗಳು ) ಭಾಸಿಸುತ್ತವೆ. ಈ ಪ್ರಮೇಯಗಳು ಎದು ಪರ್ಯಂತರ ತೋರುತ್ತವೆಯೋ ಅದು ಪರ್ಯಂತರ ಶುಭಾಶುಭ ಮಿಶ್ರರೂಪ ಕರ್ಮದಿಂದುಂಟಾದ ತನುವಿನಲ್ಲಿ ನಾನು ಮಾಡುತ್ತೇನೆಂಬ ಕರ್ತೃತ್ವ ಭ್ರಾಂತಿಯು ಉಂಟಾಗುತ್ತದೆ, ಈ ಕರ್ತೃತ್ವ ಭ್ರಾಂತಿಯು ಎದುವರೆಗೆ ಇರುತ್ತದೆಯೋ ಅದುವರೆಗೆ ಶುಭಾಶುಭ ಮಿಶ್ರರೂಪವಾದ ಕರ್ಮಗಳು ಜರುಗುತ್ತಲೇ ಇರುತ್ತವೆ. ಕರ್ಮಗಳು ಜರುಗುವುದರಿಂದ ಕರ್ಮಕ್ಕನುಸಾರವಾಗಿ ಶರೀರಗಳು ತಪ್ಪದೆ ಬರುತ್ತವೆ. ಅಂದರೆ ಶರೀರಗಳು ಬರುವುದಕ್ಕೆ ಕರ್ಮವು ಕಾರಣವಾಗಿದ್ದರೂ ಆ ಕರ್ಮಕ್ಕೆ ಕರ್ತೃತ್ವ ಭ್ರಾಂತಿಯೇ ಕಾರಣವಾಗಿದೆ. ಕರ್ತೃತ್ವ ಭ್ರಾಂತಿಯುಂಟಾಗುವುದಕ್ಕೆ ಪ್ರಮಾತೃ ಭ್ರಮೆಯೇ ( ಜೀವತ್ವಬುದ್ಧಿಯೇ ) ಬೀಜವಾಗಿರುತ್ತದೆ. ಪ್ರಮಾತೃ

ಭ್ರಮೆ ಇರುವ ಪರ್ಯಂತರ ಜೀವನು ಕರ್ಮಗಳನ್ನು ಮಾಡುತ್ತಲೇ ಇರುತ್ತಾನೆ. ಎಂಬ ಭಾವವು.

### ವಾರ್ಧಿಕ ಷಟ್ಪದಿ

ಎಲ್ಲಿವರೆವಿಗು ವಿಷಯರೂಪವಾಗಿಹ ಚಿತ್ತ ।
ದಲ್ಲಿ ಮಾತೃತ್ವ ಭ್ರಮೆಯುಂಟಾಗುತಿರುವುದೋ ।
ಅಲ್ಲಿವರೆವಿಗು ಶುಭಾಶುಭ ಕರ್ಮದಿಂ ಜನ್ಯವಾಗಿರುವ ದೇಹದಲ್ಲಿ ॥
ನಿಲ್ಲದಲೆ ಕರ್ತೃತ್ವಭ್ರಾಂತಿಯದು ತಾನುನೆಲೆ ।
ಗೊಳ್ಳುತಂ ಬಳಿಕದರ ಬಲವಿಡಿಯುತಂ ಬಿಡದೆ ।
ಎಲ್ಲ ಕರ್ಮಗಳುತಾಂ ನಡೆಯುತಿಹ ವಿವರೆಲ್ಲಮಾತೃತ್ವಭ್ರಮೆಯೆಬೀಜ॥೩೬॥

ಅವತಾರಿಕೆ:— ಜೀವಿಗಳು ಜೀವತ್ವಬುದ್ಧಿಯಿಂದ ಕರ್ತೃತ್ವ ಭ್ರಮೆಯುಂಟಾಗಿ ಕರ್ಮಗಳನ್ನಾಚರಿಸಿ ಜನನ ಮರಣಾದಿ ದುಃಖಗಳಿಗೆ ಭಾಗಿಯಾಗುವರೆಂದು ಹೇಳಿದಿರಿ. ಆದರೆ ಕರ್ತೃತ್ವದೊಡನೆ ಕೂಡಿದ ಜೀವತ್ವ ಭ್ರಮೆಯು ನಿವೃತ್ತಿಯಾಗುವುದು. ಹೇಗೆ? ಅಂದರೆ ಜೀವ ಭಾವನೆಯು ಯಾವುದರಿಂದ ನಿವೃತ್ತಿಯಾಗುತ್ತದೆ? ಜೀವತ್ವ ಭ್ರಮೆಯನ್ನು ಕಳೆದುಕೊಳ್ಳುವುದಕ್ಕೆ ವೇದೋಕ್ತ ವಿಹಿತ ಕರ್ಮಗಳು ಸಾಧನವೋ? ಅಥವ ಸ್ವರೂಪಜ್ಞಾನವು ಸಾಧನವೋ? ಎಂಬ ಪ್ರಶ್ನೆಗೆ ಜೀವತ್ವ ಭ್ರಮೆಯು ತನ್ನ ಸ್ವರೂಪ ಮರವೆಯಿಂದ ಉಂಟಾದ ಕಾರಣ, ಆ ಭ್ರಮೆಯನ್ನು ಕಳೆದುಕೊಳ್ಳುವುದಕ್ಕೆ ಸ್ವರೂಪಜ್ಞಾನವೇ ಸಾಧನವಲ್ಲದೆ ಕರ್ಮವು ಸಾಧನವಾಗಲಾರದೆಂಬ ಉತ್ತರವನ್ನು ಮುಂದಿನ ಶ್ಲೋಕದಲ್ಲಿ ಸೂಚಿಸುತ್ತಾರೆ

## * ಮಂದಾಕ್ರಾಂತಾ ವೃತ್ತಂ

ಶ್ಲೋ ॥ ವಿದ್ಯಾಮೋಹೌ ಸತತಮಹಿತೌ ಕರ್ಮಮೋಹೌ ಸಹಾಯೌ ।
ವಿದ್ಯಾಮೋಹಂ ಕ್ಷಪಯತಿ ತತಃ ಕರ್ಮ ಪುಷ್ಣಾತಿ ಸಮ್ಯಕ್ ॥
ಅನ್ಯಾಂಭರ್ತ ಯರ್ಜಯತಿ ಬಹುಧ್ವಾಂತ ಹಾನಂಮಯೂಖೈ ।
ದೃಷ್ಟಂದೃಗ್ಭ್ಯಂಜಲಮುಚಿ ವೃತೇಕೇನವಾಪುಣ್ಯಪುಂಸಾ ॥೩೭॥

---

* ಪ್ರತಿಯೊಂದು ಚರಣಗಳಲ್ಲಿ ಮ, ಭ, ನ, ತ, ತ, ಗಂ, ಗಂ, ಗಣಗಳಿದ್ದು ಏಳನೇ ಅಕ್ಷರದಲ್ಲಿ ಯತಿಯಿದ್ದರೆ ಮಂದಾಕ್ರಾಂತಾ ವೃತ್ತವಾಗುತ್ತದೆ

ಪದಚ್ಛೇದ:— ವಿದ್ಯಾಮೋಹೌ, ಸತತಂ, ಅಹಿತೌ, ಕರ್ಮಮೋಹೌ, ಸಖಾಯೌ, ವಿದ್ಯಾ, ಮೋಹಂ, ಕ್ಷಪಯತಿ, ತತಃ, ಕರ್ಮ, ಪುಷ್ಣಾತಿ, ಸಮ್ಯಕ್ ಅಸ್ಥಾಂ, ಭರ್ತರಿ, ಉದಯತಿ, ಬಹು, ಧ್ವಾಂತ, ಹಾನಂ, ಮಯೂಖೈಃ, ದ್ರಷ್ಟಂ, ದೃಗ್ಭ್ಯಾಂ, ಜಲಮುಚಿ, ವೃತೇ, ಕೇನವಾ, ಪುಣ್ಯಪುಂಸಾ.

ಟೀಕೆ — ಸತತಂ = ಯಾವಾಗ್ಲೂ । ವಿದ್ಯಾಮೋಹೌ = ಅರಿವು ಮರೆವೆಗಳೆರಡು । ಅಹಿತೌ = ಶತೃಗಳು । ಕರ್ಮಮೋಹೌ = ಕರ್ಮಮರೆವೆ ಗಳೆರಡು । ಸಖಾಯೌ = ಸ್ನೇಹವುಳ್ಳವುಗಳು । ತತಃ = ಆಕಾರಣದಿಂದ । ವಿದ್ಯಾ = ಅರಿವು (ಜ್ಞಾನವು । ಮೋಹಂ = ಮರೆವೆಯನ್ನು । ಕ್ಷಪಯತಿ = ನಾಶಮಾಡುತ್ತದೆ । ಕರ್ಮ = ಕರ್ಮವು । ಸಮ್ಯಕ್ = ಚೆನ್ನಾಗಿ । ಪುಷ್ಣಾತಿ = ರಕ್ಷಿಸುತ್ತದೆ । ಅಸ್ಥಾಂಭರ್ತರಿ = ಸೂರ್ಯನು । ಉದಯತಿ = ಹುಟ್ಟಿಬರುತ್ತಿರಲಾಗಿ। ಮಯೂಖೈಃ = ಪ್ರಕರಕಿರಣಗಳಿಂದ । ಬಹು= ಹೆಚ್ಚಾಗಿರುವ । ಧ್ವಾಂತ = ಅಂಧಕಾರವು । ಹಾನಂ = ನಾಶವನ್ನು । ಜಲಮುಚಿ = ಮೋಡವು । ವೃತೇ = ಮುಚ್ಚುತ್ತಿರಲಾಗಿ । ಕೇನವಾ = ಯಂಥಾ । ಪುಣ್ಯಪುಂಸಾ । = ಪುಣ್ಯಪುರುಷನಿಂದ । ದೃಗ್ಭ್ಯಾಂ = ಕಣ್ಣುಗಳಿಂದ । ದ್ರಷ್ಟಂ = ನೋಡಲ್ಪಟ್ಟೀತು ?

ತಾತ್ಪರ್ಯ:— ಜ್ಞಾನಾಜ್ಞಾನಗಳೆರಡು ಯಾವಾಗಲೂ ಶತೃಪ್ರಾಯವಾಗಿರುತ್ತವೆ. ಕರ್ಮಜ್ಞಾನಗಳೆರಡು ಯಾವಾಗಲೂ ಮಿತ್ರಪ್ರಾಯವಾಗಿರುತ್ತವೆ ಆದ್ದರಿಂದ ಜ್ಞಾನವು ಅಜ್ಞಾನವನ್ನು ನಾಶಮಾಡುತ್ತದೆ. ಕರ್ಮವು ಅಜ್ಞಾನವನ್ನು ಸಂರಕ್ಷಿಸುತ್ತದೆ. ಸೂರ್ಯನು ಉದಯಿಸುವಾಗ ತನ್ನ ಕಿರಣಗಳಿಂದ ಕತ್ತಲೆಯನ್ನು ನಾಶಮಾಡುತ್ತಾನೆ. ದಟ್ಟವಾದ ಮೇಘವು ಹುಟ್ಟಿ ಬಂದಾಗ ಆ ಕತ್ತಲೆಯು ನಾಶವಾಗುವುದಿಲ್ಲಿ. ಮೇಘವು ತುಂಬಿಕೊಂಡಿರುವಾಗ ಸೂರ್ಯನನ್ನು ನೋಡಲು ಯಂಥಾ ಪುಣ್ಯಪುರುಷನಿಂದಲಾದರೂ ಆದಿತೇ ? ಆಗಲಾರದು.

ವಿಶೇಷಾರ್ಥ:— ಕರ್ತೃತ್ವ ಬುದ್ಧಿಯಿಂದೊಡಗೂಡಿದ ಜೀವತ್ವ ಭ್ರಾಂತಿಯು ನಿವೃತ್ತಿಯಾಗುವುದಕ್ಕೆ ಕರ್ಮವು ಸಾಧನವಾಗುವುದಿಲ್ಲ. ಸ್ವರೂಪಜ್ಞಾನವೇ ಸಾಧನವು. ಜೀವತ್ವ ಭ್ರಾಂತಿಯು ಸ್ವರೂಪದ ಅಜ್ಞಾನದಿಂದ ಉಂಟಾಗಿರುತ್ತದೆ. ಆ ಅಜ್ಞಾನವು ನಿವೃತ್ತಿಯಾಗಬೇಕಾದರೆ ಜ್ಞಾನವೇ ಪರಮ ಸಾಧನವು. ಕರ್ಮವು ಸಾಧನವಲ್ಲ. ಜ್ಞಾನಾಜ್ಞಾನಗಳೆರಡು ಪರಸ್ಪರ ಶತೃಪ್ರಾಯವಾಗಿರುತ್ತವೆ. ಕರ್ಮ ಅಜ್ಞಾನಗಳೆರಡು ಪರಸ್ಪರ ಮಿತ್ರಪ್ರಾಯವಾಗಿರುತ್ತವೆ. ಅಂದರೆ ಅಜ್ಞಾನವನ್ನು ಕರ್ಮವು ರಕ್ಷಣ ಮಾಡುತ್ತದೆ. ಕರ್ಮಜ್ಞಾ ಅಜ್ಞಾನಕ್ಕೂ ಗೆಳೆತನವಿದ್ದಂತೆ

ಜ್ಞಾನಾಜ್ಞಾನಗಳಿಗೆ ಗೆಳೆತನವಿರುವುದಿಲ್ಲ. ಆದ್ದರಿಂದ ವೇದೋಕ್ತವಿಹಿತ ಕರ್ಮಗಳು ಅಜ್ಞಾನವನ್ನು ಕಳೆಯಲಾರವು. ಕತ್ತಲೆಯನ್ನು ನಿವೃತ್ತಿ ಮಾಡುವ ಶಕ್ತಿಯು ಸೂರ್ಯನಲ್ಲಿ ಇರುವುದಾಗಲಿ ಮೇಘದಲ್ಲಿ ಇರುವುದಿಲ್ಲ. ಮೇಘವು ಆ ಕತ್ತಲೆಯನ್ನು ಚೆನ್ನಾಗಿ ಪೋಷಣ ಮಾಡುವುದಾಗಲಿ ನಾಶಮಾಡುವುದಿಲ್ಲ ಇಲ್ಲಿ ಗ್ರಂಥ ಕರ್ತರು ಜ್ಞಾನಕ್ಕೆ ಸೂರ್ಯನ ಉದಾಹರಣೆಯನ್ನು ಕೊಟ್ಟಿರುತ್ತಾರೆ. ಕರ್ಮಕ್ಕೆ ಮೇಘದ ಉದಾಹರಣೆಯನ್ನಿತ್ತಿರುತ್ತಾರೆ. ಅಜ್ಞಾನಕ್ಕೆ ಕತ್ತಲೆಯ ಉದಾಹರಣೆಯನ್ನು ಕೊಟ್ಟಿರುತ್ತಾರೆ. ಈ ಉದಾಹರಣೆಗಳಿಂದ ಅಜ್ಞಾನ ನಿವೃತ್ತಿಗೆ ಜ್ಞಾನವೇ ಸಾಧನವೆಂತಲೂ, ಕರ್ಮವು ಸಾಧನವಾಗಲಾರದೆಂತಲೂ, ಸಹಜವಾಗಿಯು ಸುಲಭವಾಗಿಯೂ ತಿಳಿದುಕೊಳ್ಳಬಹುದು ಕತ್ತಲೆಗೆ ವಿರೋಧವು ಸೂರ್ಯನಾಗುವನಾಗಲಿ ಮೇಘವಾಗುವುದಿಲ್ಲ ಹೇಗೋ ಹಾಗೆ ಅಜ್ಞಾನಕ್ಕೆ ವಿರೋಧವು ಜ್ಞಾನವಾಗುವುದಾಗಲಿ ಕರ್ಮವಾಗುವುದಿಲ್ಲ. ಆದ್ದರಿಂದ ಜೀವತ್ವ ಭ್ರಮೆಯನ್ನು ನಾಶಮಾಡಿ ನಿತ್ಯ ಸುಖವನ್ನುಂಟು ಮಾಡುವ ಸಾಧನವೆಂದರೆ ಜ್ಞಾನವೊಂದೇ ಆಗಿರುತ್ತದೆ. ಅಂತಹ ಜ್ಞಾನವನ್ನು ಸಂಪಾದಿಸುವಾತನೇ ಪುಣ್ಯಪುರುಷನು, ಎಂಬ ಭಾವವು.

ವಾರ್ಧಿಕ ಷಟ್ಪದಿ

ಅರಿವು ಮರೆವೆಗೆ ವೈರಿಯಾಗಿಹುದು ಕರ್ಮವದು ।
ಮರೆವೆಯಂ ಪೋಷಿಸುತ ಸ್ನೇಹದಿಂದಿರುತಿಹುದು ।
ಮರೆವೆ ಕಳೆಯಲ್ಕರಿವು ಕಾರಣಮುದಲ್ಲದಲೆ ಕರ್ಮಕಾರಣ ಮಪ್ಪುದೆ ? ॥
ಖರಕರನ ಕಿರಣಗಳು ಕತ್ತಲೆಯು ಕಳೆಯುವುದು ।
ಅರಿಯೆ ಕತ್ತಲೆಯನ್ನು ಮೇಘತಾಂಕಳೆಯುವುದೆ ? ।
ಪರಿಕಿಸಲ್ಕರಿವನ್ನಪೇಕ್ಷಿಸುವ ಪುರುಷನಂ ಪುಣ್ಯಾತ್ಮನೆನ್ನಬೇಕು ॥ ೩೭ ॥

ಅವತಾರಿಕೆ:— ಸ್ವರೂಪಜ್ಞಾನವು ಅಜ್ಞಾನಕ್ಕೆ ವೈರಿಯೆಂತಲೂ, ಮುಕ್ತಿ ಸಾಧನವಾದುದ್ದೆಂತಲೂ, ಹೇಳಿದಂತಾಯಿತು. ಅಂತಹ ಜ್ಞಾನವನ್ನು ಅವಲಂಬಿಸಿಕೊಳ್ಳದೆ ಕೆಲವರು ಮುಕ್ತಿಪ್ರಾಪ್ತಿಗೆ ಕರ್ಮವೇ ಸಾಧನವೆಂದು ಹೇಳುತ್ತಾರೆ. ಇವರ ಹೇಳಿಕೆಗೆ ವೇದಾದಿಭಾಗವಾದ ಕರ್ಮಕಾಂಡವು ಪ್ರಮಾಣವಾಗಿದೆ, ಅಂದರೆ ವೇದವೇ ಪ್ರಮಾಣವಾಗುಳ್ಳ ಮತ್ತು ಆ ವೇದೋಕ್ತವಾದ ಕರ್ಮಗಳನ್ನಾಚರಿಸಿದವರಿಗೆ ಅದೇಕೆ ಮುಕ್ತಿ ಸಿದ್ಧಿಸುವುದಿಲ್ಲ ? ಎಂಬ ಪ್ರಶ್ನೆಗೆ ಕರ್ಮದಿಂದಾಗಲಿ. ಉಪಾಸನೆಯಿಂದಾಗಲಿ, ಮುಕ್ತಿಯು ಸಿದ್ಧಿಸುವುದಿಲ್ಲೆಂಬ ಉತ್ತರವನ್ನು ಮುಂದಿನ ಶ್ಲೋಕದಲ್ಲಿ ಸ್ಪಷ್ಟಪಡಿಸುತ್ತಾರೆ.

## *ಉಪೇಂದ್ರ ವಜ್ರಾ ವೃತ್ತ.

ಶ್ಲೋ ॥ ಸುಖೋಚ್ಚಯಂ ಸಂಸರಣಾದ್ಬುಭುಕ್ಷು ।
ಸ್ತೃಷಾತಿರೇಕಾದ್ ಹೃದಯಂಜಿಗೀಷುಃ ॥
ಸುಕರ್ಮಣೋ ಮುಕ್ತಿಪ್ರದಂಪ್ರಿಪಿತ್ಸು ।
ರವಾಗ್ಗತೇ ರ್ಮೇರುನಗಂದಿದೃಕ್ಷುಃ ॥ ೩೮ ॥

**ಪದಚ್ಛೇದ :—** ಸುಖೋಚ್ಚಯಂ, ಸಂಸರಣಾತ್, ಬುಭುಕ್ಷುಃ, ತರ್ಷ, ಅತಿರೇಕಾತ್. ಹೃದಯಂ, ಜಿಗೀಷುಃ, ಸುಕರ್ಮಣಃ, ಮುಕ್ತಿಪದಂ, ಪ್ರಪಿಚ್ಛುಃ ಅವಾಗ್ಗತೇಃ, ರ್ಮೇರುನಗಂ, ದಿದ್ರಿಕ್ಷುಃ.

**ಟೀಕೆ:—** ಸಂಸರಣಾತ್ = ಸಂಸಾರದಿಂದ । ಸುಖೋಚ್ಚಯಂ = ಅಧಿಕವಾದ ಸುಖವನ್ನು ( ಮುಕ್ತಿಸುಖವನ್ನು ) । ಬುಭುಕ್ಷಃ = ಅನುಭವಿಸಲಪೇಕ್ಷಿಸುವವನು । ತರ್ಷ = ಆಸಕ್ತಿ । ಅತಿರೇಕಾತ್ = ಅತಿಶಯದಿಂದ । ಹೃದಯಂ = ಮನಸ್ಸನ್ನು । ಜಿಗೀಷುಃ = ಜಯಿಸಿಲಿಚ್ಛಿಸುವವನು । ಸುಕರ್ಮಣಃ = ವಿಹಿತಕರ್ಮದಿಂದ । ಮುಕ್ತಿಪದಂ = ಮೋಕ್ಷಸುಖವನ್ನು । ಪ್ರಪಿಚ್ಛುಃ = ಹೊಂದಲಪೇಕ್ಷಿಸುವವನು । ಅವಾಗ್ಗತೇಃ = ದಕ್ಷಣಕ್ಕೆ ನಡೆಯುವುದರಿಂದ । ಮೇರುನಗಂ = ಮೇರುಗಿರಿಯನ್ನು । ದಿದ್ರಿಕ್ಷುಃ = ನೋಡಲಿಚ್ಛಿಸುವವನಂತೆ ಆಗುವನು.

**ತಾತ್ಪರ್ಯ:—** ಸಂಸಾರದಿಂದಲೂ, ಮನಸ್ಸನ್ನು ಗೆಲ್ಲುವುದರಿಂದಲೂ, ವಿಹಿತ ಕರ್ಮಗಳನ್ನಾಚರಿಸುವುದರಿಂದಲೂ, ಮುಕ್ತಿ ಹೊಂದುತ್ತೇನೆಂದು ತಿಳಿಯುವವನು ದಕ್ಷಣ ದಿಕ್ಕಿಗೆ ಹೋಗಿ ಮಹಾಮೇರು ಪರ್ವತವನ್ನು ಕಂಡವನಂತೆ ಆಗುವನು. ಅಂದರೆ ಆ ಪರ್ವತವನ್ನು ಕಾಣಲಾರನು.

**ವಿಶೇಷಾರ್ಥ:—** ಕೆಲವರು ಸಂಸಾರದಲ್ಲಿದ್ದುಕೊಂಡು ಕೊಡುಕೊಳ್ಳುವ ವ್ಯವಹಾರದಲ್ಲಿ ನೀತಿಯನ್ನು ನ್ಯಾಯವನ್ನು ಅತಿಕ್ರಮಿಸದೆ ನಡೆದರೆ ಸಾಕು. ಆದರಿಂದ ತನಗೆ ಮುಕ್ತಿಯು ಪ್ರಾಪ್ತಿಯಾಗುತ್ತದೆ. ಎಂದು ವ್ಯವಹರಿಸುವವರು ಇರುತ್ತಾರೆ. ಮತ್ತೆ ಕೆಲವರು ಶಬ್ದಾದಿ ವಿಷಯಗಳಲ್ಲಿ ಹರಿದಾಡುವ ಮನಸ್ಸನ್ನು ಮಾನಸೀಕ ಕರ್ಮವಾದ ಉಪಾಸನೆಯನ್ನು ಮಾಡಿ ಜಯಿಸಿದರೆ ಮೋಕ್ಷಸುಖವಾಗು

---

* ಪ್ರತಿಯೊಂದು ಚರಣದಲ್ಲಿ ಜಗಣ, ತಗಣ, ಜಗಣ, ಎರಡು ಗುರುಗಳಿದ್ದು ಏಳನೇ ಅಕ್ಷರಕ್ಕೆ ಯತಿಯು ಇದ್ದುದಾದರೆ ಉಪೇಂದ್ರ ವಜ್ರಾವೃತ್ತವಾಗುತ್ತದೆ.

ವುದೆಂದು ತಿಳಿದಿರುತ್ತಾರೆ. ಇನ್ನೂ ಕೆಲವರು ವೇದೋಕ್ತವಾದ ವಿಹಿತಕರ್ಮಗಳನ್ನು ಶ್ರದ್ಧೆಯಿಂದ ಮಾಡಿದರೆ ಮುಕ್ತಿ ಸುಖವು ದೊರೆಯುವುದೆಂದು ನಂಬಿರುತ್ತಾರೆ. ಇವರಿಗೆ ಮುಕ್ತಿಸುಖವು ಪ್ರಾಪ್ತಿಯಾಗುವುದಿಲ್ಲ. ಅಂದರೆ ವ್ಯವಹಾರದಲ್ಲಿ ಉತ್ತಮ ನೆನಿಸಿಕೊಂಡರೂ, ಮನಸ್ಸನ್ನು ಗೆದ್ದರೂ, ಸತ್ಕರ್ಮಗಳನ್ನಾಚರಿಸಿದರೂ, ನಿತ್ಯ ಸುಖಸ್ವರೂಪವಾದ ಮುಕ್ತಿ ಪದವು ಪ್ರಾಪ್ತಿಯಾಗುವುದಿಲ್ಲ. ಒಂದು ಪಕ್ಷ ಅವುಗಳಿಂದ ಮುಕ್ತಿಯು ಲಭಿಸುವುದೆಂದರೆ ದಕ್ಷಿಣ ದಿಕ್ಕಿಗೆ ಗಮನಮಾಡಿ ಉತ್ತರಕ್ಕಿರುವ ಮಹಾಮೇರು ಪರ್ವತವನ್ನು ಕಂಡಂತಾಗುತ್ತದೆ. ಅಂದರೆ ಆ ಮೇರುವು ದಕ್ಷಿಣಕ್ಕೆ ಗಮನಿಸಿದರೆ ಸಿಗುವುದಿಲ್ಲ, ಮೇರುವನ್ನು ನೋಡಲಪೇಕ್ಷಿಸುವವನು ಉತ್ತರಕ್ಕೆ ಗಮಿಸುವುದು ಹೇಗೆ ಯೋಗ್ಯವೋ ಹಾಗೆ ಮೋಕ್ಷಾಪೇಕ್ಷಿಯು ಸ್ವರೂಪ ಜ್ಞಾನವನ್ನೇ ಮಾಡಿಕೊಳ್ಳ ತಕ್ಕದ್ದು. "ಹುತ್ತ ಬಡಿದರೆ ಹಾವು ಸಾಯುವುದೆಂಬಂತೆ" ಕರ್ಮೋಪಾಸನೆಗಳಿಂದ ಅಜ್ಞಾನ ನಿವೃತ್ತಿಯಾಗುವುದಿಲ್ಲ ಅಜ್ಞಾನ ನಿವೃತ್ತಿಗೆ ಸ್ವರೂಪಜ್ಞಾನವೇ ಮುಖ್ಯ ಸಾಧನವು. ಕರ್ಮೋಪಾಸನೆಗಳಿಂದ ಚಿತ್ತ ನೈರ್ಮಲ್ಯವಾಗುವುದಾಗಲಿ, ಮುಕ್ತಿಪದವು ಪ್ರಾಪ್ತಿಯಾಗುವುದಿಲ್ಲ. ವೇದವೂ ಸಹ ಚಿತ್ತ ಶುದ್ಧಿಗೋಸ್ಕರವಾಗಿಯೇ ಕರ್ಮೋಪಾಸನೆಗಳನ್ನು ಹೇಳಿರುತ್ತದೆ. ಮುಕ್ತಿಗಾಗಿ ಅಲ್ಲ ಎಂಬ ಭಾವವು.

ಭಾಮಿನಿ ಷಟ್ಪದಿ

ಪದುಗತಿಯು ಸಂಸಾರದಲಿನನ ।
ಗೊದಗುತಿಹುದೆಂದಿಚ್ಛಿಸುವನುಂ ।
ಹೃದಯಗೆಲ್ಲುತ ಮುಕ್ತಿ ಪೊಂದುವೆನೆಂದು ಬಗೆವವನುಂ ॥
ವಿಧಿಗೆ ಮೊರದೆ ಕರ್ಮಗೈಯ್ದಾ ।
ಪದುಗತಿಯನಾಂ ಪಡೆವೆನೆಂಬನು ।
ಪದವಿಡುತ ದಕ್ಷಿಣಕೆ ಮೇರುವಕಂಡತೆರನಕ್ಕು ॥ ೩೮

ಅವತಾರಿಕೆ:— ದಕ್ಷಿಣ ದಿಕ್ಕಿಗೆ ಗಮನಮಾಡಿದವನಿಗೆ ಮೇರು ಪರ್ವತವು ಸಿಗದಂತೆ ವೇದೋಕ್ತಕರ್ಮೋಪಾಸನೆಗಳನ್ನು ಮಾಡಿದವನಿಗೆ ಚಿತ್ತಶುದ್ಧಿಯಲ್ಲದೆ ಮೋಕ್ಷವು ಲಭಿಸದೆಂದು ಹೇಳಿದಿರಿ ಮತ್ತು ಜ್ಞಾನವೇ ಮುಕ್ತಿ ಸಾಧನವೆಂತಲೂ ಹೇಳಿದಿರಿ. ಆದರೆ ಜ್ಞಾನವೇ ಮುಕ್ತಿಸಾಧನವೆಂಬುದನ್ನು ಎಲ್ಲರೂ ಏತಕ್ಕೆ ನಂಬುವುದಿಲ್ಲ. ಹಾಗೆ ನಂಬದಿರುವವನಿಗೆ ಏನೆನ್ನಬೇಕು? ಎಂಬ ಪ್ರಶ್ನೆಗೆ ಹಾಗೆ ನಂಬದವನಿಗೆ ವೇದ ಬಾಹಿರನೆನ್ನಬೇಕು. ಅರ್ಥಾತ್ ಶ್ರುತಿದೂಷಕ (ನಾಸ್ತಿಕ) ನೆನ್ನಬೇಕೆಂದು ಮುಂದಿನ ಶ್ಲೋಕದಲ್ಲಿ ಸೂಚಿಸುತ್ತಾರೆ.

## * ಶಾಲಿನೀವೃತ್ತ

ಶ್ಲೋ || ಲಬ್ಧಿರ್ಮುಕ್ತೇಃ ಕರ್ಮಣಾನಾಂಗಭಾಜಾಂ |
ಜ್ಞಾನಾ ದೇವೇತ್ಯುಕ್ತ ಮಾಮ್ನಾಯಗೀರ್ಭಿಃ ||
ಶ್ರುತ್ವಾತ್ಯಂತಂನಾದ್ಯತ ಶ್ಶ್ರದ್ದಧಾತಿ |
ಪ್ರಾಜ್ಞೈರ್ಯಸ್ಸ ಜ್ಞಾಯತೇದೈವದೂಷ್ಯಃ || ೩೯ ||

**ಪದಚ್ಛೇದ;—** ಲಬ್ಧಿಃ, ಮುಕ್ತೇಃ, ಕರ್ಮಣಾ, ಅಂಗಭಾಜಾಂ, ಜ್ಞಾನಾದೇವ, ಇತಿ, ಉಕ್ತಂ, ಆಮ್ನಾಯ, ಗೀರ್ಭಿಃ, ಶ್ರುತ್ವಾತ್, ಅಂತ್ಯಂ, ಆದ್ಯತಃ ನಶ್ರದ್ದಧಾತಿ, ಪಾಜ್ಞೈಃ, ಯಃ, ಸಃ, ಜ್ಞಾಯತೇ, ದೈವದೂಷ್ಯಃ,

ಟೀಕೆ:— ಮುಕ್ತೇಃ = ಮುಕ್ತಿಯ | ಲಬ್ಧಿ = ಪ್ರಾಪ್ತಿಯು | ಅಂಗಭಾಜಾಂ = ದೇಹಸಾಧಕವಾದ | ಕರ್ಮಣಾ = ಕರ್ಮದಿಂದ | ನ = ಇಲ್ಲವು| ಇತಿ = ಹೀಗೆಂದು | ಜ್ಞಾನಾದೇವ = ಜ್ಞಾನಾದೇವತು ಕೈವಲ್ಯಂ ಜ್ಞಾನದಿಂದಲೇ ಮೋಕ್ಷಪ್ರಾಪ್ತಿಯೆಂದು | ಆಮ್ನಾಯ = ಉಪನಿಷತ್ತುಗಳ | ಗೀರ್ಭಿಃ = ವಚನಗಳಿಂದ | ಉಕ್ತಂ = ಹೇಳಲ್ಪಟ್ಟದ್ದನ್ನು | ಆದ್ಯತಃ = ಮೊದಲಿನಿಂದ | ಅಂತ್ಯಂ = ಕೊನೆಯವರೆಗೆ | ಶ್ರುತ್ವಾತ್ = ಕೇಳಿಯೂ | ಯಃ = ಯಾವಾತನು | ನಶ್ರದ್ದಧಾತಿ = ಶ್ರದ್ಧೆಯಿಂದ ನಂಬುವುದಿಲ್ಲವೋ | ಸಃ = ಆತನು | ಪ್ರಾಜ್ಞೈಃ = ತಿಳಿದವರಿಂದ (ಜ್ಞಾನಿಗಳಿಂದ) | ದೈವದೂಷ್ಯಃ = ಶ್ರುತಿದೂಷಕನೆಂದು ( ನಾಸ್ತಿಕನೆಂದು ) ಜ್ಞಾಯತೇ = ತಿಳಿಯಲ್ಪಡುತ್ತದೆ.

ತಾತ್ಪರ್ಯ:— ಶರೀರ ಸಾಧಕವಾದ ಕರ್ಮದಿಂದ ಮೋಕ್ಷವು ಲಭಿಸುವುದಿಲ್ಲವೆಂತಲೂ, ಜ್ಞಾನದಿಂದಲೇ ಮೋಕ್ಷಪ್ರಾಪ್ತಿಯಾಗುವುದೆಂತಲೂ, ಶ್ರುತಿಗಳು ಪ್ರತಿಪಾದಿಸುತ್ತಿರಲು ಅವನ್ನು ಮೊದಲಿನಿಂದ ಕೊನೆಯವರೆವಿಗೂ ಕೇಳಿ ಯಾವಾತನು ವಿಶ್ವಾಸಿಸನೋ ಆತನು ಶ್ರುತಿದೂಷಕನೆಂದು ಪಂಡಿತರಿಂದ ತಿಳಿಯಲ್ಪಡುತ್ತಾನೆ.

ವಿಶೇಷಾರ್ಥ:— ಶರೀರವನ್ನು ಉಂಟುಮಾಡುವುದಕ್ಕೆ ಸಾಧನವಾದುದು ಕರ್ಮವಾಗಿರುತ್ತದೆ. ಅಂದರೆ ಕರ್ಮದಲ್ಲಿ ಶುಭಾಶುಭ ಮಿಶ್ರಗಳೆಂಬ ಮೂರು ವಿಧವಾಗಿದ್ದರೂ ಆ ಕರ್ಮಗಳೆಲ್ಲವೂ ಉತ್ತಮ, ಮಧ್ಯಮ, ಕನಿಷ್ಠಗಳೆಂಬ ಶರೀ

---

* ಹದಿನೆಂಟನೇ ಶ್ಲೋಕದ ಛಂದಸ್ಸನ್ನು ನೋಡಿ

ರಗಳನ್ನು ಉಂಟು ಮಾಡತಕ್ಕವುಗಳೇ ಆಗಿರುತ್ತವೆ. ಶ್ರುತಿಯಲ್ಲಿ ಸಹ "**ಕರ್ಮಜನ್ಯ ಶರೀರಂ**" ಎಂದು ಇರುತ್ತದೆ. ಈ ಶರೀರ ಸಾಧಕವಾದ ಕರ್ಮದಿಂದ ಮುಕ್ತಿಯು ಲಭಿಸುವುದಿಲ್ಲ. "**ನಕರ್ಮಣಾ**" ಈ ಶ್ರುತಿಯು ಕರ್ಮದಿಂದ ಮುಕ್ತಿಯು ಪ್ರಾಪ್ತಿಯಾಗುವುದಿಲ್ಲವೆಂದು ಹೇಳುತ್ತದೆ. "**ಜ್ಞಾನಾದೇವತು ಕೈವಲ್ಯಂ**" ಎಂಬ ಶ್ರುತಿಯು ಜ್ಞಾನವೊಂದೇ ಮುಕ್ತಿಗೆ ಪರಮಸಾಧನವೆಂದು ಬೋಧಿಸುತ್ತದೆ. ಅಂದರೆ ಶ್ರುತಿಗಳು ಕರ್ಮದಿಂದ ಮುಕ್ತಿ ಲಭಿಸುವುದಿಲ್ಲವೆಂತಲೂ, ಜ್ಞಾನದಿಂದ ಆ ಮುಕ್ತಿಯು ಲಭಿಸುವುದೆಂತಲೂ, ಹೇಳುತ್ತಿರಲು ಈ ವಚನಗಳನ್ನು ಮೊದಲಿನಿಂದ ಕೊನೆಯವರೆಗೆ ಕೇಳಿಯೂ ವಿಶ್ವಾಸವನ್ನಿಡದೆ ಅಂದರೆ ಅಪನಂಬಿಕೆ ಪಡುವ ಮನುಷ್ಯನು ಶ್ರುತಿದೂಷಕನೆಂತಲೂ ವೇದಬಾಹಿರನೆಂತಲೂ, ಜ್ಞಾನಿಗಳು ತಿಳಿಯುತ್ತಾರೆ. ಯಾವಾತನು ಶ್ರುತಿದೂಷಕನೋ ಆತನನ್ನು ನಾಸ್ತಿಕನೆಂತಲೂ, ದೈವದ್ರೋಹಿಯೆಂತಲೂ, ಕರೆಯಬೇಕು. ಎಂಬ ಭಾವವು.

## ವಾರ್ಧಿಕ ಷಟ್ಪದಿ

ಗಾತ್ರ ಸಾಧಕವಾದ ಕರ್ಮಂಗಳಿಂದನಿಜ ।
ಮುಕ್ತಿಸಿಗಲಾರದೆಂದಾ ವೇದವೇ ಪೇಳು ।
ವುಕ್ತಿ ಜ್ಞಾನಾ ದೇವತಿಂತಿರಲ್ಕದನು ಮೊದಲಿಂದ ತುದಿವರೆಗೆಕೇಳಿ ॥
ಚಿತ್ತದೊಳು ವಿಶ್ವಾಸ ವಿಡದಮಾನವನನ್ನು ।
ಶ್ರುತ್ಯುಕ್ತಿ ದೂಷಕನು ವೇದಬಾಹಿರನೆಂದು ।
ಉತ್ತಮರು ತಿಳಿಯುವರು ವೇದಬಾಹಿರನಾಗಲವನೆ ದೈವದ್ರೋಹಿಯು ।೩೯॥

**ಅವತಾರಿಕೆ :**— ಕರ್ಮಗಳು ಮುಕ್ತಿಸಾಧನವಲ್ಲ. ಜ್ಞಾನವೊಂದೇ ಮುಕ್ತಿಗೆ ಸಾಧನವು ಎಂಬ ಶ್ರುತಿವಚನಗಳನ್ನು ನಂಬದವನು ಶ್ರುತಿ ವಾಕ್ಯಗಳಲ್ಲಿ ವಿಶ್ವಾಸವು ಉಂಟಾಗದೆಂದಮೇಲೆ ಮತ್ತಾವವಾಕ್ಯಗಳಲ್ಲಿ ವಿಶ್ವಾಸವು ಉಂಟಾಗುತ್ತದೆ ? ಅಂದರೆ ಆತ್ಮೋಪದೇಶ ರೂಪ ಮಹಾವಾಕ್ಯಗಳಲ್ಲಿ ನಂಬಿಕೆಯು ಜನರಿಗೆ ಉಂಟಾಗುವುದಿಲ್ಲವೆಂದ ಬಳಿಕ ಮತ್ತಾವ ಉಪದೇಶ ವಾಕ್ಯಗಳಲ್ಲಿ ನಂಬಿಕೆಯುಂಟಾಗುತ್ತದೆ? ಎಂಬ ಪ್ರಶ್ನೆಗೆ ಆತ್ಮೋಪದೇಶ ವಾಕ್ಯಗಳಿಗಿಂತಲೂ ಸತ್ತವರ ಸುದ್ದಿಯನ್ನು ಹೇಳಲು ಬಂದವರವಾಕ್ಯದಲ್ಲಿ ಜನರಿಗೆ ಬೇಗನೆ ವಿಶ್ವಾಸ ಉಂಟಾಗುವುದರಿಂದ ಆತ್ಮನಿಗಿಂತಲೂ, ಹೆಣದಲ್ಲಿ ಶಕ್ತಿಯು ಹೆಚ್ಚಾಗಿರುವುದೆಂಬ ಉತ್ತರವನ್ನು ನಾನು ಹೇಳುತ್ತೇನೆಂದು ಮುಂದಿನ ಶ್ಲೋಕದಲ್ಲಿ ಪ್ರತಿಪಾದಿಸುತ್ತಾರೆ.

## * ತೋಟಕ ವೃತ್ತ.

ಶ್ಲೋ ॥ ಪರವಸ್ತುತ ಏವಶವೋಬಲವಾ ।
ನಿತಿಮೇಹೃದಿಭಾತಿ ಕುತಸ್ತ್ವಿತಿಚೇತ್ ॥
ಪರತೋ ಲಘುನಾಮೃತಧೀಸ್ತುನೃಣಾಂ ।
ಶವತೋಲಘು ಸೂತಕಧೀರ್ಭವತಿ ॥ ೯೦ ॥

ಪದಚ್ಛೇದ;— ಪರವಸ್ತುತಃ, ಏವಶವ, ಬಲವಾನ್, ಇತಿ, ಮೇ, ಹೃದಿ, ಭಾತಿ, ಕುತಃ, ಇತಿ, ಚೇತ್, ಪರತಃ, ಲಘು, ನ, ಅಮೃತ, ಧೀಃ, ನೃಣಾಂ, ಶವತಃ, ಲಘು, ಸೂತಕಧೀಃ, ಭವತಿ.

ಟೀಕೆ:— ಪರವಸ್ತುತಃ = ಪರಮಾತ್ಮನಿಗಿಂತ । ಶವ ಏವ = ಹೆಣದಲ್ಲಿ । ಬಲವಾನಿತಿ = ಬಲವು ಹೆಚ್ಚೆಂದು । ಮೇ = ನನ್ನ । ಹೃದಿ = ಬುದ್ಧಿಯಲ್ಲಿ । ಭಾತಿ = ಕಾಣುತ್ತದೆ । ಕುತಃ = ಯಾವುದರಿಂದ । ಇತಿ = ಹೀಗೆ ಚೇತ್ = ಅಂದರೆ । ನೃಣಾಂ = ಮನುಷ್ಯರಿಗೆ । ಪರತಃ ಪರಮಾತ್ಮನಿಂದ (ಬ್ರಹ್ಮ ಬೋಧೆಯಿಂದ) ಅಮೃತಂ = ಮುಕ್ತಿಯು । ಧೀಃ = ಮತಿಯು । ಲಘು = ಬೇಗನೆ । ನ = ಆಗುವುದಿಲ್ಲ । ಶವತಃ = ಹೆಣದಿಂದ । (ಸತ್ತವನಸುದ್ದಿ ಹೇಳುವುದರಿಂದ) ಸೂತಕಧೀಃ = ಅಶುಚಿಬುದ್ಧಿಯು । ಲಘು = ಬೇಗನೆ । ಭವತಿ = ಆಗುತ್ತದೆ.

ತಾತ್ಪರ್ಯ:— ಪರಬ್ರಹ್ಮ ವಸ್ತುವಿಗಿಂತಲೂ, ಹೆಣವೇ ಬಲವಾದುದೆಂದು ನನ್ನ ಮನಸ್ಸಿನಲ್ಲಿ ತೋರುತ್ತದೆ ಏಕೆಂದರೆ ಮನುಜರಿಗೆ ಬ್ರಹ್ಮ ಬೋಧೆಯಿಂದ ಅಮೃತರೂಪವಾದ ಮುಕ್ತತ್ವ ಬುದ್ಧಿಯು ಬೇಗನೆ ಉಂಟಾಗುವುದಿಲ್ಲ. ಹೆಣದಿಂದ ಅಶುಚಿ ಬುದ್ಧಿಯು (ನನಗೆ ಸೂತಕವು ಬಂತೆಂಬ ಬುದ್ಧಿಯು.) ಬೇಗನೆ ಉಂಟಾಗುತ್ತದೆ.

ವಿಶೇಷಾರ್ಥ — ಇಲ್ಲಿ ಗ್ರಂಥಕರ್ತರು ಬ್ರಹ್ಮವಸ್ತುವಿಗಿಂತಲೂ, ಹೆಣವೇ ಬಲವಾದದ್ದೆಂದು ಹೇಳಿರುತ್ತಾರೆ. ಜಡವಾದ ಹೆಣವು ಬ್ರಹ್ಮವಸ್ತುವಿಗಿಂತಲೂ, ಬಲವಾದದ್ದೇನಲ್ಲ. ಆದರೂ ಜನರಿಗೆ ಮಹಾವಾಕ್ಯಗಳಲ್ಲಿ ಬೇಗನೆ ನಂಬಿಕೆಯುಂಟಾಗದೆಂದು ತಿಳಿದು ಜಿಗುಪ್ಸೆಯಿಂದ ಹೇಳಿದ ಮಾತಾಗಿದೆ. ಜನರು ಪರಗ್ರಾಮದಲ್ಲಿ

* ಇಪ್ಪತ್ತುನಾಲ್ಕನೇ ಶ್ಲೋಕದ ಛಂದಸ್ಸನ್ನು ನೋಡಿ.

ತನ್ನವರು ಯಾರಾದರೂ ಮರಣಹೊಂದಿದ್ದರೆ ಆ ಸುದ್ದಿಯನ್ನು ಹೇಳಿದವನ ವಚನಗಳನ್ನು ಬೇಗನೆ ನಂಬಿಕೊಂಡು ತನಗೆ ಸೂತಕವು ಬಂತೆಂಬ ಭಾವನೆಯನ್ನು ಮಾಡುತ್ತಾರೆ. ಈ ಸೂತಕ ಭಾವನೆಯು ತನ್ನಲ್ಲಿ ಧೃಡಗೊಂಡಂತೆ ವೇದಾಂತ ಮಹಾವಾಕ್ಯಗಳನ್ನು ಬಲ್ಲವರು ಎಷ್ಟೋ ಪರ್ಯಾಯವಾಗಿ ಬೋಧಿಸಿ "ನೀನು ಪರಮಾತ್ಮನೇ ಇದ್ದೀಯಿ" ಎಂದು ನೂರಾರು ಬಾರಿ ಹೇಳಿದರೂ ಆ ಹೇಳಿಕೆಯನ್ನು ಕೇಳಿಯೂ ಬೇಗನೆ ನಂಬುವುದಿಲ್ಲ. ಆದ್ದರಿಂದ ಗ್ರಂಥಕರ್ತರು ಬ್ರಹ್ಮ ಬೋಧೆಗಿಂತಲೂ ಹೆಣದ ಬೋಧೆಯು ಜನರಿಗೆ ಬಹು ಬೇಗನೆ ನಂಬಿಗೆಯನ್ನುಂಟು ಮಾಡುತ್ತದೆ. ಎಂಬುದನ್ನು ತಿಳಿದು ಬ್ರಹ್ಮವಸ್ತುವಿಗಿಂತಲೂ, ಹೆಣವೇ ಬಲವಾದುದೆಂದು ಹೇಳಿರುತ್ತಾರೆ. ಜನರು ಉತ್ತಮವಾದ ವಾಕ್ಯಗಳಲ್ಲಿ ಶ್ರದ್ಧೆಯನ್ನು ವಹಿಸುವುದಿಲ್ಲ. (ನಂಬುವುದಿಲ್ಲ) ಕೆಡಕಾದ ವಾಕ್ಯಗಳಲ್ಲಿ ಬೇಗನೆ ಶ್ರದ್ಧೆಯನ್ನು ವಹಿಸುತ್ತಾರೆ. ಉದಾಹರಣೆ; ಒಬ್ಬ ಭಿಕ್ಷುಕನು ಮನೆಗೆ ಬಂದು ಯಜಮಾನನನ್ನು ಕುರಿತು "**ನಿನಗೆ ಸಕಲ ಸಂಪತ್ತುಗಳೂ ಕೈಸೇರಲಿ. ಮನೆತುಂಬ ಮಕ್ಕಳು ಮರಿಗಳಾಗಲಿ, ಪರಮಾತ್ಮನು ದೀರ್ಘಾಯುಷ್ಯವನ್ನೀಯಲಿ, ನೀನು ಮಣ್ಣು ಹಿಡಿದರೆ ಅದು ಚಿನ್ನವಾಗಲಿ**" ಎಂದು ಹರಿಸುತ್ತಾನೆ. ಆ ಯಜಮಾನನು ಆ ಭಿಕ್ಷುಕನ ಉತ್ತಮ ಮಾತುಗಳಲ್ಲಿ ವಿಶ್ವಾಸವಿಡುವುದಿಲ್ಲ. ಅಂದರೆ ಭಿಕ್ಷುಕನಾಡಿದ ವಚನಗಳು ಸತ್ಯವಾಗುವುದಿಲ್ಲನೆಂದು ಅಪನಂಬಿಕೆ ಪಡುತ್ತಾನೆ ಅದೇ ಭಿಕ್ಷುಕನೇ ಮತ್ತೊಮ್ಮೆ ಸಿಟ್ಟಿನಿಂದ "**ನಿನ್ನಮನೆ ಹಾಳಾಗಲಿ, ನಿನ್ನ ಮಕ್ಕಳುಮರಿಗಳೆಲ್ಲಾ ಸುಡಗಾಡು ಸೇರಲಿ; ನಿನಗೆ ತಿನ್ನಲಿಕ್ಕೆ ಅನ್ನವಿಲ್ಲದಂತಾಗಲಿ**" ಎಂದು ಶಪಿಸಿದರೆ ಆ ಮಾತುಗಳನ್ನು ಕೇಳಿ ಅವುಗಳನ್ನು ನಂಬಿಕೊಂಡು ಆ ಭಿಕ್ಷುಕನನ್ನು ಸಿಟ್ಟಿನಿಂದ ಹೊಡೆಯಲು ಹೋಗುತ್ತಾನೆ, ಅಂದರೆ ಭಿಕ್ಷುಕನು ಹರಿಸಿದ ವಾಕ್ಯಗಳಲ್ಲಿ ನಂಬಿಕೆಯುಂಟಾಗಲಿಲ್ಲ ಶಪಿಸಿದ ವಾಕ್ಯಗಳಲ್ಲಿ ನಂಬಿಕೆಯುಂಟಾಯಿತು. ಇದರಂತೆ ಬ್ರಹ್ಮೋಪದೇಶ ವಾಕ್ಯಗಳಲ್ಲಿ ಬೇಗನೆ ನಂಬಿಕೆಯುಂಟಾಗುವುದಿಲ್ಲ. ಪರಗ್ರಾಮದಲ್ಲಿ ನಿನ್ನವರು ಸತ್ತರೆಂಬ ಹೆಣದ ಉಪದೇಶದಲ್ಲಿ ನಂಬಿಕೆಯುಂಟಾಗುತ್ತದೆ. ಅಂದರೆ ಶಿವೋಪದೇಶದಲ್ಲಿ ಬಲವಿಲ್ಲದ್ದಾಯಿತು ಶವೋಪದೇಶದಲ್ಲಿ ಬಲವುಂಟಾಯಿತು.

ಈ ಲೋಕಾನುಭವದಿಂದ ಗ್ರಂಥಕರ್ತರು ಬ್ರಹ್ಮವಸ್ತುವಿಗಿಂತಲೂ ಹೆಣದಲ್ಲಿ ಬಲವಧಿಕವೆಂದು ನಾನು ಹೇಳುತ್ತೇನೆ ಎಂದು ಹೇಳಿದ್ದಾರೆ. ಜನರು ಲಚ್ ಲಚ್ ಎಂದು ಹಲ್ಲಿಯು ನುಡಿದರೆ ಆ ನುಡಿಗಳಿಂದ ನನಗೆ ಶುಭಾಶುಭ ಫಲಗಳುಂಟಾಗುತ್ತವೆಂದು ಬೇಗನೆ ನಂಬುತ್ತಾರೆ. ಬಲ್ಲವರ ನುಡಿಗಳನ್ನು ನಂಬುವುದಿಲ್ಲ. ಅಂದರೆ ಹಲ್ಲಿಯ ನುಡಿಯಲ್ಲಿ ನಂಬಿಕೆ ಬಲ್ಲವರ ನುಡಿಯಲ್ಲಿ ಅಪನಂಬಿಕೆ. ಈ ರೀತಿ ಜನರ ಭಾವನೆಯಿರುವುದರಿಂದ ಗ್ರಂಥಕರ್ತರು

ಹೇಳಿದ್ದು ಸಮಂಜಸವಾಗಿದೆ. ಇಲ್ಲಿ ಗ್ರಂಥಕರ್ತರು ಶ್ರುತಿ ವಾಕ್ಯಗಳನ್ನು ಯಾರು ನಂಬುವುದಿಲ್ಲವೋ ಅವರು ದೈವದ್ರೋಹಿಗಳೆಂತಲೂ, ವೇದಬಾಹಿರರೆಂತಲೂ, ಹೇಳಿರುತ್ತಾರೆ. ಆ ಶ್ರುತಿಗಳಲ್ಲಿ ಕರ್ಮೋಪಾಸನೆಗಳಿಂದ ಮುಕ್ತಿಯು ಲಭಿಸುವುದಿಲ್ಲವೆಂತಲೂ, ಸ್ವರೂಪಜ್ಞಾನದಿಂದಲೇ ಮುಕ್ತಿಯು ಪ್ರಾಪ್ತಿಯಾಗುವುದೆಂತಲೂ, ಹೇಳಿರುವುದರಿಂದ ಆ ಶ್ರುತಿ ವಾಕ್ಯಗಳನ್ನು ಸರ್ವರೂ ವಿಶ್ವಾಸಿಸತಕ್ಕದ್ದು ಎಂಬ ಭಾವವು.

## ವಾರ್ಧಿಕ ಷಟ್ಪದಿ

ಆತ್ಮವಸ್ತುವಿಗಿಂತ ಹೆಣವು ಬಲವೆಂದುನಾ ।
ನುತ್ತರಿಪೆ ನೇಕೆಂದೊಡಾತ್ಮ ಬೊಧೆಯು ಕೇಳಿ ।
ಚಿತ್ತದೊಳು ಬೇಗನೇ ನಂಬಿಕೆಯ ನಳವಡಿಸಿಕೊಂಡು ಮುಕ್ತಿಯಹೊಂದರು ॥
ಸತ್ತಸುದ್ದಿಯಕೇಳಿ ಸೂತಕವು ಬಂತೆಂದು ।
ಚಿತ್ತದೊಳು ಬಹು ಬೇಗನಂಬುತಿಹರದರಿಂದ ।
ಆತ್ಮವಸ್ತುವಿಗಿಂತ ಹೆಣದಲ್ಲಿ ಬಲವಧಿಕವೆಂದೊಡೇಂ ದೋಷವಿಲ್ಲ ॥ ೪೦ ॥

**ಅವತಾರಿಕೆ;—** ಪರಬ್ರಹ್ಮವಸ್ತುವಿಗಿಂತಲೂ ಹೆಣದಲ್ಲಿ ಬಲವಧಿಕವಾಗಿರುವುದೆಂದು ತಾವು ಹೇಳಿದ್ದರೂ, ಆ ಹೇಳಿಕೆಯು ಪಾಮರ ಜನರು ಶ್ರುತಿವಾಕ್ಯಗಳನ್ನು ಬೇಗನೆ ನಂಬುವುದಿಲ್ಲವೆಂಬ ಬಗ್ಗೆ ಹೇಳಿದ ಮಾತಾಗಿರುತ್ತದೆ. ತಮ್ಮ ಸಿದ್ಧಾಂತವು ಕರ್ಮೋಪಾಸನೆಗಳಿಂದ ಮುಕ್ತಿಯು ಲಭಿಸುವುದಿಲ್ಲವೆಂತಲೂ, ಸ್ವರೂಪಜ್ಞಾನದಿಂದಲೇ ಆ ಮುಕ್ತಿಯು ಪ್ರಾಪ್ತಿಯಾಗುವುದೆಂತಲೂ ಇರುತ್ತದೆ ಆದರೆ ವೇದೋಕ್ತವಾದ ಕರ್ಮಗಳನ್ನು ಮಾಡುತ್ತಾ ಇದ್ದು ಸ್ವರೂಪ ಜ್ಞಾನಾವಿಲಂಬಿಯಾದರೆ ಮುಕ್ತಿಯು ಪ್ರಾಪ್ತಿಯಾಗದೆ? ಅಂದರೆ ಕರ್ಮಜ್ಞಾನಗಳೆರಡರಿಂದ ಕೂಡಿದ್ದರೆ ಮುಕ್ತಿಯು ಲಭಿಸದೆ? ಮತ್ತು ಫಲಾಪೇಕ್ಷೆಯಿಲ್ಲದ ನಿಷ್ಕಾಮಕರ್ಮದಿಂದ ಕೂಡಿದ ಜ್ಞಾನದಿಂದ ಮುಕ್ತಿಯು ಪ್ರಾಪ್ತಿಯಾಗದೆ? ಎಂಬ ಪ್ರಶ್ನೆಗೆ ನಿಷ್ಕಾಮಕರ್ಮವಾದರೂ ಬಂಗಾರ ಬೇಡಿಗಳಂತೆ ಆಗುವುದೆಂಬ ಉತ್ತರವನ್ನು ಮುಂದಿನ ಶ್ಲೋಕದಲ್ಲಿ ತಿಳಿಸುತ್ತಾರೆ.

## * ವಸಂತ ತಿಲಕಾ ವೃತ್ತ

**ಶ್ಲೋ॥ ಸೇವ್ಯೋವಿಧಿಃಕೃತ ಚಿತೋಪಿ ಫಲೇಚ್ಛಮನ್ಯ ।**
**ಸ್ತ್ಯಾಜ್ಯಸ್ಸದೇತಿಕಲೆ ಚಿನ್ವಿದುರರ್ಥ ಮೂಢಾಃ ॥**

* ಹನ್ನೆರಡನೇ ಶ್ಲೋಕದ ಛಂದಸ್ಸನ್ನು ನೋಡಿ.

ಯಾಕಾಚಿದಪ್ಯಭಿಮತಿಃ ಖಲುಬಂಧಬೀಜಂ ||
ಹೈಮಂನತರ್ಹಿನ ನಿಗಳಂ ಗಮನಾಂತರಾಯಃ || ೪೧ ||

**ಪದಚ್ಛೇದ:**— ಸೇವ್ಯಃ, ವಿಧಿಃ, ಕೃತ, ಚಿತಃ, ಅಪಿ, ಫಲೇಚ್ಛಂ, ಅನ್ಯಃ, ತ್ಯಾಜ್ಯಃ, ಸದಾ, ಇತಿ, ಕತಿಚಿತ್, ವಿದುಃ, ಅರ್ಧಮೂಢಾಃ, ಯಾಕಾಚಿದಪಿ, ಅಭಿಮತಿಃ, ಖಲು, ಬಂಧಬೀಜಂ, ಹೈಮಂ, ತರ್ಹಿನ, ನಿಗಳಂ, ಗಮನಾಂತರಾಯಃ

**ಟೀಕೆ;**— ಫಲೇಚ್ಛಂ = ಕಾಮ್ಯ ಬುದ್ಧಿಯಿಂದ ಮಾಡುವ ಕರ್ಮವನ್ನು | ತ್ಯಾಜ್ಯಃ =ಬಿಟ್ಟು | ಅನ್ಯಃ = ಕಾಮ್ಯಕರ್ಮದಿಂದ ಬೇರೆಯಾದ | ಕೃತ = ಮಾಡಲ್ಪಟ್ಟ | ಚಿತಃ = ಜ್ಞಾನದಿಂ ಕೂಡಿದ | ವಿಧಿಃ = ಕರ್ಮವು | ಸದಾ = ನಿರಂತರವೂ | ಸೇವ್ಯಃ = ಆಚರಿಸಲು ಯೋಗ್ಯವಾದುದ್ದು | ಇತಿ = ಈ ರೀತಿ | ಕತಿಚೀತ್ = ಕೆಲವು | ಅರ್ಧಮೂಢಾಃ = ಅರ್ಧಮೂರ್ಖರು | ವಿದುಃ = ಅರಿತಿರುವರು | ಅಪಿ = ಹಾಗಾದರೂ ಕೂಡ | ಯಾಕಾಚಿದಪಿ = ಯಾವದಾದರೂ | ಅಭಿಮತಿಃ = ಒಪ್ಪಿಗೆಯು | ಖಲು = ನಿಶ್ಚಯವಾಗಿ | ಬಂಧಬೀಜಂ = ಬಂಧನಕ್ಕೆ ಹೇತುವು | ಹೈಮಂ = ಸುವರ್ಣದ | ನಿಗಳಂ = ಬೇಡಿಯು | ಗಮನಾಂತರಾಯಃ = ನಡೆಯಲು ಪ್ರತಿಬಂಧವು | ತರ್ಹಿನ = ಅಲ್ಲವೇ ? |

**ತಾತ್ಪರ್ಯ:**— ಅರ್ಧ ಮೂಢರಾದ ಕೆಲವರು ಕಾಮ್ಯ ಕರ್ಮಗಳನ್ನು ಬಿಟ್ಟು ಜ್ಞಾನ ವಿಶಿಷ್ಟವಾದ ಕರ್ಮಗಳನ್ನು ಸದಾ ಮಾಡುತ್ತಲಿರುವುದೇ ಯೋಗ್ಯವೆಂದು ತಿಳಿದಿರುತ್ತಾರೆ. ಇವರ ತಿಳುವಳಿಕೆಯು ಕಬ್ಬಿಣದ ಬೇಡಿಯನ್ನು ಬಿಟ್ಟು ಬಂಗಾರದ ಬೇಡಿಯನ್ನು ಹಾಕಿಕೊಂಡಂತಿದೆ. ಯಾವ ಬೇಡಿಗಳಾದರೇನು ? ನಡೆಯುವುದಕ್ಕೆ ಪ್ರತಿಬಂಧಕ ವಲ್ಲವೇ ? ಜ್ಞಾನ ವಿಶಿಷ್ಟವಾದ ಕರ್ಮದಿಂದ ನಿಜವಾಗಿಯೂ ಮುಕ್ತಿಯು ಸಿದ್ಧಿಸುವುದಿಲ್ಲ.

**ವಿಶೇಷಾರ್ಥ:**— ಕೆಲವರು ಜ್ಞಾನಕರ್ಮಗಳೆರಡನ್ನು ಒಟ್ಟುಗೂಡಿಸಿಕೊಂಡು ಆಚರಿಸುವುದಾದರೆ ಮುಕ್ತಿಯು ಲಭಿಸುವುದೆಂದು ಹೇಳುತ್ತಾರೆ. ಇವರಿಗೆ ಜ್ಞಾನಕರ್ಮ ಸಮ ಸಮುಚ್ಚಯ ವಾದಿಗಳೆಂಬ ಹೆಸರು. ಇವರು ಕಾಮ್ಯಕರ್ಮವು ಬಂಧ ಹೇತುವೆಂತಲೂ, ನಿಷ್ಕಾಮಕರ್ಮವು ಮುಕ್ತಿಗೆ ಸಾಧನವೆಂತಲೂ, ಭಾವಿಸಿಕೊಂಡಿರುತ್ತಾರೆ. ಮತ್ತು ಆ ಭಾವನೆಯಿಂದ ಕರ್ಮಗಳನ್ನು ಆಚರಿಸುತ್ತಾ, ಸ್ವರೂಪ ಜ್ಞಾನವನ್ನು ಅಳವಡಿಸಿಕೊಳ್ಳಬೇಕೆಂಬುದು ಆ ಜ್ಞಾನಕರ್ಮ ಸಮಸಮುಚ್ಚಯ ವಾದಿಗಳ ಮತವಾಗಿದೆ. ಇವರನ್ನು ಗ್ರಂಥಕರ್ತರು ಅರ್ಧಮೂಢರೆಂದು

ಹೆಸರಿಸಿದ್ದಾರೆ. ಜ್ಞಾನಕರ್ಮ ಸಮುಸಮುಚ್ಚಯ ವಾದಿಗಳು ಸಂಪೂರ್ಣ ಮೂಢರೂ ಅಲ್ಲ, ಸಂಪೂರ್ಣ ಅರಿತವರೂ ಅಲ್ಲ. ಏಕೆಂದರೆ ಬರೀ ಕರ್ಮದಲ್ಲಿ ತತ್ಪರರಾದವರು ಮೂಢರೆಂತಲೂ, ಬರೀ ಜ್ಞಾನದಲ್ಲಿ ತತ್ಪರರಾದವರು ಪಂಡಿತರೆಂತಲೂ, (ಜ್ಞಾನಿಗಳೆಂತಲೂ) ತಿಳಿದವರು ಹೇಳುತ್ತಾರೆ. ಇಲ್ಲಿ ಜ್ಞಾನಕರ್ಮ ಸಮುಸಮುಚ್ಚಯ ವಾದಿಗಳು ಇತ್ತ ಮೂಢರೂ ಅಲ್ಲ. ಅತ್ತ ಪಂಡಿತರೂ ಅಲ್ಲ. ಆದ್ದರಿಂದ ಇವರಿಗೆ ಅರ್ಧಮೂಢರು, ಅರೆಮರುಳರು, ಎಂಬುದು ಗ್ರಂಥಕರ್ತರ ಅಭಿಪ್ರಾಯವಾಗಿದೆ. ಇವರ ಅಭಿಪ್ರಾಯವು ಶ್ರುತಿ ಸಮ್ಮತವಾದುದು. ಅನುಭವ ಗಮ್ಯವಾದುದು. ಕರ್ಮದಲ್ಲಿ ಸಕಾಮವೇ ಇರಲಿ, ನಿಷ್ಕಾಮವೇ ಇರಲಿ. ಆ ಕರ್ಮಕ್ಕೆ ಕರ್ತನು ಆಶ್ರಯ ಕೊಡಬೇಕಾಗುತ್ತದೆ. ಕರ್ತನಿಲ್ಲದೆ ಯಾವ ಕರ್ಮಗಳೂ ಜರುಗುವುದಿಲ್ಲ. ಕರ್ಮಕ್ಕೆ ಕರ್ತೃತ್ವ ಬುದ್ಧಿಯು ಬೇಕು. ಜ್ಞಾನಕ್ಕೆ ಅಕರ್ತೃತ್ವ ಬುದ್ಧಿಯು ಬೇಕು. ಇವೆರಡು ಒಂದೇ ಸಮಯದಲ್ಲಿ ಒಬ್ಬನಲ್ಲಿ ಸಮುಚ್ಚಯವಾಗುವುದಿಲ್ಲ. ಅಂದರೆ ಒಬ್ಬನಲ್ಲಿ ಆ ಕರ್ಮ ಜ್ಞಾನಗಳೆರಡೂ ಕೂಡಿಕೊಂಡಿರುವುದಿಲ್ಲ. ಆದ್ದರಿಂದ ಗ್ರಂಥಕರ್ತರು ಕರ್ಮ ಜ್ಞಾನ ಸಮುಸಮುಚ್ಚಯ ವಾದಿಗಳನ್ನು ಕುರಿತು ಅರ್ಧಮೂಢರೆಂದು ಹೆಸರಿಸಿರುವುದು ಸಮಂಜಸವಾಗಿದೆ. ಸಕಾಮ ಕರ್ಮವನ್ನು ಬಿಟ್ಟು ನಿಷ್ಕಾಮ ಕರ್ಮವನ್ನು ಮಾಡುವುದರಿಂದ ಮೋಕ್ಷವು ಲಭಿಸುವುದೆಂದು ಹೇಳುವ ಮಾತು ಕಬ್ಬಿಣದ ಬೇಡಿಗಳನ್ನು ಬಿಟ್ಟು ಬಂಗಾರದ ಬೇಡಿಗಳನ್ನು ಹಾಕಿಕೊಂಡಂತಾಗುತ್ತದೆ. ನಿಷ್ಕಾಮ ಕರ್ಮವು ಬಂಗಾರದ ಬೇಡಿಯಂತಿರುತ್ತದೆ ಬೇಡಿಯೆಂದರೆ ಸಂಕೋಲೆ. ಸಂಕೋಲೆಯು ಅಂದಮೇಲೆ ಅದು ಕಬ್ಬಿಣದ್ದಾದರೇನು ? ಬಂಗಾರದ್ದಾದರೇನು ? ಗಮನಕ್ಕೆ ತೊಂದರೆಯಲ್ಲವೇ ? ಆದ್ದರಿಂದ ಕರ್ಮ ಜ್ಞಾನ ಸಮುಸಮುಚ್ಚಯ ವಾದಿಯು ನಿಜವಾಗಿಯೂ ಅರ್ಧ ಹುಚ್ಚನು. ಎಂಬ ಭಾವವು.

### ವಾರ್ಧಿಕ ಷಟ್ಪದಿ

ಫಲವನಿಚ್ಛಿಸಿಮಾಳ್ಪ ಕರ್ಮಗಳ ಬಿಟ್ಟು ನಿ ।
ರ್ಮಲದರಿವು ಬೆರೆತಿರುವ ಕರ್ಮಗಳ ನಾಚರಿಪು ।
ದೊಳಿತೆಂದು ಬಗೆಯುತಿಹ ಜನರು ಕೆಲರುಂಟರ್ಧ ಮೂಢಾತ್ಮರಪ್ಪರವರು ॥
ತಿಳಿಯೆ ಕಬ್ಬಿಣಬೇಡಿಗಳ ಬಿಟ್ಟು ಥಳಥಳನೆ ।
ಹೊಳೆವ ಮಿಸುನಿಯ ಬೇಡಿಗಳ ಧರಿಸಲವು ಚರಣ ।
ಗಳಿಗೆ ಬಂಧನವನ್ನು ಕೊಡದೆ ಗಮನಕೆ ಯೋಗ್ಯವೆಂದೆನಿಸಿಕೊಳ್ಳುತಿಹವೆ ? ॥

॥ ೪೧ ॥

**ಅವತಾರಿಕೆ :-** ತಾವು ಕರ್ಮ ಜ್ಞಾನಗಳ ಸಮುಸಮುಚ್ಚಯವಾದಿಗಳನ್ನು ಕುರಿತು ಅರ್ಥ ಮೂಢರೆಂದು ಹೇಳಿದಂತಾಯಿತು. ಕರ್ಮ ಜ್ಞಾನಗಳೆರಡು ಕೂಡಿದ್ದರೆ ಮುಕ್ತಿಯು ಪ್ರಾಪ್ತಿಯಾಗುತ್ತದೆಂದು ಅರಿತು ಆಚರಿಸುವ ಜನರು ಅನೇಕರು ಸಿಗುತ್ತಾರೆ. ಇವರಿಗೆ ಮುಕ್ತಿಯು ಆಗದೆಂಬುದು ತಮ್ಮ ಅಭಿಪ್ರಾಯವಾಗಿದೆ. ಇವರಿಗೆ ಮುಕ್ತಿಯಾಗುವುದಿಲ್ಲವೆಂದಮೇಲೆ ಇವರಿಗಾಗುವ ಫಲವೇನು ? ಅಂದರೆ ಜ್ಞಾನ ಕರ್ಮ ಸಮುಸಮುಚ್ಚಯ ವಾದಿಗಳಿಗೆ ಆಗುವ ಮುಕ್ತಿಯಾವುದು ? ಎಂಬ ಪ್ರಶ್ನೆಗೆ ಆ ಜ್ಞಾನಕರ್ಮ ಸಮುಸಮುಚ್ಚಯ ವಾದಿಗಳು ಯಾವ ಫಲವನ್ನೂ ಹೊಂದರೆ ಉಭಯ ಭ್ರಷ್ಟರಾಗುತ್ತಾರೆಂಬ ಉತ್ತರವನ್ನು ಮುಂದಿನ ಶ್ಲೋಕದಲ್ಲಿ ಸೂಚಿಸುತ್ತಾರೆ.

## * ಆರ್ಯಾ ಗೀತಿ.

**ಕುಲಟಾ ಕಾಮು ಕೃಪಾಸಂಭಿನ್ನಾ ।**
**ಭವತಿ ಯಥಾ ವಿಟ ಶಿಶು ಗತಿ ಖಿನ್ನಾ ।**
**ಕರ್ಮಜ್ಞಾನದ್ವಯ ಕೃತ ನಿಷ್ಠಃ ।**
**ಪಾತಿತ್ಯಂ ಯಾತ್ಯುಭಯ ಭ್ರಷ್ಟಃ ॥** ॥ ೪೨ ॥

**ಪದಚ್ಛೇದ :—** ಕುಲಟಾ, ಕಾಮು, ಕೃಪಾ, ಸಂಭಿನ್ನಾ, ಭವತಿ, ಯಥಾ, ವಿಟ, ಶಿಶು, ಗತಿ, ಖಿನ್ನಾ, ಕರ್ಮ, ಜ್ಞಾನ, ದ್ವಯ, ಕೃತ, ನಿಷ್ಠಃ, ಪಾತಿತ್ಯ, ಯಾತಿ ಉಭಯ, ಭ್ರಷ್ಟಃ.

**ಟೀಕೆ :-** ಕಾಮು = ಸುರತೇಚ್ಛೆ । ಕೃಪಾ = ರಕ್ಷಣೆಯ ಮಮತೆಯಿಂದ । ಸಂಭಿನ್ನಾ = ಕೂಡಿಕೊಂಡ । ಕುಲಟಾ = ಜಾರಿಣಿಯು । ವಿಟ = ಪರಪುರುಷನಲ್ಲಿ । ಶಿಶು = ಹೆತ್ತ ಕೂಸಿನಲ್ಲಿ । ಗತಿ = ಹೊಂದುವುದರಿಂದ । ಖಿನ್ನಾ = ದುಂಖಿತಳು । ಯಥಾ = ಯಾವರೀತಿ । ಭವತಿ = ಆಗುತ್ತಾಳೆಯೋ । ಕರ್ಮ = ನಿತ್ಯ ನೈಮಿತ್ತಿಕಾದಿ ಕರ್ಮ । ಜ್ಞಾನ = ಸ್ವರೂಪಜ್ಞಾನ । ದ್ವಯ = ಎರಡರಲ್ಲಿ । ಕೃತ = ಮಾಡಲ್ಪಟ್ಟ । ನಿಷ್ಠಃ = ನಂಬಿಕೆಯುಳ್ಳವನು । ಉಭಯ = ಆ ಎರಡರಿಂದ । ಭ್ರಷ್ಟಃ = ಕೆಟ್ಟವನು । ಪಾತಿತ್ಯಂ = ಅಧೋಗತಿಯನ್ನು । ಯಾತಿ = ಹೊಂದುತ್ತಾನೆ ।

---

* ಒಂದನೇ ಶ್ಲೋಕದ ಛಂದಸ್ಸನ್ನು ನೋಡಿ.

**ತಾತ್ಪರ್ಯ :**– ಜಾರ ಸ್ತ್ರೀಯುಳು ಒಂದೇ ಸಮಯದಲ್ಲಿ ತನ್ನ ಕೂಸಿಗೆ ಸ್ತನ್ಯಪಾನವಂ ಮಾಡಿಸುವುದೂ, ವಿಟಪುರುಷನಲ್ಲಿ ರಮಿಸುವುದೂ, ಬಂದಾಗ ಆ ಎರಡರಿಂದ ಆ ಜಾರಿಣಿಯು ದುಃಖಿತಳಾಗುವಂತೆ, ಕರ್ಮ ಜ್ಞಾನಗಳೆರಡರಲ್ಲಿ ನಿಷ್ಠೆಯುಳ್ಳವನು ಆ ಕರ್ಮಜ್ಞಾನಗಳ ಫಲಗಳನ್ನು ಹೊಂದದೆ ಉಭಯ ಭ್ರಷ್ಟನಾಗಿ ಅಧೋಗತಿಗಿಳಿಯುತ್ತಾನೆ.

**ವಿಶೇಷಾರ್ಥ :**– ಕರ್ಮ ಮತ್ತು ಜ್ಞಾನ ಇವೆರಡಕ್ಕೆ ಸಮುಚ್ಚಯವಾಗುವುದಿಲ್ಲ. ಅಂದರೆ ಅವೆರಡೂ ಒಂದೇ ಸ್ಥಾನದಲ್ಲಿ ನಿಲ್ಲುವುದಿಲ್ಲ. ಅವೆರಡರಲ್ಲಿ ನಿಷ್ಠೆಯುಳ್ಳವನು ಉಭಯ ಭ್ರಷ್ಟನಾಗುತ್ತಾನೆಂದು ಗ್ರಂಥಕರ್ತರು ಜಾರ ಸ್ತ್ರೀಯಳ ಉಪಮಾನವನ್ನಿತ್ತು ಸ್ಪಷ್ಟ ಪಡಿಸಿದ್ದಾರೆ. ಹೇಗೆಂದರೆ ಜಾರಸ್ತ್ರೀಯಳು ತನ್ನ ಕೂಸಿಗೆ ಮೊಲೆಯನ್ನುಣಿಸಬೇಕೆಂಬ ಮಮತೆಯೂ, ತನ್ನ ಇಚ್ಛಿತಪುರುಷನಲ್ಲಿ ಕ್ರೀಡಿಸಬೇಕೆಂಬ ಆತುರತೆಯೂ, ಒಂದೇ ಸಮಯದಲ್ಲಿ ಉಂಟಾದಾಗ ಆ ಸ್ತ್ರೀಯಳಿಗೆ ಉಂಟಾದ ವ್ಯಥೆಯು ಹೇಳಲಳವಲ್ಲ. ಕೂಸಿಗೆ ಮೊಲೆಯನ್ನುಣಿಸಬೇಕೆಂದರೆ ವಿಟನೊಡನೆ ಕ್ರೀಡಿಸುವುದನ್ನು ಬಿಡಬೇಕಾಗುತ್ತದೆ. ಇಲ್ಲವೆ ವಿಟನೊಡನೆ ಕ್ರೀಡಿಸಬೇಕೆಂದರೆ ಕೂಸಿಗೆ ಮೊಲೆಯನ್ನುಣಿಸುವುದನ್ನು ಬಿಡಬೇಕಾಗುತ್ತದೆ. ಆ ಎರಡೂ ಕಾರ್ಯಗಳನ್ನು ಒಂದೇ ಸಮಯದಲ್ಲಿ ಮಾಡುವುದಕ್ಕಾಗುವುದಿಲ್ಲ. ಆ ಎರಡೂ ಕಾರ್ಯಗಳನ್ನು ಒಂದೇ ಸಮಯದಲ್ಲಿ ಮಾಡಲು ಪ್ರಯತ್ನಿಸದರೆ ಅವೆರಡರಿಂದಲೂ ಭ್ರಷ್ಟಳಾಗುವುದು ನಿಜ. ಹೇಗೋ ಹಾಗೆ ಕರ್ಮಜ್ಞಾನಗಳೆರಡು ಒಂದೇ ಸಮಯದಲ್ಲಿ ಅಂದರೆ ಒಬ್ಬನಲ್ಲಿ ನೆಲೆಗೊಳ್ಳುವುದಿಲ್ಲ. ಅವುಗಳನ್ನು ನೆಲೆಗೊಳಿಸಲು ಪ್ರಯತ್ನಿಸುವುದಾದರೆ ಆ ಕರ್ಮ ಮತ್ತು ಜ್ಞಾನ ಫಲಗಳಿಂದ ನಿಜವಾಗಿಯೂ ಭ್ರಷ್ಟನಾಗುತ್ತಾನೆ. ಕರ್ಮಕ್ಕೆ ಉತ್ಪಾದ್ಯ, ಪ್ರಾಪ್ಯ, ವೈಕಾರ್ಯ, ಸಂಸ್ಕಾರ್ಯಗಳೆಂಬ ನಾಲ್ಕು ಫಲಗಳಿರುತ್ತವೆ. ಜ್ಞಾನಕ್ಕೆ ದುಃಖಾಪಸರ್ಪ, ಸರ್ವಕಾಮಾಪ್ತಿ, ಕೃತಕೃತ್ಯತೆ, ಪ್ರಾಪ್ಯಪ್ರಾಪ್ತಿಗಳೆಂಬ ನಾಲ್ಕು ಫಲಗಳಿರುತ್ತವೆ ಅಂದರೆ ಕರ್ಮಫಲ ಚತುಷ್ಟಯಗಳಿಗೂ, ಜ್ಞಾನಫಲ ಚತುಷ್ಟಯಗಳಿಗೂ, ಸಂಬಂಧವೇ ಇರುವುದಿಲ್ಲ. ಅಂದರೆ ಅವೆರಡು ಫಲಗಳು ಒಂದು ಸ್ಥಾನದಲ್ಲಿ ನಿಲ್ಲುವುದಿಲ್ಲ, ಒಬ್ಬನಿಗೇ ಅವೆರಡು ಫಲಗಳು ಕೈಸೇರುವುದಿಲ್ಲ. ಉತ್ಪಾದ್ಯಾದಿ ಕರ್ಮಫಲ ಚತುಷ್ಟಯಗಳನ್ನು ದುಃಖಾಪಸರ್ಪಾದಿ ಜ್ಞಾನಫಲ ಚತುಷ್ಟಯಗಳನ್ನು ಗ್ರಂಥ ಬಾಹುಳ್ಯ ಭೀತಿಯಿಂದ ವಿಮರ್ಶಿಸುವುದನ್ನು ಬಿಟ್ಟಿದ್ದೇವೆ ಅಪೇಕ್ಷಿತರು ಶ್ರೀಮನ್ನಿಜಗುಣರ "ವಿವೇಕ ಚಿಂತಾಮಣಿ" ಗ್ರಂಥದಲ್ಲಿ ನೋಡಿಕೊಳ್ಳತಕ್ಕದ್ದು. ಕರ್ಮ ಮತ್ತು ಜ್ಞಾನ ಇವೆರಡು ಫಲಗಳು ಒಂದು ಸ್ಥಾನದಲ್ಲಿ ಸೇರದೆ ಇರುವುದರಿಂದ ಕರ್ಮ ಜ್ಞಾನ ಸಮ ಸಮುಚ್ಚಯವಾದಿಗಳು

ಆ ಎರಡೂ ಫಲಗಳನ್ನು ಹೊಂದದೆ ಪತಿತನಾಗುತ್ತಾನೆ. ಆದ್ದರಿಂದ ಆ ವಾದಿ ಅರ್ಧಮೂರ್ಖನೆಂಬ ಗ್ರಂಥಕರ್ತರ ಹೇಳಿಕೆಯು ಯಥಾರ್ಥವಾದುದು. ಒಬ್ಬ ಪುರುಷನು ಕರ್ಮನಿಷ್ಠನಾಗಿರಬಹುದು ಇಲ್ಲವೇ ಜ್ಞಾನನಿಷ್ಠನಾಗಿರಬಹುದು. ಒಬ್ಬನಲ್ಲಿಯೇ ಆ ಎರಡುನಿಷ್ಠೆಗಳು ಅಳವಡುವುದಿಲ್ಲ. ಕೆಲವರು ಒಂದು ಪಕ್ಷಿಗೆ ಎರಡು ರೆಕ್ಕೆಗಳಿರುವುದರಿಂದ ಆಕಾಶದಲ್ಲಿ ನಿರಾಯಾಸವಾಗಿ ಗಮಿಸುವಂತೆ ಒಬ್ಬನಲ್ಲಿ ಕರ್ಮಜ್ಞಾನಗಳೆರಡು ಇದ್ದರೆ ಮೋಕ್ಷಸುಖವನ್ನು ನಿರಾಯಾಸವಾಗಿ ಅನುಭವಿಸಲು ಬರುತ್ತದೆ. ಎಂದು ಹೇಳುವುದುಂಟು. ಈ ಹೇಳಿಕೆಯ ಯುಕ್ತಿಯು ನೆಲೆಗೆ ನಿಲ್ಲುವುದಿಲ್ಲ; ಹೇಗೆಂದರೆ ಪಕ್ಷಿಯಲ್ಲಿರುವ ಎರಡು ರೆಕ್ಕೆಗಳಲ್ಲಿ ಹಾರುವಂತಹ ಸಮಾನ ಧರ್ಮಗಳಿವೆ. ಆ ರೆಕ್ಕೆಗಳಂತೆ ಕರ್ಮ ಜ್ಞಾನಗಳಲ್ಲಿ ಸಮಾನ ಧರ್ಮಗಳಿರುವುದಿಲ್ಲ. ಪರಮಾತ್ಮನು ನನಗೆ ಬೇರೆಯಾಗಿದ್ದಾನೆಂಬ ತಿಳುವಳಿಕೆಯಲ್ಲಿ ಕರ್ಮವು ನಡೆಯುತ್ತದೆ. ಆ ಪರಮಾತ್ಮನೇ ನಾನಿದ್ದೇನೆಂಬ ತಿಳುವಳಿಕೆಯೇ ಜ್ಞಾನವಾಗಿದೆ. ಅಂದಮೇಲೆ ಆ ಕರ್ಮಜ್ಞಾನಗಳು ಏಕಾಧಿಕರಣದಲ್ಲಿ ಕೂಡುವುದಿಲ್ಲ. ಅಲ್ಲದೆ ಅವುಗಳ ಧರ್ಮಗಳೇ ಬೇರೆ. ಆದ್ದರಿಂದ ಪಕ್ಷಿಯ ರೆಕ್ಕೆಗಳ ದೃಷ್ಟಾಂತವು ವಿಷಮರೂಪವಾದುದು. ಅಂತೂ ಕರ್ಮ ಜ್ಞಾನ ಸಮುಸಮುಚ್ಚಯವಾದಿಯು ಹೇಳುವ ಮಾತು “ ಅಕ್ಕಿಯ ಮೇಲೆ ಆಶೆ ನೆಂಟರಮೇಲೆಪ್ರೇಮ ” ಎಂಬಂತಿದೆ. ಅಕ್ಕಿಯ ಮೇಲೆ ಆಶೆಯಿದ್ದರೆ ನೆಂಟರನ್ನು ತಮ್ಮೂರಿಗೆ ಕಳುಹಿಸಬೇಕು. ನೆಂಟರಮೇಲೆ ಪ್ರೇಮವಿದ್ದರೆ ಅಕ್ಕಿಯಮೇಲಿನ ಆಶೆಯನ್ನು ಬಿಟ್ಟು ಅಡಿಗೆಮಾಡಿ ಉಣಬಡಿಸಿ ನೆಂಟರನ್ನು ಮನೆಯಲ್ಲಿ ಉಳಿಸಿಕೊಳ್ಳಬೇಕು. ಹೀಗೆ ಮಾಡದೆ ನೆಂಟರೂ ಮನೆಯಲ್ಲಿ ಉಳಿಯಬೇಕು. ಅಕ್ಕಿಯೂ ಖರ್ಚಾಗಬಾರದು ಎಂದರೆ ಹೇಗೆ ಸಫಲವಾಗುವುದಿಲ್ಲವೋ ಹಾಗೆಯೇ ಕರ್ಮವನ್ನೂ ಮಾಡುತ್ತಿರಬೇಕು. ಜ್ಞಾನನಿಷ್ಠೆಯೂ ಇರಬೇಕು. ಎಂದರೆ ಅದೆಂದಿಗೂ ಫಲಕಾರಿಯಾಗುವುದಿಲ್ಲ. ಎಂಬ ಭಾವವು.

### ಭಾಮಿನಿ ಷಟ್ಪದಿ.

ಕೂಸಿನಲಿಕೃಪೆ ವಿಟನೊಡನೆ ರ ।
ತ್ಯಾಶೆ ಯೊಮ್ಮೆಗೆ ಕೂಡಿಬರಲಾ ।
ಯಾಸ ಜಾರಸ್ತ್ರೀಗೆ ಘಟಿಪಂತರಿವು ಕರ್ಮಗಳಂ ॥
ಧ್ಯಾಸದಿಂದಾಚರಿಸಲತ್ಯಾ ।
ಯಾಸ ತಪ್ಪದು ಬಳಿಕವುಗಳಿಂ ।
ದೂಷಿತನು ತಾನಾಗುತುಭಯ ಭ್ರಷ್ಟನಾಗುವನು ॥ ೪೩ ॥

**ಅವತಾರಿಕೆ;—** ಕರ್ಮ ಜ್ಞಾನಗಳೆರಡು ಒಬ್ಬನಲ್ಲಿ ಅಳವಡುವುದಿಲ್ಲವೆಂತಲೂ, ಕರ್ಮಜ್ಞಾನಗಳೆರಡರಲ್ಲಿ ನಿಷ್ಠೆಯುಳ್ಳವನು ಆ ಕರ್ಮ ಜ್ಞಾನಗಳ ಫಲಗಳನ್ನು ಹೊಂದದೆ ಭ್ರಷ್ಟನಾಗಿ ಅಧೋಗತಿಗಿಳಿಯುತ್ತಾನೆಂತಲೂ, ಮತ್ತು ಕರ್ಮ ಜ್ಞಾನಗಳೆರಡನ್ನು ಆಚರಿಸಲು ಯೋಗ್ಯವೆಂದು ಹೇಳುವವರು ಅರ್ಧ ಮೂಢರೆಂತಲೂ, ಹೇಳಿದಿರಿ. ಆದರೆ ಅಂತಹ ಅರ್ಧ ಮೂಢರು ಹೇಳುವ ವಚನಗಳನ್ನು ಕೇಳಿ ನಂಬುವ ಜನರೂ ಇರುತ್ತಾರಲ್ಲವೇ? ಅಂದರೆ ತಾವು ಹೇಳುವ ಸ್ವರೂಪ ಜ್ಞಾನವೇ ಮುಕ್ತಿಗೆ ಸಾಧನವೆಂಬ ವಾಕ್ಯವನ್ನು ಕೇಳಿದಂತೆ, ಆ ಅರ್ಧಮೂಢರ ವಾಕ್ಯವನ್ನು ಪ್ರಮಾಣ ಪೂರ್ವಕವಾಗಿ ಕೇಳುವ ಜನರೂ ಇರುತ್ತಾರಲ್ಲ? ಅರ್ಧ ಮೂಢರ ವಾಕ್ಯವನ್ನು ಪ್ರಮಾಣವಲ್ಲವೆಂದು ಯಾರೂ ಕೇಳಬಾರದಾಗಿತ್ತು. ಅನೇಕರು ಅವರ ವಾಕ್ಯಗಳನ್ನು ಶ್ರವಣಮಾಡುತ್ತಲೇ ಇರುವರೇಕೆ? ಎಂಬ ಪ್ರಶ್ನೆಗೆ ಬುದ್ಧಿವಂತರು ವೇದ ಪುರುಷನ ವಾಕ್ಯಗಳನ್ನು ಪ್ರಮಾಣವೆಂದರಿತು ಬಲಗಿವಿಯಿಂದ ಕೇಳುತ್ತಾರೆ. ಅರ್ಧಮೂಢರ ವಾಕ್ಯಗಳು ಅಪ್ರಮಾಣವೆಂದು ಎಡಗಿವಿಯಿಂದ ಕೇಳುತ್ತಾರೆಂಬ ಉತ್ತರವನ್ನು ಮುಂದಿನ ಶ್ಲೋಕದಲ್ಲಿ ಸೂಚಿಸುತ್ತಾರೆ.

## * ಸ್ರಗ್ವಿಣಿವೃತ್ತ.

**ವೇದಪುಂಸಾ ದ್ವಿತೀಯಾದ್ಭಯಂ ದುಂದುಭೌ ।**
**ವಾದಿತೇಸವ್ಯಕರ್ಣಾಂತಿಕೇ ಸಂತತಂ ।**
**ಜ್ಞಾನ ಕರ್ಮದ್ವಯಂ ಪಥ್ಯಮಿತ್ಯಜ್ಞವಾಕ್ ।**
**ಪುನರ್ವಾಮಶ್ರುತೇ ರಂತರಂಗಾಹತೇ ೪೩ ॥**

**ಪದಚ್ಛೇದ :-** ವೇದಪುಂಸಃ, ದ್ವಿತೀಯಾದ್ಭಯಂ, ದುಂದುಭೌ, ವಾದಿತೇ, ಸವ್ಯ, ಕರ್ಣಾಂತಿಕೇ, ಸಂತತಂ, ಜ್ಞಾನಕರ್ಮದ್ವಯಂ, ಪಥ್ಯ, ಇತಿ, ಅಜ್ಞವಾಕ್, ಪುನಃ, ವಾಮಶ್ರುತೇಃ, ಅಂತರಂ, ಗಾಹತೇ

**ಟೀಕೆ ;-** ಸವ್ಯ = ಬಲ । ಕರ್ಣಾಂತಿಕೇ = ಕಿವಿಯ ಹತ್ತಿರದಲ್ಲಿ । ಸಂತತಂ = ನಿರಂತರವೂ । ದ್ವಿತೀಯಾದ್ಭಯಂ = ಭೇದಜ್ಞಾನದಿಂದ ಭಯವು । ಇತಿ = ಈ ಪ್ರಕಾರವಾಗಿ । ವೇದಪುಂಸಃ = ವೇದಪುರುಷನ । ದುಂದುಭೌ = ನಗಾರಿಯು । ವಾದಿತೇ = ಬಾರಿಸಲಾಗಿ । ಜ್ಞಾನ = ಬ್ರಹ್ಮಾತ್ಮರ ಅಭೇದದ

---

* ಪ್ರತಿಯೊಂದು ಚರಣದಲ್ಲಿ ನಾಲ್ಕು ರಗಣಗಳಿದ್ದು ಏಳನೇ ಅಕ್ಷರಕ್ಕೆ ಯತಿಯು ಇದ್ದುದಾದರೆ ಸ್ರಗ್ವಿಣಿ ವೃತ್ತವಾಗುತ್ತದೆ.

ತಿಳಿವು । ಕರ್ಮ = ನಿತ್ಯನೈಮಿತ್ತಿಕಾದಿ ಕರ್ಮ । ದ್ವಯಂ = ಎರಡನ್ನು । ಪಥ್ಯಂ= ದಾರಿಯು । ಇತಿ = ಈ ರೀತಿಹೇಳುವ । ಅಜ್ಞವಾಕ್ = ಅಜ್ಞಾನಿಯವಚನವು । ( ಅರ್ಧಮೂಢರಮಾತು ) ಪುನಃ = ಮತ್ತು । ವಾಮಶ್ರುತೇ = ಎಡಗಿವಿಯ । ಅಂತರಂ = ಒಳಗೆ । ಗಾಹತೇ = ಪ್ರವೇಶಿಸುತ್ತದೆ ।

**ತಾತ್ಪರ್ಯ ;- " ದ್ವಿತೀಯಾದ್ಭಯಂ ಭವತಿ "** ಭೇದಜ್ಞಾನದಿಂದ ದುಃಖವು ಪ್ರಾಪ್ತವಾಗುತ್ತದೆಂದು ವೇದ ಪುರುಷನು ನಗಾರಿಯನ್ನು ಬಾರಿಸಲು ಆ ಶಬ್ದವು ಬಲಗಿವಿಯಲ್ಲಿ ಬಂಧುರವಾಗಿ ಸೇರಿಕೊಳ್ಳುತ್ತದೆ. ಕರ್ಮ ಜ್ಞಾನಗ ಳೆರಡು ಮುಕ್ತಿಗೆ ಮಾರ್ಗವೆಂದು ಹೇಳುವ ಅಜ್ಞಾನಿಯ ವಚನಗಳು ಎಡಗಿವಿ ಯಲ್ಲಿ ಮಾತ್ರ ಸೇರುತ್ತವೆ.

ವಿಶೇಷಾರ್ಥ :- ವೇದಪುರುಷನಾದ ಪರಮಾತ್ಮನು ತನ್ನದಾದ ಶ್ರುತಿ ವಾಣಿಯಿಂದ " **ದ್ವಿತೀಯಾದ್ಭಯಂ ಭವತಿ** " ಭೇದಜ್ಞಾನವು ದುಃಖವನ್ನುಂಟು ಮಾಡುತ್ತದೆ. " **ನೇಹನಾನಾಸ್ತಿ ಕಿಂಚನ** " ಬ್ರಹ್ಮನ ಹೊರತಾಗಿ ಮತ್ತೇನೂ ಕಿಂಚಿತ್ತಾದರೂ, ಇರುವುದಿಲ್ಲ. " **ಮೃತ್ಯೋಸ್ಸಮೃತ್ಯು ಮಾಪ್ನೋತಿ ಯ ಇಹ ನಾನೇವ ಪಶ್ಯತಿ** " ಭೇದ ದರ್ಶಿಯು ಮೃತ್ಯುವಿನಿಂದ ಮೃತನಾಗುತ್ತಾನೆ. ಎಂದು ನಗಾರಿಯಂತೆ ಬಲವಾಗಿ ಧ್ವನಿಗೈಯ್ಯುತ್ತಿರಲು ಆ ಶಬ್ದವು ಬಲಗಿವಿಯಲ್ಲಿ ಸಪ್ರಮಾಣವಾಗಿ ಪ್ರವೇಶವಾಗುತ್ತದೆ. ಆ ನಗಾರಿಯ ಶಬ್ದವಿಂತಿರಲು ಕರ್ಮ ಜ್ಞಾನ ಸಮುಸಮುಚ್ಚಯ ವಾದಿಗಳಾದ ಅಜ್ಞಾನಿಗಳು ನುಡಿಯುವ ವಾಕ್ಯಗಳು ಅಪ್ರಮಾಣವೆಂಬ ತಿಳುವಳಿಕೆಯೊಡನೆ ಎಡಗಿವಿಯಲ್ಲಿ ಮಾತ್ರ ಪ್ರವೇಶವಾಗುತ್ತವೆ. ಅಂದರೆ ವಿವೇಕಿಯ ಹೃದಯದಲ್ಲಿ ಅರ್ಧಮೂಢರ ವಾಕ್ಯಗಳು ಪ್ರವೇಶಿಸುವುದಿಲ್ಲ ಅರ್ಧ ಮೂಢರ ವಾಕ್ಯಗಳನ್ನು ನಂಬುವ ಜನರಿದ್ದರೂ, ಆ ಜನರು ಪೂರ್ಣ ಮೂಢರಾಗಿರುತ್ತಾರೆಂದು ತಿಳಿಯಬೇಕು. ಅಂದರೆ ಕರ್ಮಜ್ಞಾನ ಸಮ ಸಮು ಚ್ಚಯವಾದಿಯ ಮಾತುಗಳು ಏನೂ ಅರಿಯದ ದಡ್ಡರು ಮಾತ್ರ ಕೇಳುತ್ತಾರೆಂಬ ಭಾವವು.

### ಭಾಮಿನಿ ಷಟ್ಪದಿ.

ಭೇದಜ್ಞಾನವು ದುಃಖವೆನ್ನುತ ।
ವೇದ ಪುರುಷನು ಬಲಗಿವಿಗೆ ತಾಂ ।
ಬೋಧಿಸುತ್ತಂ ಭೇರಿಯಂದದಿ ಶಬ್ದಗೈಯ್ಯುತಿರೆ ॥

ಭೇದ ಮತಿಗಳು ಜ್ಞಾನ ಮೇಣ್ ನಿ।
ತ್ಯಾದಿ ಕರ್ಮಗಳಿಂದ ಮುಕುತಿಯು।
ಸಾಧಿಸೆಂಬುವ ವಾಕ್ಯವೆಡಗಿವಿಯಲ್ಲಿ ಸೇರುವುದು ॥ ೪೩ ॥

**ಅವತಾರಿಕೆ ;-** ಕರ್ಮ ಜ್ಞಾನ ಸಮ ಸಮುಚ್ಚಯ ವಾದಿಯ ಮಾತು ಗಳು ಯಥಾರ್ಥವಾದವುಗಳಲ್ಲವೆಂತಲೂ, ಆ ವಾಕ್ಯಗಳನ್ನು ದಡ್ಡರು ಮಾತ್ರ ಕೇಳುತ್ತಾರೆಂತಲೂ, ಹೇಳಿದಿರಿ. ಆದರೆ ಕರ್ಮಜ್ಞಾನ ಕ್ರಮ ಸಮುಚ್ಚಯ ವಾದಿಯು ಹೇಳುವ ರೀತಿಯಾವುದು ? ಎಂಬ ಪ್ರಶ್ನೆಗೆ ಕರ್ಮಜ್ಞಾನ ಕ್ರಮ ಸಮುಚ್ಚಯ ವಾದಿಯು ಜ್ಞಾನೋತ್ಪತ್ತಿಗೆ ಕರ್ಮ, ಭಕ್ತಿ, ಯೋಗಾದಿಗಳು ಕಾರಣವೆಂದು, ಹೇಳುತ್ತಾನೆಂಬ ಉತ್ತರವನ್ನು ಮುಂದಿನ ಶ್ಲೋಕದಲ್ಲಿ ತೋರಿಸುತ್ತಾರೆ.

## * ದೋಧಕ ವೃತ್ತ.

**ವೇತ್ತಿ ಚಿತಿ ಕ್ರಮ ಸಾಧನ ರೂಪಾ।**
**ತ್ಕರ್ಮಸು ಭಕ್ತಿ ವಿರಾಗ ಯಮಾನ್ ಯಃ।**
**ಕೋರಕ ಕುಟ್ಮಲ ಪುಷ್ಪ ಶಲಾಟೂ।**
**ನ್ವಾತಿ ಫಲೇ ಸಮುಚ್ಚಯ ಕಾರೀ ॥ ೪೪ ॥**

**ಪದಚ್ಛೇದ ;—** ವೇತ್ತಿ, ಚಿತಿ, ಕ್ರಮ, ಸಾಧನರೂಪಾತ್, ಕರ್ಮ, ಸುಭಕ್ತಿ, ವಿರಾಗ, ಯಮಾನ್, ಯಃ, ಕೋರಕ, ಕುಟ್ಮಲ, ಪುಷ್ಪ, ಶಲಾಟೂನ್, ವಾತಿ, ಫಲೇ, ಸಃ, ಸಮುಚ್ಚಯಕಾರೀ.

**ಟೀಕೆ :—** ಚಿತಿ = ಜ್ಞಾನದಲ್ಲಿ । ಕರ್ಮ = ನಿತ್ಯನೈಮಿತ್ತಿಕಾದಿ ಕರ್ಮಗಳು । ಸುಭಕ್ತಿ = ಉತ್ತಮವಾದ ಭಕ್ತಿಯು । ವಿರಾಗ = ವಿರತಿಯು । ಯಮಾನ್ = ಯಮನಿಯಮಾದಿ ಯೋಗಗಳು । ಕ್ರಮ = ಪರಂಪರ । ಸಾಧನರೂಪಾನ್ = ಹೇತುಗಳನ್ನಾಗಿ । ವೇತ್ತಿ = ತಿಳಿಯುವನು । ಯಃ = ಯಾವನು। ಕೋರಕ = ಮುಚ್ಚಿದ ಮೊಗ್ಗೆ । ಕುಟ್ಮಲ = ಬಿಚ್ಚಿದಮೊಗ್ಗೆ । ಪುಷ್ಪ = ಹೂವು । ಶಲಾಟೂನ್ = ಮಿಡಿಗಳನ್ನು । ಫಲೇ = ಹಣ್ಣಿನಲ್ಲಿ । ವಾತಿ = ವಹಿಸುವನು । ಸಃ = ಅವನು । ಸಮುಚ್ಚಯಕಾರೀ = ಜ್ಞಾನಕರ್ಮ ಕ್ರಮ ಸಮುಚ್ಚಯವಾದಿಯು.

* ಪ್ರತಿಯೊಂದು ಚರಣದಲ್ಲಿ ಮೂರು ಭಗಣಗಳೂ, ಎರಡು ಗುರುಗಳಿದ್ದು ಏಳನೇ ಅಕ್ಷರಕ್ಕೆ ಯತಿಯು ಇದ್ದುದಾದರೆ ದೋಧಕ ವೃತ್ತವಾಗುತ್ತದೆ.

**ತಾತ್ಪರ್ಯ** :— ಫಲೋತ್ಪತ್ತಿಗೆ ಮೊದಲು ಮುಚ್ಚಿದ ಮೊಗ್ಗೆ, ನಂತರ ಬಿಚ್ಚಿದಮೊಗ್ಗೆ, ಮಿಡಿ, ಕಾಯಿಗಳೇ ಕಾರಣವಾದಂತೆ, ಜ್ಞಾನೋತ್ಪತ್ತಿಗೆ ನಿತ್ಯ ನೈಮಿತ್ತಿಕಾದಿ ಕರ್ಮಗಳು, ಶ್ರವಣಾದಿ ನವವಿಧ ಭಕ್ತಿಗಳು, ವೈರಾಗ್ಯ, ಯಮಾದಿ ಅಷ್ಟಾಂಗ ಯೋಗಗಳು, ಇವು ಪರಂಪರ ಕಾರಣಗಳಾಗಿರುತ್ತವೆ. ಎಂದು ಜ್ಞಾನ ಕರ್ಮ ಕ್ರಮ ಸಮುಚ್ಚಯ ವಾದಿಯು ತಿಳಿಸುತ್ತಾನೆ.

**ವಿಶೇಷಾರ್ಥ** ;— ಜ್ಞಾನಕರ್ಮ ಕ್ರಮ ಸಮುಚ್ಚಯ ವಾದಿಯ ಸಿದ್ಧಾಂತವೇನೆಂದರೆ, ಸ್ವರೂಪ ಜ್ಞಾನವು ತನಗೆ ಉಂಟಾಗಬೇಕಾದರೆ ಪ್ರಥಮದಲ್ಲಿ ನಿತ್ಯ ನೈಮಿತ್ತಿಕಾದಿ ಕರ್ಮಗಳಲ್ಲಿ ನಿಷ್ಣಾತನಾಗಿರಬೇಕು. ಅನಂತರ ಶ್ರವಣ, ಕೀರ್ತನ ಸ್ಮರಣಾದಿ ಒಂಭತ್ತುವಿಧ ಭಕ್ತಿಗಳಲ್ಲಿ ತತ್ಪರನಾಗಬೇಕು. ಬಳಿಕ ಇಹಪರ ವಿಷಯಾದಿಗಳಲ್ಲಿ ವಿರತಿಯು ನೆಲೆಗೊಳ್ಳಬೇಕು. ಅನಂತರ ಯಮ ನಿಯಮಾದಿ ಯೋಗಾಂಗಗಳನ್ನು ಸಾಧಿಸಬೇಕು. ಅನಂತರ ತನಗೆ ಸ್ವರೂಪಜ್ಞಾನವು ಉಂಟಾಗುತ್ತದೆ. ಸ್ವರೂಪಜ್ಞಾನ ಉಂಟಾಗುವುದಕ್ಕೆ ನಿತ್ಯಾದಿ ಕರ್ಮಗಳು ಮೊದಲುಗೊಂಡು ಯೋಗಾಂತಮಾದವುಗಳೆಲ್ಲವೂ ಕ್ರಮಕ್ರಮವಾಗಿ ಕಾರಣಗಳಾಗಿರುತ್ತವೆ. ಅಂದರೆ ಪರಂಪರ ಸಾಧನಗಳಾಗಿರುತ್ತವೆ, ಉಪಮಾನವು ಫಲೋತ್ಪತ್ತಿಗೆ ಮೊದಲು ಮುದುರಿದ ಮೊಗ್ಗೆ, ನಂತರ ಚದರಿದ ಮೊಗ್ಗೆ, ಆಮೇಲೆ ಅರಳಿದ ಪುಷ್ಪವಾಗಿ ನಂತರ ಆ ಪುಷ್ಪವು ಮಿಡಿಯಾಗಿ, ಆಮೇಲೆ ಕಾಯಿಯಾಗಿ, ದೋರೆಹಣ್ಣಾಗಿ ಆ ಬಳಿಕ ಫಲವಾಗುತ್ತದೆ. ಫಲಕ್ಕೆ ಮುದುರಿದ ಮೊಗ್ಗೆಮೊದಲು ಗೊಂಡು ದೋರೆಹಣ್ಣಿನವರೆವಿಗೂ ಪರಂಪರ ಸಾಧನ (ಕಾರಣ) ವಾಗಿರುತ್ತದೆ. ಇದರಂತೆ ಜ್ಞಾನೋತ್ಪತ್ತಿಗೆ ನಿತ್ಯಕರ್ಮಾದಿ ಯೋಗಾಂತಮಾದ ಸಾಧನಗಳೆಲ್ಲವೂ ಕಾರಣಗಳಾಗಿರುತ್ತವೆ ಎಂದು ಜ್ಞಾನ ಕರ್ಮ ಕ್ರಮ ಸಮುಚ್ಚಯ ವಾದಿಯು ತಿಳಿಯುತ್ತಾನೆ. ಅಂದರೆ ಈ ವಾದಿಯು ಮೊದಲು ಚಿತ್ತ ಶುದ್ಧಿಯಾದ ಬಳಿಕ ಜ್ಞಾನವು ಉಂಟಾಗುತ್ತದೆಂದು ತಿಳಿಯುತ್ತಾನೆ. ಜ್ಞಾನ ಕರ್ಮ ಕ್ರಮ ಸಮುಚ್ಚಯ ವಾದಿಯು ಜ್ಞಾನವುಂಟಾದಮೇಲೆ ನಿತ್ಯಾದಿ ಕರ್ಮಗಳನ್ನಾಗಲೀ ಯೋಗವನ್ನಾಗಲೀ, ಅಪೇಕ್ಷಿಸುವುದಿಲ್ಲ. ನದಿಯನ್ನು ದಾಂಟಿದಮೇಲೆ ಅರಿಗೋಲನ್ನಪೇಕ್ಷೆ ಮಾಡದಿರುವಂತೆ, ಜ್ಞಾನವುಂಟಾದಮೇಲೆ ನಿತ್ಯ ಕರ್ಮಾದಿ ಸಾಧನಗಳನ್ನು ಜ್ಞಾನಕರ್ಮ ಕ್ರಮ ಸಮುಚ್ಚಯ ವಾದಿಯು ಅಪೇಕ್ಷಿಸುವುದಿಲ್ಲ. ಈ ಕ್ರಮ ಸಮುಚ್ಚಯ ವಾದಿಯ ಸಿದ್ಧಾಂತವನ್ನು ವೇದಾಂತಿಗಳು ಅಂಗೀಕರಿಸುತ್ತಾರೆ. ಆದರೆ ಜ್ಞಾನಕರ್ಮ ಸಮ ಸಮುಚ್ಚಯವಾದಿಯ ಸಿದ್ಧಾಂತವನ್ನು ಮಾತ್ರ ವೇದಾಂತಿಗಳು ಅಂಗೀಕರಿಸುವುದಿಲ್ಲ. ಅವರನ್ನು ಅರಹುಚ್ಚರೆಂದು ತೀರ್ಮಾನಿಸಿತ್ತಾರೆ. ಜ್ಞಾನಕರ್ಮ ಕ್ರಮ ಸಮುಚ್ಚಯ ವಾದಿಯು ಕರ್ಮ ಭಕ್ತಿ ಮುಂತಾ

ಆದೂ ಸಹ ಸಂಬಂಧ ವಿಲ್ಲವೊ ? ಎಂಬ ಪ್ರಶ್ನೆಗೆ ಮುಕ್ತಿಯೂನನಗೆ ಸಂಬಂಧವಿಲ್ಲ ಬಂಧವೂ ಸಂಬಂಧವಿಲ್ಲ ಪಾಪಪುಣ್ಯ ವಿಧಿನಿಷೇಧ ಮುಂತಾದ ದ್ವಂದ್ವಗಳ ಸಂಬಂಧವೇ ನನಗಿರುವುದಿಲ್ಲ ಅವೆಲ್ಲವೂ ಮನೋವಿಕಾರದಿಂದ ಹುಟ್ಟಿದವುಗಳು ನಾನು ಆ ಮನಸ್ಸಿಗೆ ಬೇರೆಯಿದ್ದೇನೆಂಬ ಉತ್ತರವನ್ನು ಮುಂದಿನಶ್ಲೋಕದಲ್ಲಿ ಸೂಚಿಸುತ್ತಾರೆ.

## * ಶಾರ್ದೂಲವಿಕ್ರೀಡಿತಾವೃತ್ತ.

ಶ್ರೇಯಃಕಿಲ್ಬಿಷತಾಪವಿತ್ರ ಶುಚಿತಾ ಚೋಪಾಸನೋಪಾಸ್ಯತಾ ।
ಸ್ವರ್ಗಾಧೋಗತಿತಾ ನಿಷೇಧ ವಿಧಿತಾ ತತ್ತ್ವಂಚ ದೃಗ್ದೃಶ್ಯತಾ ।
ವಿದ್ಯಾ ವಿಸ್ಮೃತಿತಾಪವರ್ಗ ಭವತಾ ಮಾಯಾ ಪರಬ್ರಹ್ಮತಾ ।
ಸರ್ವಂ ದ್ವಂದ್ವಮಿದಂ ಮನೋವಿಕೃತಿಜಂ ಯೋನ್ಯಸ್ತಯೋಸ್ಸೋಸ್ಮ್ಯಹಂ ॥ ೭೦ ॥

ಪದಚ್ಛೇದ ;— ಶ್ರೇಯಃಕಿಲ್ಬಿಷತಾ, ಅಪವಿತ್ರಶುಚಿತಾ, ಚ, ಉಪಾಸನಃ, ಉಪಾಸ್ಯತಾ, ಸ್ವರ್ಗಃ, ಅಧೋಗತಿತಾ, ನಿಷೇಧವಿಧಿತಾ, ತತ್, ತ್ವಂ, ದೃಕ್ ದೃಶ್ಯತಾ ವಿದ್ಯಾವಿಸ್ಮೃತಿತಾ, ಅಪವರ್ಗಭವತಾ, ಮಾಯಾಪರಬ್ರಹ್ಮತಾ, ಸರ್ವಂ, ದ್ವಂದ್ವಂ, ಇದಂ, ಮನಃ, ವಿಕೃತಿಜಂ, ಯಃ, ಅನ್ಯಃ, ತಯೋಃ, ಸಃ, ಅಸ್ಮಿ, ಅಹಂ,

ಟೀಕೆ ;= ಶ್ರೇಯಃಕಿಲ್ಬಿಷತಾ = ಪುಣ್ಯಪಾಪವು । ಅಪವಿತ್ರಶುಚಿತಾ = ಅಶುಚಿಯು ಶುಚಿಯು । ಉಪಾಸನೋಪಾಸ್ಯತಾ = ಅನುಷ್ಠಾನ ಅನುಷ್ಠೇಯತ್ವವು । ಸ್ವರ್ಗಾಧೋಗತಿತಾ = ಸ್ವರ್ಗನರಕಗತಿತ್ವವು । ನಿಷೇಧ ವಿಧಿತಾ = ಬಿಡುವುದುಮಾಡುವ ತನತ್ವವು । ತತ್ = ತತ್ಪದವು । ತ್ವಂ = ತ್ವಂಪದವು । ಚ = ಮತ್ತು । ದೃಗ್ದೃಶ್ಯತಾ = ಸಾಕ್ಷೀಸಾಕ್ಷ್ಯತ್ವವು । ವಿದ್ಯಾವಿಸ್ಮೃತಿತಾ = ಅರಿಯುವಿಕೆ ಮರೆಯುವಿಕೆಯತನ । ಅಪವರ್ಗಭವತಾ = ಮೋಕ್ಷ ಬಂಧತ್ವವು । ಮಾಯಾಪರಬ್ರಹ್ಮತಾ = ಮಾಯೆಯು ಪರಬ್ರಹ್ಮವು । ಇದಂ = ಈ । ಸರ್ವಂ = ಸಮಸ್ತ । ದ್ವಂದ್ವಂ = ಭೇದವು । ಮನಃ = ಮನಸ್ಸಿನ । ವಿಕೃತಿಜಂ = ವಿಕಾರದಿಂದಜನಿಸಿದ್ದು । ತಯೋಃ = ಆ ದ್ವಂದ್ವಗಳಿಗೆ । ಅನ್ಯಃ = ಪೃಥಕ್ಕಾದವನು । ಯಃ = ಯಾವನೋ । ಸಃ = ಅವನು । ಅಹಂ = ನಾನು । ಅಸ್ಮಿ = ಇದ್ದೇನೆ ।

---

* ನೇ ಶ್ಲೋಕದ ಛಂದಸ್ಸನ್ನು ನೋಡಿ.

ತಾತ್ಪರ್ಯ :- ಪುಣ್ಯಪಾಪಗಳು, ಪವಿತ್ರಾಪವಿತ್ರಗಳು, ಅನುಷ್ಠಾನಾನುಷ್ಠೇಯಗಳು, ಸ್ವರ್ಗನರಕಗಳು, ವಿಧಿನಿಷೇಧಗಳು, ತತ್ತ್ವಂಪದಗಳು, ಮತ್ತುಸಾಕ್ಷೀಸಾಕ್ಷ್ಯತ್ವಗಳು, ಅರಿವುಮರವೆಗಳು, ಬಂಧಮೋಕ್ಷಗಳು, ಮಾಯಾಪರಬ್ರಹ್ಮ ಈ ಮುಂತಾದ ಸಮಸ್ತಭೇದಗಳು ಮನೋವಿಕಾರದಿಂದ ಹುಟ್ಟಿದವುಗಳು. ಈ ದ್ವಂದ್ವಗಳಿಗೆ ಬೇರೆಯಾದವನು ಯಾವನೋ ಅವನೇ ನಾನಿರುವೆನು.

ವಿಶೇಷಾರ್ಥ :- ನಾಮರೂಪಗಳನ್ನು ಹಿಡಿದುಕೊಂಡು ಪ್ರತ್ಯಕ್ಷ ಪರೋಕ್ಷ ವ್ಯವಹಾರಕ್ಕೊಳಪಟ್ಟ ಸಮಸ್ತ ಭೇದಗಳೆಲ್ಲವೂ ಮನೋವಿಕಾರದಿಂದ ಹುಟ್ಟಿರುತ್ತವೆ. ಅಂದರೆ ಸಮಸ್ತ ಭೇದಗಳೆಲ್ಲವೂ ಮನಸ್ಸಿನಸಂಕಲ್ಪದಿಂದಲೇ ಜನಿಸಿರುತ್ತವೆ.

ನಾನು ಪುಣ್ಯಕಾರ್ಯಗಳಲ್ಲಿ ಅಥವಾ ಪಾಪಕಾರ್ಯಗಳಲ್ಲಿ ಪ್ರವರ್ತಿಸುತ್ತೇನೆಂದು ಸಂಕಲ್ಪಿಸಿಕೊಳ್ಳುವುದು ಮನಸ್ಸಿನ ಕೆಲಸವಾಗಿರುತ್ತದೆ. ಆ ಪುಣ್ಯಪಾಪಕಾರ್ಯಗಳಿಗೆ ತಕ್ಕ ಫಲಗಳಾದ ಸುಖದುಃಖಗಳನ್ನು ನಾನು ಅನುಭವಿಸುತ್ತೇನೆಂಬುದು ಸಹ ಮನಸ್ಸಿನ ಕೆಲಸವಾಗಿರುತ್ತದೆ.

ಇದರಂತೆ ಮೈಲಿಗೆಯಾಯಿತು, ಮಡಿಯಾಯಿತು ಎಂಬುದೂ, ಮನೋಧರ್ಮವೆ. ಮತ್ತು ಇದು ಉಪಾಸ್ಯಮೂರ್ತಿಯು, ನಾನು ಉಪಾಸನೆಮಾಡುವವನು ಎಂಬುದು ಮನೋವಿಕಾರವೆ.

ಸ್ವರ್ಗವು, ನರಕವು, ಇದು ಮಾಡತಕ್ಕದ್ದಾದ ವಿಧಿಕರ್ಮವು, ಇದುಮಾಡಬಾರದ ನಿಷಿದ್ಧಕರ್ಮವು. ಇದು ದೃಕ್ಕು. ಇದು ದೃಶ್ಯ, ಇದು ಜ್ಞಾನ, ಇದು ಅಜ್ಞಾನ, ಇದು ಮುಕ್ತಿಯು, ಇದು ಬಂಧವು, ಇದು ಮಾಯೆಯು ಇದು ಪರಬ್ರಹ್ಮವು, ಇದು ತತ್ಪದವು, ಇದು ತ್ವಂಪದವು, ಮತ್ತು ನಾನು ನೀನು, ಅದು, ಇದು, ಇತ್ಯಾದಿ ಭೇದವ್ಯವಹಾರವೆಲ್ಲವೂ ಮನೋವಿಕಾರವೆ. ಮನಸ್ಸಿನಕೆಲಸವೆ.

ಮೇಲ್ಕಂಡ ಸಮಸ್ತ ಭೇದ ವ್ಯವಹಾರದಲ್ಲಿ ವರ್ತಿಸುವಮನಸ್ಸಿಗೇನೇ ಆ ಭೇದ ವ್ಯವಹಾರದಿಂದುಂಟಾಗುವ ಶುಭಾಶುಭ ಫಲಗಳು ಸಂಬಂಧವಾಗುತ್ತವೆ. ನಾನು ಆ ಮನಸ್ಸಿಗೆ ಭಿನ್ನನಾಗಿ ಅದ್ವಿತೀಯಸ್ವರೂಪನಾಗಿರುವೆನು. ಅಂದರೆ ಪರಿಶುದ್ಧಾತ್ಮನೆ ನಾನಿದ್ದೇನೆ. ನನಗೆ ಬಂಧಮೋಕ್ಷಗಳ ಸಂಬಂಧವಿರುವುದಿಲ್ಲ ಎಂಬಭಾವವು.

## ಭಾಮಿನಿ ಷಟ್ಪದಿ.

ಅರಿವುಮರವೆಯು ಬ್ರಹ್ಮಮಾಯೆಯು ।
ದುರಿತಪುಣ್ಯವು ವಿಧಿನಿಷೇಧವು ।
ನರಕಸ್ವರ್ಗವು ತತ್ವಮೌಪಾಸನೆಯು ದೃಗ್ದೃಶ್ಯ ॥
ಪರಮಮೋಕ್ಷವು ಬಂಧವೆಂಬೀ
ತೆರದಸರ್ವವು ಮಾನಸಾಂಕುರ ।
ವಿರುವವಾಮನ ಕನ್ಯವಾವುದೋ ನಾನದಾಗಿಹೆನು ॥ ೭೦ ॥

ಅವಕಾರಿಕೆ ;- ಪಾಪಪುಣ್ಯ ಬಂಧಮೋಕ್ಷಾದಿ ದ್ವಂದ್ವಗಳೆಲ್ಲವೂ ಮನಸ್ಸಿಗೆ ಸಂಬಂಧವಾದವುಗಳೆಂತಲೂ, ಆ ಮನಸ್ಸಿಗೆಬೇರೆಯಾದ ಅದ್ವಿತೀಯಆತ್ಮನೇ ನಾನಿದ್ದೇನೆಂತಲೂ, ಹೇಳಿದಿರಿ. ಆದರೆ ಪಾಪಪುಣ್ಯಾದಿಗಳು ಪ್ರಾಪ್ತಿಯಾಗುವುದು ಯಾವುದರಿಂದ ? ಮತ್ತು ಆ ಪಾಪಪುಣ್ಯಾದಿಗಳು ನಿವೃತ್ತಿಯಾಗುವುದು ಯಾವುದರಿಂದ ? ಅಂದರೆ ಅವುಗಳ ಪ್ರಾಪ್ತಿನಿವೃತ್ತಿಗಳಿಗೆ ಹೇತುವೇನು ? ಎಂಬ ಪ್ರಶ್ನೆಗೆ, ತನ್ನಸ್ವರೂಪದ ಅಜ್ಞಾನದಿಂದ ಪಾಪಪುಣ್ಯಾದಿಗಳು ಪ್ರಾಪ್ತಿಯಾಗುತ್ತವೆಂತಲೂ, ತನ್ನಸ್ವರೂಪ ಜ್ಞಾನದಿಂದ ಅವುಗಳು ನಿವೃತ್ತಿಯಾಗುತ್ತವೆಂತಲೂ, ಮುಂದಿನ ಶ್ಲೋಕದಲ್ಲಿ ಉತ್ತರಿಸುತ್ತಾರೆ.

## * ಶೇಷವೃತ್ತ.

ವಿಮೋಹಾದ್ವೃಷಾಘದ್ವಯೋರ್ಭೋಗತಾ ।
ವಿವೇಕಾದ್ವೃಷಾಘದ್ವಯೋರ್ಯೋಗತಾ ।
ವಿಬೋಧಾದ್ವೃಷಾಘದ್ವಯೋಸ್ತ್ಯಾಗತಾ ।
ವಿಪಾಕಾಜ್ಜನೀನಾಂ ಕ್ರಮಾದಾಗತಾ ॥ ೭೦ ॥

ಪದಚ್ಛೇದ ;- ವಿಮೋಹಾತ್, ವೃಷಾಘದ್ವಯೋಃ, ಭೋಗತಾ, ಅವಿವೇಕಾತ್. ವೃಷಾಘದ್ವಯೋಃ, ಯೋಗತಾ, ವಿಬೋಧಾತ್, ವೃಷಾಘದ್ವಯೋಃ, ತ್ಯಾಗತಾ, ವಿಪಾಕಾತ್, ಜನೀನಾಂ, ಕ್ರಮಾತ್, ಆಗತಾ,

ಟೀಕೆ := ವಿಮೋಹಾತ್ = ಅಜ್ಞಾನದಿಂದ । ವೃಷಾಘದ್ವಯೋಃ = ಪುಣ್ಯಪಾಪಗಳೆರಡರ । ಭೋಗತಾ = ಭೋಗವು । ಅವಿವೇಕಾತ್ = ಭ್ರಾಂತಿಯಿಂದ । ವೃಷಾಘದ್ವಯೋಃ = ಪುಣ್ಯಪಾಪಂಗಳೆರಡರ । ಯೋಗತಾ = ಸಂಬಂಧವು । ವಿಬೋಧಾತ್ = ಅಧಿಷ್ಠಾನವಾದ ತನ್ನಸ್ವರೂಪಜ್ಞಾನದಿಂದ । ವೃಷಾಘದ್ವಯೋಃ = ಪುಣ್ಯಪಾಪಂಗಳೆರಡರ । ತ್ಯಾಗತಾ = ನಿವೃತಿಯು । ಜನೀನಾಂ = ಜನರಿಗೆ । ವಿಪಾಕಾತ್ = ಪರಿಪಕ್ವತೆಯಿಂದ । ಕ್ರಮಾತ್ = ಹೀಗೆ ಹೇಳಲ್ಪಟ್ಟ ಕ್ರಮದಿಂದ। ಆಗತಾ = ಬಂದಿರುವುದು ।

ತಾತ್ಪರ್ಯ — ತನ್ನಸ್ವರೂಪದ ಅಜ್ಞಾನದಿಂದ ಪುಣ್ಯಪಾಪಗಳಿಗೆ ಫಲಗಳಾದ ಸುಖದುಃಖರೂಪದ ಭೋಗವು ಭ್ರಮೆಯಿಂದುಂಟಾಗಿರುತ್ತದೆ. ಅಧಿಷ್ಠಾನಸ್ವರೂಪವಾದ ಆತ್ಮಜ್ಞಾನದಿಂದ ಆ ಪುಣ್ಯಪಾಪಗಳಿಗೆ ಫಲಗಳಾದ ಸುಖದುಃಖಗಳು ಪರಿಪಕ್ವಹೃದಯಸ್ಥರಾದ ಜನರಿಗೆ ನಿವೃತ್ತಿಯಾಗುತ್ತವೆ, ಪುಣ್ಯ

* ೧೪ ನೇ ಶ್ಲೋಕದ ಛಂದಸ್ಸನ್ನು ನೋಡಿ.

ಪಾಪಗಳು ಪ್ರಾಪ್ತಿಯಾಗುವ ಮತ್ತು ನಿವೃತ್ತಿಯಾಗುವ ಕ್ರಮವು (ಹೇತುವು) ಇದೆ.

ವಿಶೇಷಾರ್ಥ ;— ಮನುಜರಿಗೆ ಪುಣ್ಯಪಾಪಗಳೂ ಆ ಪುಣ್ಯಪಾಪಗಳಿಗೆ ತಕ್ಕ ಫಲಗಳಾದ ಸುಖದುಃಖಗಳೂ, ಮುಂತಾದ ದ್ವಂದ್ವಗಳೆಲ್ಲವೂ ತನ್ನ ಸ್ವರೂಪಜ್ಞಾನವಿಲ್ಲದ್ದರಿಂದ ಭ್ರಾಂತಿಮೂಲಕವಾಗಿ ಪ್ರಾಪ್ತಿಯಾಗುತ್ತದೆ. ಸಾಧನ ಚತುಷ್ಟಯ ಸಂಪನ್ನತ್ವದಿಂದ ಪರಿಶುದ್ಧ ಅಂತಃಕರಣ ದೊಡನೆ ಸದ್ಗುರುಸನ್ನಿಧಿಯಂ ಸೇರಿ ಆಗುರುವಿನಿಂದ ನಾಮರೂಪಗಳಿಗಧಿಷ್ಠಾನವಾದ ತನ್ನ (ಆತ್ಮನ) ಸ್ವರೂಪಜ್ಞಾನವಮಾಡಿಕೊಂಡವರಿಗೆ ಆ ಪುಣ್ಯಪಾಪಗಳೂ ಅವುಗಳಿಗೆ ತಕ್ಕಫಲಗಳಾದ ಸುಖದುಃಖಗಳು ಮುಂತಾದ ದ್ವಂದ್ವಗಳೆಲ್ಲವೂ, ನಿವೃತ್ತಿಯಾಗುತ್ತವೆ. ತನ್ನಸ್ವರೂಪಜ್ಞಾನವಾಗದಿದ್ದರೆ ಅವುನಿವೃತ್ತಿಯಾಗುವುದಿಲ್ಲ. ಅಂದರೆ ಬಂಧವು ಪ್ರಾಪ್ತಿಯಾಗುವುದಕ್ಕೆ ತನ್ನಸ್ವರೂಪದಅಜ್ಞಾನವೇ ಹೇತುವಾಗಿದೆ. ಆ ಬಂಧದನಿವೃತ್ತಿಗೆ ತನ್ನಸ್ವರೂದಜ್ಞಾನವೇಸಾಧನವಾಗಿದೆ ಎಂಬಭಾವವು.

ವಾರ್ಧಿಕ ಷಟ್ಪದಿ.

ಮರವೆಯಿಂದಲಿ ಪುಣ್ಯಪಾಪಗಳು ಸಂಭವಿಸಿ।
ಪರಿಪರಿಯಭೋಗಕ್ಕೆ ಸಂಬಂಧವೆನಿಸುತೀ ।
ಪರಿಜೀವಿಗಳಿಗೆಲ್ಲ ಭ್ರಾಂತಿಯಿಂದಲಿ ಬಂಧಪ್ರಾಪ್ತಿಯಾಗಿಹುದಾತ್ಮನ ॥
ಅರಿವುತಲೆದೋರಿದರೆ ಪುಣ್ಯಪಾಪಗಳೆಲ್ಲ ।
ನೆರೆಗೆಟ್ಟು ಭ್ರಾಂತಿಯುದು ನಶಿಸುತಂ ಭೋಗದೊಳ ।
ಗೆರಕವಿಲ್ಲದೆ ಜೀವಿಗಳು ಮುಕ್ತಿಸುಖವನ್ನು ಹೊಂದುತಿಹರಿದುಸತ್ಯವು ॥ ೭೧ ॥

ಅವತಾರಿಕೆ ;— ಸ್ವರೂಪದಮರವೆಯಿಂದ ಪುಣ್ಯಪಾಪಗಳು, ಅರಿವಿನಿಂದ ಅವುಗಳನಿವೃತ್ತಿಯು ಜನರಿಗುಂಟಾಗುವುದೆಂದುಹೇಳಿದಿರಿ. ಆದರೆ ನೀವು ಬ್ರಹ್ಮಜ್ಞಾನಿಗಳಾದುದರಿಂದ ಮತ್ತು ಬ್ರಹ್ಮಸ್ವರೂಪರೇ ಆದ್ದರಿಂದ ನಿಮಗೆಯಾವುದು ಸಂಬಂಧವಿಲ್ಲದಿದ್ದರೂ ಲೋಕದವರ ಏಳ್ಗೆಗಾಗಿ ಯಜ್ಞಾದಿ ಪುಣ್ಯಕರ್ಮಗಳಲ್ಲಿ ಪ್ರವರ್ತಿಸಿ ಆ ಯಜ್ಞಕ್ಕೆ ಪಶುಹಿಂಸೆಯನ್ನು ನೀವುಮಾಡಬಹುದಲ್ಲವೆ ? ಎಂಬ ಪ್ರಶ್ನೆಗೆ ನನ್ನಲ್ಲಿ ಕರ್ತೃತ್ವವಿಲ್ಲದ್ದರಿಂದಲೂ, ನನಗೆ ಬೇರೆಯಾದವಸ್ತುವು ಮತ್ತೊಂದಿಲ್ಲದ್ದರಿಂದಲೂ, ಪಶುಹಿಂಸೆಯನ್ನೆಸಗಲು ನನ್ನ ಮನಸ್ಸು ಒಪ್ಪುವುದಿಲ್ಲ ಎಂಬ ಉತ್ತರವನ್ನು ಮುಂದಿನ ಶ್ಲೋಕದಲ್ಲಿ ಉತ್ತರಿಸುವರು.

## * ವಿದ್ಯುನ್ಮಾಲಾ ವೃತ್ತ.

**ಹೇಯಾದೇಯೌ ತುಲ್ಯಂ ಕರ್ತುಂ ।**
**ತಾಭ್ಯಾಸ್ನೋನೇಮೇ ಸ್ನೇಹ ದ್ವೇಷೌ ।**
**ನಾನ್ಯಃಕಶ್ಚಿಚ್ಛ್ರೌತುಂ ಹಂತು ।**
**ಬಿಭ್ಯತ್ಯಂತಃ ಕಿಂ ಕುರ್ವೇಽಹಂ ॥ ೭೨ ॥**

ಪದಚ್ಛೇದ :— ಹೇಯಾದೇಯ್ವೌ ತಲ್ಯಂ, ತಾಭ್ಯಾಂ, ನೋ, ನೇ, ಮೇ, ಸ್ನೇಹದ್ವೇಷೌ, ನ, ಅನ್ಯಃ, ಕಶ್ಚಿತ್, ಶ್ರೌತುಂ, ಹಂತುಂ, ಬಿಭ್ಯತಿ, ಅಂತಃ, ಕಿಂ ಕುರ್ವೇ, ಅಹಂ,

ಟೀಕೆ :— ಹೇಯಾದೇಯೌ = ಹಿತಾಹಿತಗಳೆರಡು । ತುಲ್ಯಂ = ಸಮಾನವು । ತಾಭ್ಯಾಂ = ಆ ಇಷ್ಟಾನಿಷ್ಟಗಳಿಗಾಗಿ । ಸ್ನೇಹದ್ವೇಷೌ = ಪ್ರಿಯಾಪ್ರಿಯಗಳೆರಡನ್ನು । ಕರ್ತುಂ = ಮಾಡುವುದಕ್ಕೆ । ನೋ = ಬೇಡ । ಮೇ = ನನಗೆ । ಕಶ್ಚಿತ್ = ಒಂದಾವದೂ । ಅನ್ಯಃ = ಬೇರೆಯಾದುದು । ನ = ಇಲ್ಲ । ಶ್ರೌತುಂ = ಯಜ್ಞಕ್ಕಾಗಿ । ಅಂತುಂ = ಪಶುವಂಹಿಂಸೆಮಾಡಲು । ಅಂತಃ = ಅಂತಃಕರಣವು । ಬಿಭ್ಯತಿ = ಬೀತಿಗೊಳ್ಳುತ್ತದೆ । ಅಹಂ = ನಾನು । ಕಿಂಕುರ್ವೇ = ಏನುಮಾಡಲಿ ।

ತಾತ್ಪರ್ಯ :— ನನಗೆ ಹಿತಾಹಿತಗಳೆರಡು ಸಮಾನವಾದ್ದರಿಂದ ಇಷ್ಟಾನಿಷ್ಟಗಳಿಗಾಗಿ ರಾಗದ್ವೇಷಗಳೊಡನೆ ನಾನು ಕರ್ತೃವಾಗಲಾರೆನು. ನನಗೆ ಅನ್ಯವಾಗಿ ಒಂದಾದರೂ ಇಲ್ಲದ್ದರಿಂದ ಯಜ್ಞಕ್ಕೋಸ್ಕರ ಪಶುವನ್ನುಹಿಂಸಿಸಲು ನನ್ನ ಮನಸ್ಸು ಭೀತಿಗೊಳ್ಳುತ್ತದೆ ಇದಕ್ಕೆನಾನೇನುಮಾಡಲಿ ?

ವಿಶೇಷಾರ್ಥ ;— ನಾನು ಸರ್ವಾತ್ಮಸ್ವರೂಪನಾಗಿದ್ದೇನೆ. ನನಗೆಲ್ಲವು ಸಮಾನವಾಗಿತೋರುತ್ತದೆ. ನನ್ನಲ್ಲಿ ರಾಗದ್ವೇಷಗಳಿಲ್ಲದ್ದರಿಂದ ಇದು ಅನುಕೂಲ ವಾದುದು ಬೇಕಾಗಿದೆ. ಇದು ಅನಾನುಕೂಲವಾದುದು ಬೇಡವಾಗಿದೆ. ಎಂಬ ಭಾವನೆಯು ನನ್ನಲ್ಲಿಇರುವುದಿಲ್ಲ ಮತ್ತು ಇದುಪುಣ್ಯವು, ಇದುಪಾಪವು ಇದುಇಷ್ಟವಾದುದು, ಇದು ಅನಿಷ್ಟವಾದುದು ಇವನುಮಿತ್ರನು. ಇವನುಶತೃವು, ಇದುವಿಧಿಯು, ಇದುನಿಷೇಧವು ಇತ್ಯಾದಿಗಳಾವೂ, ನನ್ನಲ್ಲಿ ತಲೆದೋರುವುದಿಲ್ಲ. ಅಂದಮೇಲೆ ಯಜ್ಞಕ್ಕೋಸ್ಕರ ಪಶುವನ್ನು ಹಿಂಸಿಸುವುದುಹೇಗೆ? ಮತ್ತು ಯಾವಕೆಲಸವನ್ನು ಮಾಡಬೇಕಾದರು ಕರ್ತೃತ್ವ ಬುದ್ಧಿಯುಬೇಕಾಗುತ್ತದೆ. ನನ್ನಲ್ಲಿ ಕರ್ತೃ

* ೩೬ ನೇ ಶ್ಲೋಕದ ಛಂದಸ್ಸನ್ನು ನೋಡಿ.

ತ್ವಬುದ್ಧಿಯೇಇರುವುದಿಲ್ಲ, ಅಂದಮೇಲೆ ನಾನುಯಾವಕರ್ಮವನ್ನುಮಾಡಲಿ? ನನಗೆ ಭಿನ್ನವಾಗಿ ಯಾವುದೂತೋರುವುದಿಲ್ಲ, ನಾನು ಸರ್ವಾತ್ಮಸ್ವರೂಪನಾಗಿದ್ದೇನೆ ಎಂಬ ಭಾವವು.

ಕಂದ :- ಹಿತವಹಿತವು ಸಮವೆನ್ನಯ।
ಮತಿಯೊಳಗಂ ರಾಗದ್ವೇಷ ವಿಲ್ಲದರಿಂದಂ ॥
ಕ್ರತುವಿಗೆ ಪಶುವಂ ಹಿಂಸಿಸಲ್ ।
ಮತಿಯೊಪ್ಪದು ನನ್ನಹೊರತು ಮತ್ತೊಂದಿಲ್ಲೈ ॥ ೭೨ ॥

ಅವತಾರಿಕೆ :— ನನ್ನಲ್ಲಿ ರಾಗದ್ವೇಷಗಳಿಲ್ಲ, ಮತ್ತು ಕರ್ತೃತ್ವವೂ ನನ್ನಲ್ಲಿಲ್ಲ. ನನಗೆ ಬೇರೆಯಾದ ಪದಾರ್ಥವಾವುದೂಇಲ್ಲ, ನಾನು ಸರ್ವಾತ್ಮ ಸ್ವರೂಪನಾಗಿದ್ದೇನೆಂದು ಹೇಳಿದಿರಿ. ಇಲ್ಲಿ ಸರ್ವವೂ ನಾನೇಎಂದು ಹೇಳಿದಂತಾಯಿತು. ಈ ನಿಮ್ಮ ಹೇಳಿಕೆಗೆ ಪ್ರಮಾಣವೇನು? ಮತ್ತು ನಾಮರೂಪಾತ್ಮಕವಾಗಿ ಭಿನ್ನಭಿನ್ನ ರೂಪದಿಂದ ಈ ಪ್ರಪಂಚವೇ ತೋರುತ್ತಿರಲು ನನಗನ್ಯವಾದುದು ಯಾವುದೂಇಲ್ಲವೆಂಬುದು ಹೇಗೆಸಿದ್ಧಮಾಡುವಿರಿ? ಎಂಬ ಪ್ರಶ್ನೆಗೆ ಸಮುದ್ರದಲ್ಲಿತೋರುವ ತೆರೆನೊರೆ ಮುಂತಾದವುಗಳು ಭಿನ್ನಭಿನ್ನವಾಗಿತೋರಿದರೂ ನೀರೊಂದಲ್ಲದೆ ಬೇರೆಇಲ್ಲದಿರುವಂತೆ ನನ್ನಲ್ಲಿ ಭಿನ್ನಭಿನ್ನವಾಗಿ ಜಗತ್ಪದಾರ್ಥಗಳು ತೋರಿದರೂ ನನ್ನಸ್ವರೂಪವಾಗಿಯೇ (ಆತ್ಮಸ್ವರೂಪವಾಗಿಯೇ ಇರುತ್ತವೆ. ಎಂಬಉತ್ತರವನ್ನು ಮುಂದಿನ ಶ್ಲೋಕದಲ್ಲಿ ಸೂಚಿಸುತ್ತಾರೆ.

## * ಶಾರ್ದೂಲವಿಕ್ರೀಡಿತಾ ವೃತ್ತ.

**ನಾರ್ಥೌಘಫೇನ ತರಂಗ ಬುದ್ಬುದಚಯಾನ್ ಭಿನ್ನಾನಪೀವ್ಯಾಪೃತೇ ।**
**ಸ್ತಾದಾತ್ಮ್ಯಾನಿವವಸ್ತುತೋ ವಿಕೃತಿಭಿ, ರ್ವಿಶ್ವೇವಿಚಿತ್ರೀಕೃತೇ ।**
**ರೂಪಾನ್ನಾಮ ಬಹಿರ್ವಿಹಾಯ ಕಲಯ, ನ್ನಂತಶ್ಚಿದಸ್ಮಿಪ್ರಿಯಾ ।**
**ಸರ್ವಂ ಬ್ರಹ್ಮಮಯಂ ಜಗಚ್ಛ್ರುತಿವಚ, ಸ್ಯಾನಂದತಿ ಸ್ವಾತ್ಮವಿತ್ ॥**
॥ ೭೩ ॥

ಪದಚ್ಛೇದ :- ವಾರ್ಧೌ. ಫೇನ, ತರಂಗ, ಬುದ್ಬುದ, ಚಯಾನಪಿ. ಭಿನ್ನಾತ್. ವ್ಯಾಪೃತೇಃ, ತಾದಾತ್ಮ್ಯಾನ್, ಇವ, ವಸ್ತುತಃ, ವಿಕೃತಿಭಿಃ, ವಿಶ್ವೇ. ವಿಚಿತ್ರೀಕೃತೇ, ರೂಪಾತ್, ನಾಮ. ಬಹಿಃ, ವಿಹಾಯ ಕಲಯನ್, ಅಂತಃ, ಚಿದಸ್ಮಿಪ್ರಿಯಾಃ ಸರ್ವಂಬ್ರಹ್ಮಮಯಂಜಗತ್, ಶ್ರುತಿವಚಸಿ, ಆನಂದತಿ, ಸ್ವಾತ್ಮವಿತ್.

* ೪ ನೇ ಶ್ಲೋಕದ ಛಂದಸ್ಸನ್ನು ನೋಡಿ.

ಟೀಕೆ ;- ವಾರ್ಧೌ = ಸಮುದ್ರದಲ್ಲಿ । ಭಿನ್ನಾತ್ = ಬೇರೆಬೇರೆಯಾದ । ಫೇನ = ನೊರೆ । ತರಂಗ = ತೆರೆ । ಬುದ್ಬುದ = ಗುರುಳೆಗಳ । ಚಯಾನಪಿ = ಸಮೂಹಗಳನ್ನಾದರೂ । ವ್ಯಾಪೃತೇಃ = ಪರಸ್ಪರತೊಡಗಿರುವುದರಿಂದ । ತಾದಾತ್ಮ್ಯನ್ = ಭೇದವಿಲ್ಲದವುಗಳಾಗಿ । ಇವ = ತೋರುವಹಾಗೆ । ವಿಕೃತಿಭಿಃ = ಅಸಿತೆಜಾಯತೆ ಮುಂತಾದ ಕಾರ್ಯರೂಪ ವಿಕಾರಗಳಿಂದ । ವಿಚಿತ್ರೀಕೃತೇ = ಸೋಜಿಗರೂಪವಾದ । ವಿಶ್ವೇ = ಪ್ರಪಂಚದಲ್ಲಿ । ವಸ್ತುತಃ = ಘಟವೇಮೊದಲಾದ ವಸ್ತುವಿನ । ರೂಪಾತ್ = ಆಕಾರದಿಂದ । ನಾಮ = ಹೆಸರನ್ನು । ಬಹಿಃ = ವೃತ್ತಿಯ ಬಾಹ್ಯದಲ್ಲಿ । ವಿಹಾಯ = ಬಿಟ್ಟು । ಅಂತಃ = ವೃತ್ತಿಯಲ್ಲಿ । ಚಿದಸ್ತಿಪ್ರಿಯಾಃ = ಚಿತ್ತು ಸತ್ತು ಆನಂದರೂಪಗಳನ್ನು । ಕಲಯನ್ = ತಿಳಿದ । ಸ್ವಾತ್ಮವಿತ್ = ಆತ್ಮಜ್ಞಾನಿಯು । ಸರ್ವಂಬ್ರಹ್ಮಮಯಂ ಜಗತ್ = ಸರ್ವಪ್ರಪಂಚವು ಬ್ರಹ್ಮಮಯವೆಂದು ಹೇಳುವ । ಶ್ರುತಿವಚಸಿ = ಈ ಶ್ರುತಿವಾಕ್ಯದಲ್ಲಿ ಹೊಂದಿಕೊಂಡು । ಆನಂದತಿ = ವಿಹರಿಸುತ್ತಾನೆ. ।

ತಾತ್ಪರ್ಯ;— ಸಮುದ್ರದಲ್ಲಿ ತೆರೆನೊರೆಗುರುಳೆಗಳು ಭಿನ್ನಭಿನ್ನವಾಗಿ ತೊಡಗಿಕೊಂಡಿದ್ದರೂ, ಅವು ಅಭಿನ್ನವಾಗಿ ತೋರುವಂತೆ ನಾನಾ ವಿಕಾರ ವಿಚಿತ್ರೀಕೃತಿಯಿಂದ ಪ್ರಪಂಚದ ವಸ್ತುಗಳು ಭಿನ್ನಭಿನ್ನನಾಮರೂಪಗಳಿಂದ ಬಾಹ್ಯವೃತ್ತಿಯಲ್ಲಿ ಕಂಡುಬಂದರೂ ಆತ್ಮಜ್ಞಾನಿಯು ಅವುಗಳಂ ಬಿಟ್ಟು ಅಂತರವೃತ್ತಿಯಲ್ಲಿ ಅಸ್ತಿ, ಭಾತಿ, ಪ್ರಿಯಾತ್ಮಕವಾದ ಆತ್ಮವೇಎಂದು ತಿಳಿಯುತ್ತಾನೆ. ಈ ತಿಳುವಳಿಕೆಗೆ "ಸರ್ವಂ ಬ್ರಹ್ಮಮಯಂ ಜಗತ್" ಎಂಬ ಶ್ರುತಿವಚನವೇ ಪ್ರಮಾಣವಾಗಿರುತ್ತದೆ. ಸರ್ವವೂ ಬ್ರಹ್ಮಮಯವೆಂದರಿತು ಆತ್ಮಜ್ಞಾನಿಯು ವಿಹರಿಸುತ್ತಾನೆ.

ವಿಶೇಷಾರ್ಥ ;- "ಸರ್ವಂ ಖಲ್ವಿದಂ ಬ್ರಹ್ಮ" ಎಂಬ ಶ್ರುತಿಗನುಸಾರವಾಗಿ ಆತ್ಮವೇತ್ತನಾದ ಜ್ಞಾನಿಯು ನಾಮರೂಪಾದಿಗಳಿಂದ ನೆಗಳಿ ತೋರುವ ಸಮಸ್ತ ಪ್ರಪಂಚವನ್ನು ಅಸ್ತಿ ಭಾತಿ ಪ್ರಿಯಾತ್ಮಕ ರೂಪದಿಂದೀಕ್ಷಿಸಿ ಸರ್ವಾತ್ಮನು ನಾನೇ ಎಂದು ತಿಳಿದು ವ್ಯವಹರಿಸುತ್ತಾನೆ. ಎಂಬುದು ಸರ್ವರಿಗೆ ಸುಲಭವಾಗಿ ತಿಳಿಯುವಂತೆ ಗ್ರಂಥಕರ್ತರು ಸಮುದ್ರೋಪಮಾನವನ್ನಿತ್ತಿರುತ್ತಾರೆ. ಸಮುದ್ರದ ಜಲವು ನಾನಾಬಗೆಯಾಗಿ ತೋರುವ ತೆರೆ ನೊರೆ ಗುರುಳೆಗಳಿಗೆಲ್ಲ ಆಧಾರ ಅಧಿಷ್ಠಾನವಾಗಿ ಇರುವುದು. ಅಲ್ಲದೆ ಆ ತೆರೆ ನೊರೆ ಗುರುಳೆಗಳ ರೂಪವಾಗಿ ತೋರಿದ್ದು ಆ ಸಮುದ್ರದ ಜಲವೇ ಆಗಿರುತ್ತದೆ. ಆ ತೆರೆನೊರೆಗಳಿಗೆಲ್ಲ ಆ ಜಲವು ಅಸ್ತಿಭಾತಿಪ್ರಿಯ ರೂಪದಿಂದ ಆಧಾರ ಅಧಿಷ್ಠಾನ ಅನುಸ್ಯೂತವಾಗಿರುತ್ತದೆ. ಹೇಗೋ ಹಾಗೆ ಬಗೆಬಗೆಯ ನಾಮರೂಪಗಳನ್ನು ಹಿಡಿದುಕೊಂಡು ತೋರುವ ಪ್ರಪಂಚ ಪದಾರ್ಥಗಳೆಲ್ಲಕ್ಕೂ ಬ್ರಹ್ಮವೇ ಆಧಾರ ಅಧಿಷ್ಠಾನವಾಗಿದೆ ಬ್ರಹ್ಮವು ಅಸ್ತಿಭಾತಿಪ್ರಿಯಾತ್ಮಕವಾಗಿದೆ. ಜಗತ್ಪದಾರ್ಥಗಳೆಲ್ಲವು ನಾಮರೂಪಕ್ರಿಯಾತ್ಮಕವಾಗಿವೆ. ನಾಮರೂಪ

ಕ್ರಿಯಾತ್ಮಕವಾಗಿ ಜಗತ್ಪದಾರ್ಥಗಳು ತೋರಬೇಕಾದರೆ ಅಸ್ತಿಭಾತಿಪ್ರಿಯಾತ್ಮಕವಾದ ಬ್ರಹ್ಮಸತ್ತೆಯನ್ನು ಹಿಡಿದುಕೊಂಡೇ ತೋರುತ್ತವೆ. ಬಾಹ್ಯದೃಷ್ಟಿ (ವೃತ್ತಿ) ಯಿಂದ ಅಜ್ಞರು ನಾಮರೂಪಕ್ರಿಯೆಗಳನ್ನೀಕ್ಷಿಸಿದರೆ, ಅಂತರದೃಷ್ಟಿ (ವೃತ್ತಿ) ಯಿಂದ ತಜ್ಞರು ಅಸ್ತಿಭಾತಿಪ್ರಿಯಾತಕ್ಮ ಬ್ರಹ್ಮವನ್ನೇ ಈಕ್ಷಿಸುತ್ತಾರೆ. ಅಸ್ತಿಭಾತಿಪ್ರಿಯಾತ್ಮಕವಾಗಿ ನೋಡುವದರಿಂದ ಆತ್ಮವೇತ್ತರು ನೋಡಿದ್ದೆಲ್ಲವು ನನ್ನ ಆತ್ಮರೂಪವೇ ಎಂದು ಅರಿತು ಅಳವಡಿಸಿಕೊಂಡು ವ್ಯವಹರಿಸುತ್ತಾರೆ ಸಮುದ್ರ ಜಲಕ್ಕನ್ಯವಾಗಿ ತೆರೆನೊರೆಗಳಿಲ್ಲದಿರುವಂತೆ ನನ್ನ ಸ್ವರೂಪಕ್ಕನ್ಯವಾಗಿ ಯಾವ ವಸ್ತುವು ತೋರುವುದಿಲ್ಲವೆಂದು ಖಚಿತವಾಗಿ ತಿಳಿದು ಬ್ರಹ್ಮವೇತ್ತನು ಆನಂದದಿಂದ ವಿಹರಿಸುತ್ತಾನೆ ಎಂಬ ಭಾವವು.

ವಾರ್ಧಿಕ ಷಟ್ಪದಿ.

ಶರಧಿಯಲಿ ಪ್ರತ್ಯೇಕ ತೆರೆನೊರೆಗಳುದ್ಭವಿಸಿ |
ತರತರದ ವಿಧದಿಂದ ಕಂಡರವು ತೋಯಮಯ |
ವಿರುವುದೆಂದರಿವಂತೆ ವಿಶ್ವ ವಿಕೃತಿಗಳಾಗಿ ಸೋಜಿಗದಿ ತೋರುತಿರುವ |
ಪರಿಪರಿಯ ಘಟಪಟಂಗಳ ನಾಮರೂಪಗಳ |
ನೆರೆ ಬಿಡುತ್ತಸ್ತಿ ಚಿತ್ಸುಖವರಿತು ಸರ್ವವುಂ |
ಪರಮಾತ್ಮ ಮಯವೆಂಬ ಶ್ರುತಿವಾಕ್ಯದಂತೆ ಸುಜ್ಞಾನಿತಾ ವ್ಯವಹರಿಪನು||೭೩||

ಅವತಾರಿಕೆ :– "ಸರ್ವಂ ಖಲ್ವಿದಂ ಬ್ರಹ್ಮ" ಎಂಬ ಶ್ರುತಿಗನುಸಾರವಾಗಿ ಎಲ್ಲವೂ ಬ್ರಹ್ಮವೇ ಎಲ್ಲವೂ ನನ್ನಾತ್ಮಸ್ವರೂಪವೇ ಎಂದು ಹೇಳಿದಂತಾಯಿತು ಆದರೆ ಎಲ್ಲವೂ ಆತ್ಮಸ್ವರೂಪವೆಂದು ಒಡಂಬಟ್ಟರೆ ಈ ಮೊದಲು ಈ ಜಗತ್ತು ದೇಹವು ಮತ್ತು ಅವಸ್ಥಾತ್ರಯಗಳು ಅನಾತ್ಮವೆಂತಲೂ ಅನಿತ್ಯವೆಂತಲೂ ಹೇಳಿ ಇರುತ್ತೀರಿ. ಪೂರ್ವಾಪರ ವಿಚಾರಮಾಡಿ ನೋಡಿದರೆ ನಿಮ್ಮ ಹೇಳಿಕೆಯಲ್ಲಿ ಪರಸ್ಪರ ವಿರೋಧವಿರುತ್ತದೆ. ಹೇಗೆಂದರೆ ಎಲ್ಲವೂ ಆತ್ಮವೆಂಬಲ್ಲಿ ಅನಾತ್ಮವಸ್ತುವಿರಬಾರದು ತೋರುವುದೆಲ್ಲವು ಅನಾತ್ಮವಸ್ತುವೆಂಬಲ್ಲಿ ಆತ್ಮವಸ್ತು ಬಂದು ಬೇರೆ ಇರಬೇಕಾಗುತ್ತದೆ ಆತ್ಮವಸ್ತುವನು ಬೇರೆಯಾಗಿತಿಳಿಯದೆ ಈ ದೇಹಾದಿ ಪ್ರಪಂಚಕ್ಕೆ ಆತ್ಮತ್ವವನ್ನು ಹೇಳಿದರೆ ನಾಸ್ತಿಕ ಮತಾವಲಂಬನೆಗೆ ಎಡೆಕೊಟ್ಟಂತಾಗಲಿಲ್ಲವೆ ? ಎಂಬ ಪ್ರಶ್ನೆಗೆ ದೇಹಾದಿಪ್ರಪಂಚವೆಲ್ಲವು ಆ ಭಾಸಮಾತ್ರವಾಗಿ ತೋರುವುದರಿಂದ ಅನಿತ್ಯವೆಂತಲೂ ಆಭಾಸಾತ್ಮಕವಾಗಿ ತೋರುವ ದೇಹಾದಿ ಪ್ರಪಂಚದಲ್ಲಿ ಆತ್ಮನು ನಿತ್ಯನಾಗಿಯೂ ಅನುಸ್ಯೂತನಾಗಿಯೂ, ಅವ್ಯಭಿಚಾರಿಯಾಗಿಯೂ, ಇರುತ್ತಾನೆ. ಆದ್ದರಿಂದ ನಾಸ್ತಿಕಮತಕ್ಕೆ ಎಡೆಕೊಟ್ಟಂತಾಗುವುದಿಲ್ಲ ಎಂಬ ಉತ್ತರವು ಸ್ವಾನುಭವಕ್ಕೆ ಬರುದಂತೆ ಜಾಗ್ರದಾದಿ ಅವಸ್ಥೆಗಳು ವ್ಯತಿರೇಕವಾಗಿಯೂ ಆತ್ಮನು ಅನ್ವಯರೂಪನಾಗಿಯೂ, ಇರುತ್ತಾನೆಂದು ಮುಂದಿನ ಶ್ಲೋಕದಲ್ಲಿ ನಿರೂಪಿಸುತ್ತಾರೆ.

## * ಸ್ರಗ್ಧರಾವೃತ್ತ.

**ಜಾಗ್ರೇ ನಸ್ವಪ್ನಸುಪ್ತೀ ಕ್ವಚಿದಪಿ ವಸತಃ ಸ್ವಪ್ನಜಾಗ್ರೌನಸುಪ್ತಾ ।**
**ಸ್ವಪ್ನೇ ನೋ ಜಾಗ್ರಸುಪ್ತೀತ್ವವಿರಳ ಚಿದಹಂತೇಷುಬುದ್ಧೋಽಸ್ಮಿಯದ್ವತ್।**
**ತದ್ವದ್ಬಾಲ್ಯಾದ್ಯವಸ್ಥಾಸ್ವತಿಗತ ಮುಖದೇಹೇಷು ಭೂತಾದಿ ಕಾಲೇ ।**
**ಷ್ವೇಕಸ್ಸನ್ತ್ರಿಷ್ವಸಂಗೋ ಮಣಿಗಣ ಗುಣವತ್ಪ್ರೋತ ಏವಾಸ್ಮಿ ನಿತ್ಯಃ ॥೭೪॥**

**ಪದಚ್ಛೇದಃ**:— ಜಾಗ್ರೇ, ನ, ಸ್ವಪ್ನಸುಷುಪ್ತೀ, ಕ್ವಚಿದಪಿ, ವಸತಃ, ಸ್ವಪ್ನ ಜಾಗ್ರೌ, ನ, ಸುಪ್ತಾ, ಸ್ವಪ್ನೇ, ನೋ, ಜಾಗ್ರಸುಪ್ತೀ, ತು, ಅವಿರಳಚಿತ್, ಅಹಂ, ತೇಷು, ಬುದ್ಧಃ, ಅಸ್ಮಿ, ಯದ್ವತ್, ತದ್ವತ್, ಬಾಲ್ಯಾದವಸ್ಥಾಸು, ಅತಿ ಗತ, ಮುಖ, ದೇಹೇಷು ಭೂತಾದಿಕಾಲೇಷು, ಏಕಸ್ಸನ್, ತ್ರಿಷು, ಅಸಂಗಃ, ಮಣಿಗಣ, ಗುಣವತ್ ಪ್ರೋತಃ, ಏವ, ಅಸ್ಮಿನ್, ನಿತ್ಯಃ,

**ಟೀಕೆ**:— ಜಾಗ್ರೇ = ಜಾಗ್ರದವಸ್ಥೆಯಲ್ಲಿ । ಸ್ವಪ್ನಸುಷುಪ್ತೀ = ಕನಸು ನಿದ್ರೆಗಳೆರಡು । ಕ್ವಚಿದಪಿ = ಒಮ್ಮೆಯಾದರು । ನವಸತಃ = ಇರುವುದಿಲ್ಲ । ಸ್ವಪ್ನಜಾಗ್ರೌ = ಸ್ವಪ್ನಜಾಗ್ರದವಸ್ಥೆಗಳೆರಡು । ಸುಪ್ತಾ = ನಿದ್ರಾವಸ್ಥೆಯಲ್ಲಿ । ನ = ಇರುವುದಿಲ್ಲ । ತು = ಮತ್ತು । ಸ್ವಪ್ನೇ = ಸ್ವಪ್ನಾವಸ್ಥೆಯಲ್ಲಿ । ಜಾಗ್ರಸುಪ್ತೀ = ಎಚ್ಚರಿಕೆನಿದ್ರೆಗಳೆರಡು । ನೋ = ಇರುವುದಿಲ್ಲ । ತೇಷು = ಆ ಪರಸ್ಪರ ವ್ಯತಿರೇಕ ಅಭಾವಗಳಾಗಿರುವ ಜಾಗ್ರದಾದಿಗಳಲ್ಲಿ । ಅವಿರಳಚಿತ್ = ಓತಪ್ರೋತ ಚಿತ್‌ಸ್ವರೂಪವಾದ । ಬುದ್ಧಃ = ಅರಿಯುವವನು । ಅಹಂ = ನಾನು । ಯದ್ವತ್ = ಯಾವುದರಹಾಗೆ । ತದ್ವತ್ = ಅದರಹಾಗೆ ಬಾಲ್ಯಾದವಸ್ಥಾಸು = ಬಾಲ್ಯವೇ ಮೊದಲಾದಅವಸ್ಥೆಗಳಲ್ಲಿ । ಅತಿಗತ = ಕಳೆದುಹೋಗಿರುವ ಈ ದೇಹದ ಹಿಂದಿನ ದೇಹವೇ । ಮುಖ = ಮುಂತಾದ । ದೇಹೇಷು = ದೇಹಗಳಲ್ಲಿ । ಭೂತಾದಿಕಾಲೇಷು = ಭೂತಕಾಲವೇ ಮೊದಲ್ಗೊಂಡು ಭವಿಷದ್ವರ್ತಮಾನ ಕಾಲಗಳಲ್ಲಿ । ಏಕಸ್ಸನ್ = ಓರ್ವನೇ ಇದ್ದು । ತ್ರಿಷು = ಹೇಳಲ್ಪಟ್ಟ ಮೂರರಲ್ಲಿ । ಅಸಂಗಃ = ಸಂಬಂಧವಿಲ್ಲದವನಾದ । ನಿತ್ಯಃ = ನಿತ್ಯನು । ಮಣಿಗಣ = ಮಣಿಸಮುದಾಯಗಳಲ್ಲಿ । ಗುಣವತ್ = ದಾರದಂತೆ । ಪ್ರೋತಃ = ಅನುಸ್ಯೂತನಾಗಿ । ಏವ = ನಿಜ ವಾಗಿ । ಅಸ್ಮಿ = ಇದ್ದೇನೆ ।

**ತಾತ್ಪರ್ಯ**:— ಜಾಗ್ರದವಸ್ಥೆಯಲ್ಲಿ ಸ್ವಪ್ನಸುಷುಪ್ತಿಗಳೆರಡು ಇರುವುದಿಲ್ಲ. ಸುಷುಪ್ತಾವಸ್ಥೆಯಲ್ಲಿ ಜಾಗ್ರತ್ಸ್ವಪ್ನಗಳೆರಡು ಇರುವುದಿಲ್ಲ, ಇದರಂತೆ ಸ್ವಪ್ನಾವಸ್ಥೆಯಲ್ಲಿ ಜಾಗ್ರತ್ಸುಸುಪ್ತಿಗಳೆರಡು ಇರುವುದಿಲ್ಲ ಈ ಅವಸ್ಥೆಗಳು ಪರಸ್ಪರ ವ್ಯತಿರೇಕಗಳಾಗಿರುತ್ತವೆ. ಈ ಅವಸ್ಥೆಗಳಲ್ಲಿ ನಾನು ಓತಪ್ರೋತರೂಪದಿಂದಿದ್ದು (ಅನ್ವ

* ಪ್ರತಿಯೊಂದು ಚರಣದಲ್ಲಿ ಮ, ರ, ಭ, ನ, ಗಣಗಳೂ ಮೂರು ಯಗಣಗಳಿದ್ದು ೭ ನೇ ಅಕ್ಷರಕ್ಕೂ ಮತ್ತು ೭ ನೇ ಅಕ್ಷರಕ್ಕೂ, ಯತಿಯಿದ್ದುದಾದರೆ ಸ್ರಗ್ಧರಾವೃತ್ತ ವಾಗುತ್ತದೆ.

ಯರೂಪದಿಂದಿದ್ದು ) ಇವುಗಳನ್ನು ಯಾವರೀತಿಯಾಗಿ ಅರಿಯುತ್ತಿರುವೆನೋ ಆ ರೀತಿಯಾಗಿಯೇ ಬಾಲ್ಯವೇ ಮೊದಲ್ಗೊಂಡು ವೃದ್ಧಾಪ್ಯವಸ್ಥೆಯಲ್ಲಿಯೂ ಹಾಗು ಈ ದೇಹದ ಹಿಂದಿನ ದೇಹವೇ ಮೊದಲಾಗಿ ಭೂತ ಭವಿಷದ್ವರ್ತಮಾನ ಕಾಲಗಳಲ್ಲಿಯೂ, ನಾನೊಬ್ಬನೇ ಇದ್ದು ಅರಿಯುತ್ತಿರುವೆನು. ಮತ್ತು ನಾನು ಆ ಮೂರುಕಾಲಗಳಲ್ಲಿ ಮಣಿಗಣಗಳಲ್ಲಿನ ದಾರದಂತೆ ಅನುಸ್ಯೂತನಾಗಿಯೂ, ನಿತ್ಯನಾಗಿಯೂ ಇದ್ದೇನೆ.

ವಿಶೇಷಾರ್ಥ:— "ಸರ್ವಂಖಲ್ವಿದಂಬ್ರಹ್ಮ" ಎಂಬ ಶ್ರುತಿ ವಾಕ್ಯವನ್ನು ಅರ್ಥಮಾಡಿಕೊಳ್ಳುವುದರಲ್ಲಿ ಒಂದು ಜಾಣತನಬೇಕಾಗುತ್ತದೆ. ಘಟಪಟಾದಿ ಸರ್ವ ಪದಾರ್ಥಗಳು ನಾಮರೂಪಕ್ರಿಯೆಗಳನ್ನು ಹಿಡಿದುಕೊಂಡಿರುತ್ತವೆ. ಆ ನಾಮರೂಪ ಕ್ರಿಯೆಗಳು ಅಸ್ತಿಭಾತಿಪ್ರಿಯಾತ್ಮಕವಾದ ಬ್ರಹ್ಮದಲ್ಲಿ ಅಧ್ಯಾಸವಾಗಿರುತ್ತವೆ. ಅಧ್ಯಾಸವಾದ ವಸ್ತುಗಳೆಲ್ಲವೂ ಶುಕ್ತಿರಜತದಂತೆ ಮಿಥ್ಯಾಭಾಸಗಳಾಗಿರುತ್ತವೆ. ಮಿಥ್ಯಾಭಾಸವಾದ ವಸ್ತುಗಳು ಅನಿತ್ಯವೆಂದು ಹೇಳಿಸಿಕೊಳ್ಳುತ್ತವೆ, ಅನಿತ್ಯವಸ್ತುಗಳೆಲ್ಲವೂ ಅನಾತ್ಮವೆಂಬುದು ನಿಶ್ಚಿತಾರ್ಥವು ಅಂದರೆ ಅನಾತ್ಮರೂಪವಾದ ನಾಮರೂಪ ಕ್ರಿಯೆಗಳಿಗೊಳಪಟ್ಟವುಗಳೆಲ್ಲವೂ "ಸರ್ವಂ" ಎಂಬ ಪದಕ್ಕೆ ವಾಚ್ಯಗಳಾಗಿರುತ್ತವೆ. ಸರ್ವಂ ಎಂಬ ಪದವಾಚ್ಯಗಳಾದ ಸರ್ವ ನಾಮರೂಪ ಕ್ರಿಯಗಳಂ ಪರಿತ್ಯಜಿಸಿದರೆ ಅಸ್ತಿ ಭಾತಿಪ್ರಿಯರೂಪವಾದ ಬ್ರಹ್ಮವೇ ಉಳಿಯುತ್ತದೆ.

ಉದಾ:- ಹಾವೆಲ್ಲವೂಹಗ್ಗವೆ ಎಂದು ಹೇಳಿದರೆ ಅಲ್ಲಿ ಹಗ್ಗವಲ್ಲದೆ ಹಾವು ಇರುವುದೆ? ಹಗ್ಗದಲ್ಲಿ ಹಾವು ಇರುವುದೇ ಇಲ್ಲ. ಇದರಂತೆ "**ಸರ್ವಂ ಖಲ್ವಿದಂ ಬ್ರಹ್ಮ**" ಎಂದು ಶ್ರುತಿಯು ಹೇಳುವುದರಿಂದ ಬ್ರಹ್ಮವೊಂದಲ್ಲದೆ ಸರ್ವ ಪದಾರ್ಥಗಳಿರುವವೆ? ಬ್ರಹ್ಮಕ್ಕೆ ಹೊರತಾಗಿ ಯಾವ ಪದಾರ್ಥಗಳೂ ಸತ್ಯವಾಗಿ ಇರುವುದಿಲ್ಲ ಇದ್ದ ಹಗ್ಗದಲ್ಲಿ ಇಲ್ಲದ ಹಾವು ಇರುವಂತೆ ಇದ್ದ ಬ್ರಹ್ಮದಲ್ಲಿ ಇಲ್ಲದ ಜಗತ್ತು ಜಗತ್ಪದಾರ್ಥಗಳು ಇರುತ್ತವೆ. ಇಲ್ಲಿ ಹಾವನ್ನು ಅಲ್ಲಗಳೆದು ಹಗ್ಗವೊಂದನ್ನೇ ನಿಶ್ಚಯಿಸುವಂತೆ ಆ ಶ್ರುತಿವಾಕ್ಯದಲ್ಲಿ "**ಸರ್ವಂ**" ಎಂಬುದನ್ನು ಅಲ್ಲಗಳೆದು ಬ್ರಹ್ಮವೊಂದನ್ನೇ ನಿಶ್ಚಯಿಸಬೇಕು, ಇದಕ್ಕೆ ಬಾಧ ಸಮಾನಾಧಿಕರಣವೆಂದು ಹೆಸರು. ಹಾವನ್ನು ಬಾಧಿಸಿ ಹಗ್ಗವನ್ನು ನಿಶ್ಚಯಿಸುವಂತೆ ನಾಮರೂಪಗಳನ್ನು ಬಾಧಿಸಿ ಬ್ರಹ್ಮವನ್ನೇ ನಿಶ್ಚಯಿಸಬೇಕು. ಇದೇ ಬಾಧಸಮಾನಾಧಿಕರಣದ ಸ್ವರೂಪವು. ಇಲ್ಲಿ ಬಾಧಿಸಿಕೊಂಡು ಹೋಗುವುದೆಲ್ಲವೂ ಅನಾತ್ಮವೆಂತಲೂ, ವ್ಯಭಿಚಾರಿಯೆಂತಲೂ, ಅನಿತ್ಯವೆಂತಲೂ ತಿಳಿಯಬೇಕು. ಈ ತಿಳುವಳಿಕೆಯು ಸ್ವಾನುಭವಕ್ಕೆ ಬರುವಂತೆ ಗ್ರಂಥಕರ್ತರು ಅವಸ್ಥಾತ್ರಯಗಳ ದೃಷ್ಟಾಂತವನ್ನು ಕೊಟ್ಟಿದ್ದಾರೆ. ಜಾಗ್ರತ್ ಸ್ವಪ್ನಸುಷುಪ್ತಿಗಳಲ್ಲಿ ಒಂದವಸ್ಥೆಯಿರುವಾಗ ಉಳಿದ ಎರಡವಸ್ಥೆಗಳಿರುದಿಲ್ಲ. ಆತ್ಮನಾದ ತಾನುಮಾತ್ರ ಸರ್ವಾವಸ್ಥೆಗಳಲ್ಲಿ ಅನ್ವಯರೂಪದಿಂದ

ಇದ್ದೇ ಇರುತ್ತಾನೆ. ಅವಸ್ಥೆಗಳು ವ್ಯಭಿಚಾರಯುಕ್ತವು. ಆತ್ಮನು ಅವ್ಯಭಿಚಾರಿಯು. ಈ ಅವಸ್ಥೆಗಳ ಉದಾಹರಣೆಯಂತೆ ಈದೇಹವು, ಇದರಹಿಂದಿನದೇಹವು, ಮುಂದೊದಗುವ ದೇಹವು ಅಂದರೆ ಭೂತಭವಿಷದ್ವರ್ತಮಾನ ಕಾಲಗಳಲ್ಲಿ ಆತ್ಮನು ಅಳಿದು ಹೋಗದೆ ಉಳಿದೇ ಇರುತ್ತಾನೆ- ಆ ದೇಹಕಾಲಗಳೆಲ್ಲವೂ ಅಳಿದುಹೋಗುತ್ತವೆ. ಸರ್ವ ಅವಸ್ಥೆಗಳು ಸರ್ವಕಾಲಗಳು ಭಿನ್ನಭಿನ್ನವಾಗಿದ್ದರೂ ಅವುಗಳಲ್ಲಿ ಆತ್ಮನು ಮಣಿಗಳೊಳಗಣ ದಾರದಂತೆ ಅಭಿನ್ನವಾಗಿಯೂ, ಅಸಂಗನಾಗಿಯೂ ಇರುತ್ತಾನೆ. ಆತ್ಮೇತರವಾಗಿ ತೋರುವ ಪದಾರ್ಥಗಳೆಲ್ಲವೂ ಮಿಥ್ಯೆಯೆಂಬುದೇ ಶ್ರುತಿಯುಕ್ತೀವರ್ಣನವು.**"ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೆತ್ಯೇವಸತ್ಯಂ"**ಮಣ್ಣಿನಲ್ಲಿ ತೋರುವ ವಿಕಾರಾತ್ಮಕ ನಾಮರೂಪಗಳು ಮಿಥ್ಯೆಯು, ಮಣ್ಣೊಂದೇ ಸತ್ಯವು. ಇದರಂತೆ **''ಸರ್ವಂ ಖಲ್ವಿದಂಬ್ರಹ್ಮ" ''ವಾಸುದೇವಸರ್ವಮಿತಿ ಮಹಾತ್ಮಾ ಸರ್ವಭೂತಾತ್ಮ "** ಇತ್ಯಾದಿ ಶ್ರುತಿಸ್ಮೃತಿವಾಕ್ಯಗಳಲ್ಲಿ ಇರುವ ಸರ್ವ ಎಂಬ ಪದವನ್ನು ನೇತಿಗಳಿದರೆ ಏಕಾತ್ಮನೇ ಉಳಿಯುತ್ತಾನೆ, ಶ್ರುತಿಯು ಮೊದಲು ಸರ್ವಾತ್ಮಕ ಉಪದೇಶವನ್ನು ಮಾಡಿತು, ಅದನ್ನು ಜನರು ಸರಿಯಾಗಿ ತಿಳಿದುಕೊಳ್ಳಲಾರರೆಂತಲೂ, ಜನರಿಗೆ ನಾಮರೂಪಗಳಲ್ಲಿ ಸತ್ಯತ್ವಭ್ರಾಂತಿಯುಂಟಾಗುವುದೆಂತಲೂ ತಿಳಿದು ಅನಂತರ ಆ ಶ್ರುತಿಯೇ ನೇತ್ಯಾತ್ಮಕ ಉಪದೇಶವನ್ನು ಮಾಡಿರುತ್ತದೆ. ನೇತ್ಯಾತ್ಮಕ ಉಪದೇಶದಲ್ಲಿ ಸರ್ವವೆಂಬ ಪದಕ್ಕೆ ವಾಚ್ಯಗಳಾದ ಶರೀರ, ಅವಸ್ಥೆ; ಕರಣಕಾಲಾದಿಗಳನ್ನು ನೇತಿಗಳೆದು ಬಚ್ಚ ಅರಿವು ಆನಂದ ಘನಸ್ವರೂಪವಾದ ಪ್ರತ್ಯಗಾತ್ಮನೇ ನೀನೆಂದು ಬೋಧಿಸುವ ತಾತ್ಪರ್ಯವಿರುತ್ತದೆ. ಆದ್ದರಿಂದ ಸರ್ವವೂ ಆತ್ಮವೆಂದರೆ ನಾಮರೂಪಾದಿಗಳಿಂದ ಕೂಡಿದ ಜಗತ್ತು ಆತ್ಮವಲ್ಲ. ಮತ್ತು ನಾಸ್ತಿಕ ಮತಾವಲಂಬನೆಗೆ ಎಡಗೊಟ್ಟಿಲ್ಲ. ದೇಶಕಾಲವಸ್ತು ಪರಿಚ್ಛೇದ ರಹಿತ ಪರಿಪೂರ್ಣಾತ್ಮನೇ ನಾನಿದ್ದೇನೆಂಬುದೇ ಆ ಸರ್ವವೂ ಆತ್ಮವೆಂಬ ಮಾತಿಗೆ ಅರ್ಥ ಎಂಬಭಾವವು.

ವಾರ್ಧಿಕ ಷಟ್ಪದಿ.

ನೆನಸಿನಲಿ ಕನಸು ಸುಪ್ತಿಗಳಿಲ್ಲ ಕನಸಿನಲಿ ।
ನೆನಸು ಸುಪ್ತಿಗಳಿಲ್ಲ ಸುಪ್ತಿಯಲಿ ಕನಸು ನೇಣ್ ।
ನೆನಸಿಲ್ಲ ವಿವುಗಳೊಳಗವಿರಳತ್ವದಿ ನಾನು ತಿಳಿಯುತಿಹೆನಿದರಂದದಿ ॥
ತನುವಿಗಿಹ ಬಾಲ್ಯಾದ್ಯವಸ್ಥೆಯಲಿ ಪೂರ್ವದಾ ।
ತನುವಿನಲಿ ಭೂತಾದಿಕಾಲದಲಿ ನಾನಿರುವೆ ।
ಮಣಿಗಣದಲಿರುತಿರ್ಪ ದಾರದೋಲ್ ನಿಸ್ಸಂಗ ನಿತ್ಯತ್ವ ರೂಪದಿಂದ ॥ ॥೭೪॥

ಅವತಾರಿಕೆ :— ಅವಸ್ಥಾತ್ರಯಗಳಲ್ಲಿ ಆತ್ಮನು ಅನುಸ್ಯೂತನಾಗಿರುವಂತೆ ಸರ್ವ ಜಗತ್ಪದಾರ್ಥಗಳಲ್ಲಿಯು ಆತ್ಮನು ಅನುಸ್ಯೂತನಾಗಿರುವನೆಂತಲೂ, ಸರ್ವ ವೆಂಬಪದವು ನಾಮರೂಪಗಳನ್ನುಹಿಡಿದುಕೊಂಡಿರುವುದು. ನಾಮರೂಪಗಳು ಕಳೆದರೆ ಆತ್ಮನೊರ್ವನೇ ಉಳಿಯುತ್ತಾನೆಂತಲೂ, ಆ ಆತ್ಮನು ನಿಸ್ಸಂಗನಿತ್ಯಸ್ವರೂಪನಾಗಿ ಇರುವನೆಂತಲೂ, ಹೇಳಿದಂತಾಯಿತು. ಮತ್ತುಸರ್ವಾತ್ಮಕ ಉಪದೇಶವು ನೇತ್ಯಾತ್ಮಕ ಉಪದೇಶವಾಗಿ ಶ್ರುತಿಗಳು ಬೋಧಿಸುತ್ತವೆ ಎಂತಲೂ ಹೇಳಿದ್ದಾಯಿತು. ಸರ್ವಾತ್ಮಕ ನೇತ್ಯಾತ್ಮಕ ಉಪದೇಶಗಳಲ್ಲಿ ಯಾವುದು ಶ್ರೇಷ್ಠವು? ಮತ್ತು ಸರ್ವಾತ್ಮ ನೇತ್ಯಾತ್ಮಕ ಉಪದೇಶದ ಸ್ವರೂಪವೇನು? ಆ ಯಾ ಉಪದೇಶಗಳಿಂದ ಜನರಿಗೆ ಯಾವ ಜ್ಞಾನವಾಗುವುದು? ಆ ಸರ್ವಾತ್ಮ ನೇತ್ಯಾತ್ಮಕ ಸ್ವರೂಪದಿಂದ ಜ್ಞಾನಿಗಳಿರುವರೇ? ಎಂಬ ಪ್ರಶ್ನೆಗಳಿಗೆ ಆ ವಿಧದ ಜ್ಞಾನಿಗಳುಂಟೆಂತಲೂ, ಮತ್ತು ಸರ್ವಾತ್ಮಕಜ್ಞಾನಿಗಳು ಅರ್ಧಜ್ಞಾನಿಗಳೆಂತಲೂ, ನೇತ್ಯಾತ್ಮಕ ಜ್ಞಾನಿಗಳು ಪೂರ್ಣ ಜ್ಞಾನಿಗಳೆಂತಲೂ, ಮುಂದಿನ ಶ್ಲೋಕದಲ್ಲಿ ಉತ್ತರಿಸುತ್ತಾರೆ.

## * ಶಾಲಿನಿವೃತ್ತ.

ಅರ್ಧಜ್ಞಾನೀ ಸರ್ವಭೂತೇಷು ಗೂಢಃ ।
ಶ್ರುತ್ಯಾ ಬ್ರಹ್ಮಸ್ತಂಭ ದೃಶ್ಯೇದೃಗೋಘಾ ।
ಪೂರ್ಣಜ್ಞಾನೀ ತ್ವಾತ್ಮನೋಽನ್ಯಂ ನಕಿಂಚಿ ।
ಚ್ಛ್ರುತ್ಯಾಸ್ವಾಭ್ಯಾಂ ತದ್ವಯೀ ಬ್ರಹ್ಮಬೋಧಃ ॥೭೫॥

ಪದಚ್ಛೇದ;— ಅರ್ಧಜ್ಞಾನಿ, ಸರ್ವಭೂತೇಷುಗೂಢಃ, ಶ್ರುತ್ಯಾ, ಬ್ರಹ್ಮಸ್ತಂಭ, ದೃಶ್ಯೇ, ದೃಕ್, ಓಘಾ, ಪೂರ್ಣಜ್ಞಾನೀ, ತು, ಆತ್ಮನಃ, ಅನ್ಯಃ, ನಕಿಂಚಿತ್, ಶ್ರುತ್ಯಾ, ಸ್ವಾಭ್ಯಾಂ, ತದ್ವಯೀ, ಬ್ರಹ್ಮಬೋಧಃ.

ಟೀಕೆ:— ಅರ್ಧಜ್ಞಾನೀ = ಅರ್ಧತಿಳಿದವನು। ಸರ್ವಭೂತೇಷುಗೂಢಃ = ಸರ್ವಭೂತಗಳಲ್ಲಿ ದೇವನು ಅಂತರ್ಯಾಮಿಯಾಗಿರುವನೆಂದು ಹೇಳುವ। ಶ್ರುತ್ಯಾ = ಶ್ರುತಿಯಿಂದ। ಬ್ರಹ್ಮ = ಚತುರ್ಮುಖ ಬ್ರಹ್ಮನೇ ಮುಂತಾದ। ಸ್ತಂಭ = ಸ್ತಂಭಪರ್ಯಂತ। ದೃಶ್ಯೇ = ದೃಶ್ಯವಿಷಯಗಳಲ್ಲಿ। ಓಘಾ = ನಿರ್ಮಲವಾದ। ದೃಕ್ = ಸಾಕ್ಷಿಯಾದ ಪರಮಾತ್ಮನು ಉಂಟೆಂದು ಅರಿಯುತ್ತಾನೆ। ತು = ಮತ್ತು। ಪೂರ್ಣಜ್ಞಾನಿ = ಸಂಪೂರ್ಣವಾಗಿ ಎಲ್ಲವೂ ಬಲ್ಲಾತನು। ಆತ್ಮನಃ = ಆತ್ಮನಿಂದ। ಅನ್ಯಃ = ಪೃಥಕ್ಕಾದ ವಸ್ತುವು। ನಕಿಂಚಿತ್ = ಕೊಂಚವಾದರೂ ಇರುವುದಿಲ್ಲವೆಂದು ಹೇಳುವಂತಹ। ಶ್ರುತ್ಯ = ಶ್ರುತಿಯಿಂದ। (ಬ್ರಹ್ಮೇತರವಾದ ವಸ್ತುವಿಲ್ಲವೆಂದು) ತಿಳಿಸು

---

೧೮ನೇ ಶ್ಲೋಕದ ಛಂದಸ್ಸನ್ನು ನೋಡಿ.

ತ್ತಾನೆ । ಸ್ವಾಭ್ಯಾಂ = ಹೇಳಲ್ಪಟ್ಟ ಆ ಎರಡು ಶ್ರುತಿಗಳಿಂದ । ತದ್ವಯೇ = ಆ ಪೂರ್ವೋಕ್ತ ಅರ್ಧಪೂರ್ಣಜ್ಞಾನಿಗಳಲ್ಲಿ। ಬ್ರಹ್ಮಬೋಧಃ = ಬ್ರಹ್ಮಬೋಧೆಯು ಬೆಳಗುತ್ತದೆ.

**ತಾತ್ಪರ್ಯ:–** ಅರ್ಧ ತಿಳುವಳಿಕೆಯುಳ್ಳವನು "**ಏಕೋ ದೇವಸ್ಸರ್ವ ಭೂತೇಷು ಗೂಢಃ**" ಸರ್ವಭೂತಗಳಲ್ಲಿ ಪರಮಾತ್ಮನು ಹುದಿಗಿರುತ್ತಾನೆ. ಎಂದು ಹೇಳುವ ಶ್ರುತಿವಾಕ್ಯಾನುಗುಣ್ಯವಾಗಿ ಬ್ರಹ್ಮಮೊದಲು ಸ್ತಂಭ ಪರ್ಯಂತರವಾಗಿ ಉಳ್ಳ ದೃಶ್ಯ ಪದಾರ್ಥಗಳಲ್ಲೆಲ್ಲಾ ಪರಮಾತ್ಮನು ದೃಗ್ ರೂಪನಾಗಿರುತ್ತಾನೆಂದು ತಿಳಿಯುತ್ತಾನೆ. ಪೂರ್ಣಜ್ಞಾನಿಯಾದರೋ "**ಆತ್ಮನೋಽನ್ಯಂ ನಕಿಂಚಿತ್**" ಆತ್ಮನಿಗೆ ಹೊರತಾದ ವಸ್ತುವು ಕಿಂಚಿತ್ತಾದರೂ ಇರುವುದಿಲ್ಲ. ಎಂದು ಹೇಳುವ ಶ್ರುತಿವಾಕ್ಯಾನುಗುಣ್ಯವಾಗಿ ಆತ್ಮನಿಗೆ ಹೊರತಾಗಿ ಯಾವ ವಸ್ತುವೂ ಇಲ್ಲವೆಂದು ತಿಳಿಯುತ್ತಾನೆ. ಈ ರೀತಿಯಾಗಿ ಅರ್ಧಜ್ಞಾನಿ ಪೂರ್ಣಜ್ಞಾನಿಗಳಲ್ಲಿ ಬ್ರಹ್ಮ ಬೋಧೆಯು ಪ್ರಕಾಶಿಸುತ್ತದೆ.

**ವಿಶೇಷಾರ್ಥ:-** ಪರಮಾತ್ಮನಿಂದ ಪ್ರಣೀತವಾದ ಶ್ರುತಿಗಳು ಅಧಿಕಾರಿಗಳ ತಾರತಮ್ಯದಿಂದ ಸರ್ವಾತ್ಮಕ ಉಪದೇಶ ನೇತ್ಯಾತ್ಮಕ ಉಪದೇಶವೆಂದು ಇಬ್ಬಗೆಯಾಗಿರುತ್ತವೆ."**ಏಕೋ ದೇವಸ್ಸರ್ವ ಭೂತೇಷು ಗೂಢಃ ಸರ್ವವ್ಯಾಪಿ ಸರ್ವ ಭೂತಾಂತರಾತ್ಮ ಕರ್ಮಾಧ್ಯಕ್ಷ ಸರ್ವಭೂತಾಧಿವಾಸಃ ಸಾಕ್ಷೀ ಚೇತಾಃ ಕೇವಲೋ ನಿರ್ಗುಣಶ್ಚ**" ಒಬ್ಬನಾದ ದೇವನು ಸರ್ವಭೂತಗಳಲ್ಲಿಯೂ ವ್ಯಾಪಕಸ್ವರೂಪದಿಂದ ಗೂಢವಾಗಿದ್ದು ಸರ್ವಭೂತಗಳಲ್ಲಿ ಅಂತರ್ಯಾಮಿಯೆನಿಸಿ ಮತ್ತು ಸರ್ವ ಶರೀರಗಳಲ್ಲಿ ವಾಸವಾಗಿದ್ದು ಆಯಾ ಶರೀರದಲ್ಲಿ ಜರುಗುವ ಕರ್ಮಗಳಿಗೆ ಅಧ್ಯಕ್ಷನಾಗಿ ಮತ್ತಾ ಕರ್ಮಗಳಿಗೆ ಸಾಕ್ಷಿಯಾಗಿ ಕೇವಲ ನಿರ್ಗುಣ ಸ್ವರೂಪನಾಗಿ ಇರುತ್ತಾನೆ. ಮತ್ತು "**ಆತ್ಮೈವೇದಂ ಸರ್ವಂ**" ಸರ್ವ ಭೂತಗಳಲ್ಲಿ ಆತ್ಮನನ್ನೇ ದರ್ಶಿಸಬೇಕು. ಇತ್ಯಾದಿ ಶ್ರುತಿಗಳಿಗನುಸಾರವಾಗಿ ಗೀತಾಸ್ಮೃತಿಯಲ್ಲಿಯೂ ಸಹ "**ಈಶ್ವರಸ್ಸರ್ವ ಭೂತಾನಿ ಹೃದ್ದೇಶೇಽರ್ಜುನ ತಿಷ್ಠತಿ**" "ಈಶ್ವರನು ಸರ್ವ ಭೂತಗಳಲ್ಲಿ ನೆಲಸಿರುತ್ತಾನೆ," ಎಂದು ಹೇಳಲ್ಪಟ್ಟಿದೆ. ಈ ರೀತಿಯಾಗಿರುವ ಶ್ರುತಿ ಸ್ಮೃತಿ ವಾಕ್ಯಗಳೆಲ್ಲವೂ ಸರ್ವಾತ್ಮಕೋಪದೇಶ ಪರವೆಂದು ತಿಳಿಯಬೇಕು ಈ ಉಪದೇಶದಿಂದ ಉಂಟಾಗುವ ಜ್ಞಾನಕ್ಕೆ ಪರೋಕ್ಷ ಬ್ರಹ್ಮಜ್ಞಾನವೆಂಬ ಹೆಸರು ಸರ್ವ ಭೂತಗಳಲ್ಲಿ ಪರಮಾತ್ಮನ ಅಸ್ತಿತ್ವವನ್ನು ಅರಿತುಕೊಳ್ಳುವುದೇ ಪರೋಕ್ಷ ಬ್ರಹ್ಮಜ್ಞಾನದ ಸ್ವರೂಪವು. ಈ ಜ್ಞಾನವು ಪರಮಾತ್ಮನಿಲ್ಲವೆಂಬ ಅಸತ್ವಾಪಾದಕಾವರಣ ದೋಷವನ್ನು ನಿವೃತ್ತಿಮಾಡುತ್ತದೆ. ಮೇಲ್ಕಂಡ ಶ್ರುತಿ ಸ್ಮೃತಿವಾಕ್ಯಗಳಂತೆ ಪರಮಾತ್ಮನ ಅಸ್ತಿತ್ವವನ್ನು ಸರ್ವ ಭೂತಗಳಲ್ಲಿ ತಿಳಿದುಕೊಳ್ಳುವವನಿಗೆ

ಅರ್ಧಜ್ಞಾನಿಯೆಂದು ಗ್ರಂಥಕರ್ತರು ಹೆಸರಿಸಿರುತ್ತಾರೆ. "**ಆತ್ಮನೋಽನ್ಯಂ ಕಿಂಚಿತ್**" ಆತ್ಮನಿಗೆ ಅನ್ಯವಾಗಿ ಕಿಂಚಿತ್ತಾದರೂ ಏನೂ ಇರುವುದಿಲ್ಲ. '**ಏಕಮೇವಾದ್ವಿತೀಯಂ ಬ್ರಹ್ಮ**' ಬ್ರಹ್ಮದಲ್ಲಿ ಸಜಾತೀಯ ವಿಜಾತೀಯ ಸ್ವಗತವೆಂಬ ಭೇದಗಳಾವೂ ಇರುವುದಿಲ್ಲ. "**ನೇಹ ನಾನಾಸ್ತಿ ಕಿಂಚನ**" ಕಿಂಚಿತ್ತಾದರು ಯಾವ ತರದ ಭೇದವೂ ಇರುವುದಿಲ್ಲ. ಇತ್ಯಾದಿ ಶ್ರುತಿಗಳು ಪರಮಾತ್ಮನ ಹೊರತು ಏನೂ ಇರುವುದಿಲ್ಲವೆಂದು ಹೇಳುತ್ತವೆ. ಇಲ್ಲಿ ಆತ್ಮನಲ್ಲಿ ಕಲ್ಪಿತ ಭೇದಾಕಾರವಾಗಿ ತೋರುವ ಬಾಹ್ಯಾಂತರ ಸರ್ವ ಪ್ರಪಂಚವನ್ನು ನೇತಿಗಳೆದು ಆತ್ಮನಹೊರತು ಏನೂ ಇರುವುದಿಲ್ಲವೆಂಬುದು ಆ ಶ್ರುತಿಗಳ ತಾತ್ಪರ್ಯವು. ಈ ಸಂಬಂಧವಾದ ಶ್ರುತಿವಾಕ್ಯಗಳೆಲ್ಲವೂ ನೇತ್ಯಾತ್ಮಕ ಉಪದೇಶಪರ ವಾಕ್ಯಗಳೆಂದು ಅರಿತುಕೊಳ್ಳಬೇಕು. ಈ ನೇತ್ಯಾತ್ಮಕ ಉಪದೇಶದಿಂದ ನಾನು ಪರಮಾತ್ಮನಿದ್ದೇನೆಂಬ ಅಪರೋಕ್ಷಬ್ರಹ್ಮಜ್ಞಾನವು ಉಂಟಾಗುತ್ತದೆ. ಮಿಥ್ಯಾ ಕಲ್ಪಿತ ಶಿವಜೀವರ ಉಪಾಧಿಗಳನ್ನು ನತಿಗಳೆದು ನಿರುಪಾಧಿಕ ಶುದ್ಧಬ್ರಹ್ಮವೇ ನಾನಿದ್ದೇನೆಂಬ ತಿಳುವಳಿಕೆಯೇ ಅಪರೋಕ್ಷ ಬ್ರಹ್ಮಜ್ಞಾನದ ಸ್ವರೂಪವು. ಪರಮಾತ್ಮನಿಗೆ ಹೊರತಾಗಿ ಏನೂ ಇಲ್ಲವೆಂಬ ತಿಳುವಳಿಕೆಯುಳ್ಳ ಅಪರೋಕ್ಷ ಬ್ರಹ್ಮಜ್ಞಾನಿಯೇ ಪೂರ್ಣಜ್ಞಾನಿಯೆಂದು ಗ್ರಂಥಕರ್ತರು ಹೆಸರಿಸಿದ್ದಾರೆ. ಪರಮಾತ್ಮನು ತೋರಲಿಲ್ಲೆಂಬ ಅಭಾನಾಪಾದಕಾವರಣ ದೋಷ ನಿವೃತ್ತಿಯೇ ಅಪರೋಕ್ಷಬ್ರಹ್ಮಜ್ಞಾನದ ಪ್ರಯೋಜನವಾಗಿರುತ್ತದೆ. ಈ ಗ್ರಂಥಕರ್ತರ ಹೇಳಿಕೆಯ ಮೇರೆಗೆ ಸರ್ವಾತ್ಮಕ ಜ್ಞಾನವು ಅರ್ಧಜ್ಞಾನವೆಂತಲೂ, ನೇತ್ಯಾತ್ಮಕ ಜ್ಞಾನವು ಪೂರ್ಣಜ್ಞಾನವೆಂತಲೂ ತಿಳಿಯಬೇಕು. ಅರ್ಧಜ್ಞಾನಿಯು ಪರೋಕ್ಷಜ್ಞಾನಿಯೆಂತಲೂ. ಪೂರ್ಣಜ್ಞಾನಿಯು ಅಪರೋಕ್ಷಜ್ಞಾನಿಯೆಂತಲೂ ಮನವರಿಕೆ ಮಾಡಿಕೊಳ್ಳಬೇಕಾಗುತ್ತದೆ. ಒಟ್ಟಾರೆ ಸರ್ವಾತ್ಮಕೋಪದೇಶದಲ್ಲಿನ ಉಪಾಧಿ ಭಾಗವನ್ನು ಬಿಟ್ಟರೆ ನೇತ್ಯಾತ್ಮಕೋಪದೇಶದಲ್ಲಿನ ಪರಿಚ್ಛಿನ್ನತ್ವ ಭಾಗವನ್ನು ಬಿಟ್ಟರೆ ಉಪದೇಶವೆಂಬುದು ಒಂದೇ ಆಗಿರುತ್ತದೆ. ಗ್ರಂಥಕರ್ತರು ಅರ್ಧಜ್ಞಾನಿ ಪೂರ್ಣಜ್ಞಾನಿ ಎಂಬ ಶಬ್ದಪ್ರಯೋಗವು ೭ ನೇ ಶ್ಲೋಕದಲ್ಲಿ ಹೊಸಮೂರ್ಖ ಎಂಬ ಪದವನ್ನು ಪ್ರಯೋಗಿಸಿದಂತೆ ಇಲ್ಲಿ ನೂತನವಾಗಿ ಪ್ರಯೋಗಿಸಿದ್ದಾರೆ ಸರ್ವಾತ್ಮಕ ನೇತ್ಯಾತ್ಮಕ ಉಪದೇಶಗಳಲ್ಲಿ ನೇತ್ಯಾತ್ಮಕೋಪದೇಶವು ಶ್ರೇಷ್ಠವಾದುದೆಂದು ಅರಿಯಬೇಕು ಸರ್ವಾತ್ಮಕೋಪದೇಶವು ಶ್ರೇಷ್ಠವಾಗದಿರಲು ಕಾರಣವೇನಂದರೆ. ಸರ್ವ ಭೂತಗಳು ಉಂಟು ಆ ಭೂತಗಳಲ್ಲಿ ಹುದಿಗಿಕೊಂಡು ಪರಮಾತ್ಮನೂ ಉಂಟು ಎಂಬುದರಿಂದ ಉಂಟೆಂಬ ಅಸ್ತಿತ್ವವು ಭೂತಗಳಲ್ಲಿಯೂ, ಪರಮಾತ್ಮನಲ್ಲಿಯೂ ಉಂಟಾಗುವುದರಿಂದ ದ್ವೈತಾಪತ್ತಿ ದೋಷವು ಪ್ರಾಪ್ತಿಯಾಗುತ್ತದೆ. ಆದ್ದರಿಂದ ಸರ್ವಾತ್ಮಕೋಪದೇಶಕ್ಕಿಂತಲೂ ನೇತ್ಯಾತ್ಮಕೋಪದೇಶವು ಶ್ರೇಷ್ಠವೆನ್ನಲ್ಪಡುತ್ತದೆ ಎಂಬಭಾವವು.

## ಭಾಮಿನಿ ಷಟ್ಪದಿ.

ಸರುವಭೂತದಿ ಶಿವನಿರುವನೆಂ ।
ದರುಪುತಿಹ ಶ್ರುತಿವಚನವನ್ನೇ ।
ಅರಿತುಕೊಳ್ಳುವನೀತ ನರ್ಧಜ್ಞಾನಿಯಾಗಿಹನು
ಪರಮನಿಗೆ ತಾನನ್ಯವೇನೊಂ ।
ದಿರುವುದಿಲ್ಲೆಂತೆಂಬ ಶ್ರುತಿಯನು ।
ಅರಿತುಕೊಳ್ಳುವ ನೀತನೇ ಪರಿಪೂರ್ಣಸುಜ್ಞಾನಿ॥ ॥೨೫॥

**ಅವತಾರಿಕೆ ;—** ಸರ್ವಭೂತಗಳುಂಟು ಸರ್ವಭೂತಗಳಲ್ಲಿ ಪರಮಾತ್ಮನು ಹುದಿಗಿಕೊಂಡಿರುವುದುಂಟು ಎಂಬ ಜ್ಞಾನವು ಅರ್ಧಜ್ಞಾನವೆಂತಲೂ, ಪರಮಾತ್ಮನಹೊರತು ಏನೂ ಇರುವುದಿಲ್ಲೆಂಬ ಜ್ಞಾನವು ಪೂರ್ಣಜ್ಞಾನವೆಂತಲೂ ಹೇಳಿದಿರಿ. ಆದರೆ ಬಗೆಬಗೆಯ ಭೇದಾಕಾರವಾಗಿ ತೋರುವ ಪ್ರಪಂಚದಲ್ಲಿ ಪೂರ್ಣ ಜ್ಞಾನಿಯು ಇರುತ್ತಾನೇಯೇ ? ಇರುತ್ತಾನೆಂದರೆ ಬಗೆಬಗೆ ರೂಪವನ್ನಾಂತ ಪ್ರಪಂಚದಲ್ಲಿ ಪರಮಾತ್ಮನ ಹೊರತು ಏನೂ ಇಲ್ಲವೆಂದು ಅರಿತು ಆಚರಿಸುವುದು ಹೇಗೆ? ಅಂದರೆ ಆ ಪೂರ್ಣಜ್ಞಾನಿಯ ದೃಷ್ಟಿಗೆ ಪರಮಾತ್ಮನ ಹೊರತು ಏನೂ ಕಾಣುವದಿಲ್ಲೇನು? ಅಂತಪ್ಪ ಜ್ಞಾನಿಯ ದೃಷ್ಟಿಗೆ ಪರಮಾತ್ಮನ ಹೊರತು ಏನೂ ಕಾಣುವದಿಲ್ಲೆಂಬುದಕ್ಕೆ ದೃಷ್ಟಾಂತವೇನು? ಎಂಬ ಶಂಕೆಗೆ ಬೆಲ್ಲದಿಂ ನಿರ್ಮಿಸಲ್ಪಟ್ಟ ಬಗೆಬಗೆಯ ಪದಾರ್ಥಗಳಿದ್ದರೂ ನಾಲಿಗೆಯು ಬೆಲ್ಲವೊಂದನ್ನೇ ಸ್ವಾದಿಸುವಂತೆ ಬಗೆಬಗೆ ಯಾಕಾರವಾದ ಪ್ರಪಂಚದಲ್ಲಿ ಪೂರ್ಣಜ್ಞಾನಿಯು ಪರಮಾತ್ಮನಹೊರತು ಮತ್ತೇನೂ ನೋಡುವದಿಲ್ಲೆಂಬ ಸಮಾಧಾನವನ್ನು ಮುಂದಿನ ಶ್ಲೋಕದಲ್ಲಿ ಸೂಚಿಸುತ್ತಾರೆ.

## * ಪುಷ್ಪಿತಾಗ್ರಾವೃತ್ತ.

ಗುಡಕೃತ ಕರಕಾಮ್ಲ ನಿಂಬ ರಂಭಂ ।
ಪೃಥಯುತಿ ಭಿನ್ನರುಚಿಂ ಯಥಾನ ಭೋಕ್ತೃ ।
ನವಿಶತಿ ಚಿದನನ್ಯ ಚೈತ್ಯ ಕೃತ್ಸ್ನಂ ।
ವಿವಿಧ ವಿಕಲ್ಪ ಮತಿಂ ತಥಾತ್ಮಯೋಕ್ತೃ ॥ ॥ ೨೬ ॥

---

* ಮೊದಲಿನ ಚರಣದಲ್ಲಿ ೨ ನಗಣಗಳು, ರಗಣ ಯಗಣವಿದ್ದು ಎರಡನೇ ಚರಣದಲ್ಲಿ ನಗಣ ಜಗಣವೆರಡು ರಗಣವೊಂದು ಮತ್ತೊಂದು ಗುರುವಿರಬೇಕು. ಹೀಗೆ ಉಳಿದೆರಡು ಚರಣಗಳು ಮೇಲಿನ ಪ್ರಕಾರವಿದ್ದರೆ ಪುಷ್ಪಿತಾಗ್ರವೃತ್ತವಾಗುತ್ತದೆ.

**ಪದಚ್ಛೇದ ;—** ಗುಡಕೃತ, ಕರಕ, ಆಮ್ಲ, ನಿಂಬ, ರಂಭಂ, ಪೃಥಯುತಿ, ಭಿನ್ನರುಚಿಂ, ಯಥಾ, ನ, ಭೋಕ್ತ್ರೇ, ನದಿಶತಿ, ಚಿತ್, ಅನನ್ಯ ಚೈತ್ಯ, ಕೃತ್ಸ್ನಂ ವಿವಿಧ, ವಿಕಲ್ಪಮತಿಂ, ತಥಾ, ಆತ್ಮಯೋಕ್ತ್ರೇ,

**ಟೀಕೆ:—** ಗುಡಕೃತ = ಬೆಲ್ಲದಿಂದ ಮಾಡಲ್ಪಟ್ಟ | ಕರಕ = ದಾಳಿಂಬಹಣ್ಣು | ಆಮ್ಲ = ಹುಣಿಚೀಹಣ್ಣು | ನಿಂಬ = ಬೇವಿನಹಣ್ಣು | ರಂಭಂ = ಬಾಳೆಹಣ್ಣು | ಭೋಕ್ತ್ರೇ = ತಿನ್ನುವವನಿಗೆ | ಯಥಾ = ಹೇಗೆ | ಭಿನ್ನರುಚಿಂ= ಬೇರೆಬೇರೆರುಚಿಯು | ನಪೃಥಯುತಿ = ವಿಸ್ತರಿಸಿ ತೋರುವುದಿಲ್ಲವೊ | ತಥಾ = ಹಾಗೆ | ಆತ್ಮಯೋಕ್ತ್ರೇ = ಸರ್ವದರಲ್ಲಿ ಆತ್ಮಾನ್ವಯಿಗೆ | ಚಿತ್ = ಜ್ಞಾನದಿಂದ | ಅನನ್ಯ = ಅಭೇದವಾದ | ಚೈತ್ಯ =ಜ್ಞೇಯ (ವಿಷಯಗಳ) ಕೃತ್ಸ್ನಂ= ಸಮೂಹವು | ವಿವಿಧ = ಬಹುಪ್ರಕಾರ | ವಿಕಲ್ಪಮತಿಂ = ವಿಪರೀತ ಮತಿಯನ್ನು | ನದಿಶತಿ = ತೋರಿಕೊಳ್ಳುವುದಿಲ್ಲ |

**ತಾತ್ಪರ್ಯ ;—** ಒಂದಾದ ಬೆಲ್ಲದಿಂದ ತಯಾರಿಸಲ್ಪಟ್ಟ ದಾಳಿಂಬರು ಹುಣಿಚಿ, ಬೇವು, ಬಾಳೆ, ಮುಂತಾದ ಹಣ್ಣುಗಳು ನಾಮರೂಪಗಳಿಂದ ಭಿನ್ನ ಭಿನ್ನವಾಗಿದ್ದರೂ, ಅವುಗಳನ್ನು ತಿನ್ನುವವನ ನಾಲಿಗೆಗೆ ಸ್ವಾದವು ಸಿಹಿಯಾದ ಬೆಲ್ಲವೊಂದೇ ತೋರುವಂತೆ ಪೂರ್ಣಜ್ಞಾನಿಗೆ (ಆತ್ಮಾನುಭವಿಗೆ) ಜ್ಞಾನದಿಂದ ಅನ್ಯ ವಾದ ಜ್ಞೇಯವಸ್ತುಗಳುಂಟೆಂಬ ವಿಪರೀತ ಬುದ್ಧಿಯು ತಲೆಯೆತ್ತಿಕೊಳ್ಳುವುದಿಲ್ಲ.

**ವಿಶೇಷಾರ್ಥ;—** ಪರಮಾತ್ಮನ ಹೊರತು ಮತ್ತೇನೂ ಇರುವದಿಲ್ಲೆಂಬ ತಿಳುವಳಿಕೆಯುಳವಟ್ಟ ಪೂರ್ಣಜ್ಞಾನಿಯ ದೃಷ್ಟಿಗೆ ಬಗೆಬಗೆಯ ನಾಮರೂಪಗಳನ್ನು ಹಿಡಿದುಕೊಂಡ ಜಗತ್ಪದಾರ್ಥಗಳು ಯಾವೂ ತೋರುವುದಿಲೆಂಬುದಕ್ಕೆ ಗ್ರಂಥಕರ್ತರು ಸರ್ವರ ಬುದ್ಧಿಗೆ ಹೊಳೆಯುವಂತೆ ಇಲ್ಲಿ ಸಿಹಿಯಾದ ಸ್ವಾನುಭವ ಉದಾಹರಣೆಯ ನ್ನಿತ್ತಿದ್ದಾರೆ. ಬೆಲ್ಲ ಅಥವಾ ಸಕ್ಕರೆಪಾಕದಲ್ಲಿ ಹಸರು, ಹಳದಿ, ಕೆಂಪು, ಮುಂತಾದ ಬಣ್ಣದ ಪುಡಿಯನ್ನು ಸೇರಿಸಿ, ಬಾಳೆಯಹಣ್ಣು, ದಾಳಿಂಬರಹಣ್ಣು ಹುಣಿಚೀ ಹಣ್ಣು, ಬೇವಿನಹಣ್ಣು ಪೇರಲ, ಸೇರಲ, ಮುಂತಾದ ಹಣ್ಣುಗಳನ್ನು ತಯಾರಿಸಿ ಬಾಲಕರಿಗಾಗಿ ಸಂತೆಯಲ್ಲಿಟ್ಟು ಮಾರುವುದುಂಟು. ಅವುಗಳನ್ನು ಬಾಲಕರು ಕೊಂಡು ತಿನ್ನುವುದೂ ಉಂಟು, ಆದರೆ ಆ ಹಣ್ಣುಗಳು ಬಣ್ಣದಿಂದಲೂ, ನಾಮದಿಂದಲೂ ರೂಪದಿಂದಲೂ ಭಿನ್ನ ಭಿನ್ನವಾಗಿ ತೋರಿದರೂ ಅವುಗಳ ಸ್ವಾದವನ್ನು ಕೊಳ್ಳುವ ನಾಲಿಗೆಗೆ ಸಿಹಿಯೊಂದೇ ತೋರುವುದಾಗಲಿ ಮತ್ತೇನೂ ತೋರುವುದಿಲ್ಲ. ಆ ಹಣ್ಣುಗಳಲ್ಲಿ ಹುಣಚೀಹಣ್ಣು ಹುಳಿಯಾಗಿಯೂ, ಬೇವಿನಹಣ್ಣು ಕಹಿಯಾಗಿಯೂ. ತೋರುವುದಿಲ್ಲ. ಏಕೆಂದರೆ ಆ ಹಣ್ಣುಗಳಿಗೆಲ್ಲ ಕಾರಣವಾದುದು ಸಕ್ಕರೆಯೊಂದೇ ಆಗಿದೆ, ಆ ಸಕ್ಕರೆಯ ವಿವರ್ತವೇ ಹಣ್ಣುಗಳ ರೂಪದಿಂದ ಗೋಚರಿಸುತ್ತವೆ. ಆ ಹಣ್ಣುಗಳೆಲ್ಲವೂ ಮಿಥ್ಯಾಕಾರಗಳು ಅವುಗಳಲ್ಲಿ ಸಕ್ಕರೆಯೊಂದೇ ಸತ್ಯವಾದುದು

ಎತ್ತನೋಡಿದರೂ ಸಕ್ಕರೆಯೊಂದೇ ಇರುವುದಾಗಲಿ ಮತ್ತೇನೂ ಇರುವುದಿಲ್ಲ, ಇದರಂತೆ ಹಣ್ಣುಗಳಂತಿರುವ ಜಗತ್ಪದಾರ್ಥಗಳು ನಾಮರೂಪಗಳಿಂದ ಭಿನ್ನಭಿನ್ನವಾಗಿ ತೋರಿಬಂದರೂ ಅವೆಲ್ಲವು ಚಿತ್ಸ್ವರೂಪವಾಗಿಯೇ ಇರುತ್ತವೆ. ಏಕೆಂದರೆ ಬಿಡಿಬಿಡಿಯಾಗಿ ಕಲ್ಪಿತಾಕಾರವಾಗಿ ತೋರುವ ಪದಾರ್ಥಗಳೆಲ್ಲವೂ ಚಿದ್ವಿವರ್ತಗಳಾಗಿವೆ, ಸಕ್ಕರೆಗೆ ಅನ್ಯವಾಗಿ ಹಣ್ಣುಗಳಿಲ್ಲದಿರುವಂತೆ ಜ್ಞಾನಕ್ಕೆ ಅನ್ಯವಾಗಿ ಜ್ಞೇಯವಸ್ತುಗಳಿರುವುದಿಲ್ಲ ಸಕ್ಕರೆಯಲ್ಲಿ ಹಣ್ಣುಗಳು ಕಲ್ಪಿತವಾದಂತೆ ಚಿತ್ಸ್ವರೂಪವಾದ ಜ್ಞಾನದಲ್ಲಿ ಜ್ಞೇಯವಸ್ತುಗಳು ಕಲ್ಪಿತವಾಗಿವೆ, ಹಣ್ಣುಗಳದೃಷ್ಟಿಯನ್ನು ತೆಗೆದರೆ ಬರೀಸಕ್ಕರೆಯುಳಿಯುವಂತೆ ಜ್ಞೇಯವಸ್ತುಗಳದೃಷ್ಟಿಯನ್ನು ತೆಗೆದರೆ ಬರೀಜ್ಞಾನವೇ(ಚಿದ್ರೂಪವೇ)ಉಳಿಯುತ್ತದೆ. ಸಕ್ಕರೆಯಹಣ್ಣುಗಳು ಭಿನ್ನಭಿನ್ನವಾಗಿದ್ದರೂ ನಾಲಿಗೆಯು ಸಿಹಿಯೊಂದನ್ನೇ ಲಕ್ಷಿಸುವಂತೆ ಜಗತ್ಪದಾರ್ಥಗಳು ಭಿನ್ನಭಿನ್ನವಾಗಿ ತೋರಿಬಂದರೂ ಪೂರ್ಣಜ್ಞಾನಿಯು ಆತ್ಮನೊಬ್ಬನನ್ನೇ ಲಕ್ಷಿಸುತ್ತಾನೆ. ಸಿಹಿ ಹೊರತು ನಾಲಿಗೆಗೆ ಆ ಹಣ್ಣುಗಳೊಂದೂ ತೋರದಿರುವಂತೆ ಆತ್ಮನ ಹೊರತು ಪೂರ್ಣಜ್ಞಾನಿಗೆ ಮತ್ತೇನೂ ಗೋಚರಿಸುವುದಿಲ್ಲ. ಇಂತಹ ಪೂರ್ಣಜ್ಞಾನಿಯು ಪ್ರಪಂಚದಲ್ಲಿ ಸ್ವಲೀಲೆಯಿಂದ ವಿಹರಿಸುತ್ತಾನೆ ಎಂಬ ಭಾವವು.

## ವಾರ್ಧಿಕಷಟ್ಪದಿ

ದಾಳಿಂಬರವು ಜೇವು ಹುಣಿಚೆ ಖರ್ಜೂರ ಮೇಣ್ ।
ಬಾಳೆ ಬೆಳವಲ ನಿಂಬೆ ಮಾವು ದ್ರಾಕ್ಷಿಯು ಹಲಸು ।
ಬೇಲ ಮುಂತಾಗಿರುವ ಫಲಗಳಂ ಬೆಲ್ಲದಿಂನಿರ್ಮಿಸಲ್ಕಾಫಲಗಳು ॥
ನಾಲಿಗೆಗೆ ಸ್ವಾದತಾಂ ಬೇರೆಬೇರಾಗದೆಂ।
ಬೋಲು ಸರ್ವಾವಸ್ಥೆಯಲ್ಲಿ ಯಾತ್ಮಾನ್ವಯಿಗೆ ।
ಮೇಲೆನಿಪ ಚೈತನ್ಯದಿಂದನ್ಯ ವಿಷಯಂಗಳೊಂದಾರುಂ ತೋರದು ॥೭೨॥

ಅವತಾರಿಕೆ=ಪೂರ್ಣಜ್ಞಾನಿಗೆ ಆತ್ಮನಹೊರತು ಮತ್ತೇನೂತೋರುವುದಿಲ್ಲವೆಂದು ಬೆಲ್ಲದಹಣ್ಣುಗಳಉದಾಹರಣೆಯನ್ನಿತ್ತುಹೇಳಿದಿರಿ. ಆದರೆ ಜಗತ್ಪದಾರ್ಥಗಳು ಭಿನ್ನಭಿನ್ನವಾಗಿ ಅನೇಕ ಭೇದಾಕಾರವಾಗಿರುವುದರಿಂದ ಆಪದಾರ್ಥಗಳಂತೆ ಜ್ಞಾನವಾದರೂ ಭಿನ್ನಭಿನ್ನವಾಗಿಯು ಅನೇಕ ಭೇದಾಕಾರವಾಗಿಯೇ ಆಗಬೇಕಾಗುತ್ತದೆ. ಜ್ಞೇಯಾನುಸಾರಜ್ಞಾನವಾಗುತ್ತದೆ ಅಂದಮೇಲೆ ಪೂರ್ಣಜ್ಞಾನಿಗೆ ಜ್ಞೇಯಾನುಸಾರ ಜ್ಞಾನವಾಗುವುದಿಲ್ಲೇನು ? ಜ್ಞೇಯ ವಸ್ತುಗಳು ಭೇದಾಕಾರವಾಗಿರಲು ಪೂರ್ಣಜ್ಞಾನಿಗೆ ಅಭೇದಾಕಾರ ವಾಗುವುದೆಂತು? ಎಂಬಪ್ರಶ್ನೆಗೆ ಲೋಹದಿಂನಿರ್ಮಿಸಿದ ಪ್ರತಿಮೆಯಲ್ಲಿ ವಸ್ತ್ರಾಭರಣಾದಿಗಳು ಭೇದಾಕಾರವಾಗಿದ್ದರೂ ಅಭೇದಾಕಾರ

ಜ್ಞಾನವಾಗುವಂತೆ ಪೂರ್ಣಜ್ಞಾನಿಗೆ ಭೇದಾಕಾರ ಪ್ರಪಂಚಪದಾರ್ಥಗಳಿದ್ದರೂ ಅಭೇದಾಕಾರ ಜ್ಞಾನವಾಗುತ್ತದೆ. ಎಂಬ ಉತ್ತರವನ್ನು ಮುಂದಿನ ಶ್ಲೋಕದಲ್ಲಿ ಸೂಚಿಸುತ್ತಾರೆ.

## ಶಾಲಿನೀ ವೃತ್ತ. *

ಭೂಷಾ ವಾಹಾಸ್ತ್ರಾಂಬರಾದೀನ್ಯಥೈಕಂ ।
ಲೋಹಂ ಪುತ್ರ್ಯಾಂಗೋ ನೃ ಘೃಷ್ಟಿ ಶ್ವ ಮುಖ್ಯಾನ್ ।
ಏಕಂ ವಿಶ್ವೇ ಚಿದ್ವಿವರ್ತಂ ವ್ಯವೈತಿ ।
ಜ್ಞಾನೀ ಸರ್ವಂ ಖಲ್ವಿದಂ ಬ್ರಹ್ಮಸೂತ್ರಾತ್ ॥೭೭॥

**ಪದಚ್ಛೇದ:–** ಭೂಷಾ, ವಾಹ, ಅಸ್ತ್ರ, ಅಂಬರಾದೀನ್, ಯಥಾ, ಏಕಂ, ಲೋಹಂ, ಪುತ್ರ್ಯಾಂ, ಗೋ, ನೃ, ಘೃಷ್ಟಿ, ಶ್ವಮುಖ್ಯಾನ್, ಏಕಂ, ವಿಶ್ವೇ, ಚಿದ್ವಿವರ್ತಂ, ವ್ಯವೈತಿ, ಜ್ಞಾನೀ, ಸರ್ವಂ ಖಲ್ವಿದಂಬ್ರಹ್ಮ, ಸೂತ್ರಾತ್,

**ಟೀಕೆ:—** ಪುತ್ರ್ಯಾಂ = ಕಬ್ಬಿಣಗೊಂಬೆಯಲ್ಲಿ । ಏಕಂ = ಒಂದಾದ । ಲೋಹಂ = ಕಬ್ಬಿಣವೇ । ಭೂಷಾ = ಕಟಕ ಕುಂಡಲಾದಿ ಒಡವೆಗಳು । ವಾಹ = ವಾಹನ । ಅಸ್ತ್ರ = ಆಯುಧ । ಅಂಬರಾದೀನ್ = ವಸ್ತ್ರವೇ ಮೊದಲಾದವುಗಳನ್ನು । ಗೋ = ಆಕಳ । ನೃ = ಮನುಷ್ಯ । ಘೃಷ್ಟಿ = ಸೂಕರ । ಶ್ವಮುಖ್ಯಾನ್ = ನಾಯಿಯೇ ಮೊದಲಾದವುಗಳನ್ನು । ಯಥಾ = ಹೇಗೆ । ವ್ಯವೈತಿ = ಅಲ್ಲಗಳೆಯುತ್ತಾನೆಯೋ । ತಥಾ = ಹಾಗೆ । ಜ್ಞಾನೀ = ಸ್ವರೂಪನಿಷ್ಠನು । ವಿಶ್ವೇ = ಪ್ರಪಂಚದಲ್ಲಿ । ಏಕಂ = ಕೇವಲ ಚಿತ್ತೊಂದೇ ಎಂದು ಹೇಳುವ । ಸರ್ವಂ ಖಲ್ವಿದಂ ಬ್ರಹ್ಮ = ಇದೆಲ್ಲಾ ನಿಜವಾಗಿಯೂ ಬ್ರಹ್ಮವೇ ಎಂದು ಹೇಳುವ ತಾತ್ಪರ್ಯವುಳ್ಳ ಶ್ರುತಿವಾಕ್ಯದ । ಸೂತ್ರಾತ್ = ಅನುಸಂಧಾನದಿಂದ । ಚಿದ್ವಿವರ್ತಂ = ಚೈತನ್ಯದಲ್ಲಿ ವರ್ತಿಸಿದ ವಿಷಯಗಳ ನಾಮರೂಪಗಳನ್ನು ವ್ಯವೈತಿ = ಅಲ್ಲಗಳೆಯುತ್ತಾನೆ ।

**ತಾತ್ಪರ್ಯ ;—** ಕಬ್ಬಿಣದಿಂದ ತಯಾರಿಸಲ್ಪಟ್ಟ ಮೂರ್ತಿಯಲ್ಲಿ ವಸ್ತ್ರ ಆಭರಣಾಯುಧಾದಿಗಳೆಲ್ಲವೂ, ನಾಮರೂಪಾದಿಗಳಿಂದ ಭಿನ್ನಭಿನ್ನವಾಗಿದ್ದರೂ ಅವೆಲ್ಲವೂ ಕಬ್ಬಿಣ ಒಂದೆಯಾಗಿರುವುದೆಂಬ ಅಭಿನ್ನಜ್ಞಾನವಾಗುತ್ತದೆ. ಮತ್ತೂ ಅದೇ ಕಬ್ಬಿಣದಿಂದ ನರ ಮೃಗಶ್ವಾನ ಸೂಕರಾದಿಗಳಂ ಮಾಡಿದರೆ ಅವು ಭಿನ್ನ ಭೇದಾಕಾರವಾಗಿ ತೋರಿದರೂ ಅವೆಲ್ಲವೂ ಅಭಿನ್ನ ಅಭೇದಾಕಾರವಾದ ಜ್ಞಾನವಾಗುವಂತೆ ಪ್ರಪಂಚವು ಅನೇಕ ಭೇದಾಕಾರವಾಗಿ ತೋರಿಬಂದವೂ, ಸರ್ವಂ ಖಲ್ವಿದಂ ಬ್ರಹ್ಮ

* ೧೮ ನೇ ಶ್ಲೋಕದ ಛಂದಸ್ಸನ್ನು ನೋಡಿರಿ

ಎಂಬ ಶ್ರುತಿಯನುಸಾರ ಪೂರ್ಣಜ್ಞಾನಿಯು ಅಭೇದಾಕಾರ ಜ್ಞಾನಮಾಡಿಕೊಳ್ಳು ತ್ತಾನೆ.

**ವಿಶೇಷಾರ್ಥ ;—** ಪ್ರಪಂಚದಲ್ಲಿರುವ ಜ್ಞೇಯಗಳು (ವಿಷಯಗಳು) ಇದ್ದಂತೆ ಜ್ಞಾನವಾಗುವುದೆಂಬಮಾತು ಒಪ್ಪುವಮಾತಲ್ಲ, ಏಕೆಂದರೆ ಜ್ಞಾನ ವಿದ್ದಂತೆ ಜ್ಞೇಯವಾಗುತ್ತದೆ. ಜ್ಞಾನವು ಆಧಾರವಾದುದು. ಜ್ಞೇಯವು ಆಧೇ ಯವಾದುದು. ಜ್ಞಾನದಲ್ಲಿ ಜ್ಞೇಯವು ಕಲ್ಪಿತವಾಗಿದೆ- ಜ್ಞೇಯವು ಭೇದವಾಗಿ ದ್ದರೂ ಜ್ಞಾನವು ಅಭೇದವಾಗಿರುತ್ತದೆ ಘಟರೂಪ ಜ್ಞೇಯವನ್ನು ನೋಡಿ ಆ ಘಟದ ಆಕಾರದಂತೆ ಜ್ಞಾನವಾಗುತ್ತದೆಂದು ಹೇಳಬಹುದು ಆದರೆ ಆ ಹೇಳಿಕೆ ಯ ಹಿನ್ನೆಲೆಯಲ್ಲಿ ಜ್ಞಾನಾನುಸಾರ ಜ್ಞೇಯವಾಗಿರುವುದೆಂದು ನಿಶ್ಚಯಿಸಬೇಕಾಗು ತ್ತದೆ. ಘಟರೂಪ ಜ್ಞೇಯಾನುಸಾರ ಜ್ಞಾನವಾಗುವದೆಂದರೆ ಆ ಘಟವನ್ನು ಮೊದಲು ತಯಾರಿಸಬೇಕಾದರೆ ಆ ವಿಧವಾದ ಜ್ಞಾನವು ಬೇಕಾಗುತ್ತದೆ. ಘಟದ ಜ್ಞಾನವು ಉಂಟಾದಮೇಲೆ ಘಟವು ಸೃಷ್ಟಿಯಾಗಿರುತ್ತದೆ. ಆದ್ದರಿಂದ ಜ್ಞಾನಾ ನುಸಾರಜ್ಞೇಯವೆಂಬುದೆ ಯೋಗ್ಯವಾದುದು. ಜ್ಞೇಯವು ಅನೇಕಭೇದಾಕಾರವಾಗಿದ್ದ ರೂ ಅಭೇದ ಜ್ಞಾನವಾಗುವುದೆಂಬುದಕ್ಕೆ ಪ್ರತ್ಯಕ್ಷ ಅನಭವೋಪೇತ ಉಪಮಾನ ವನ್ನಿತ್ತು ತೋರಿಸುತ್ತಾರೆ. ಕಬ್ಬಿಣದಿಂದ ಒಂದುಮೂರ್ತಿಯನ್ನು ತಯಾರಿಸು ವಾತನು ಕಬ್ಬಿಣವನ್ನೇ ವಸ್ತ್ರಾಕಾರವಾಗಿಯೂ, ಕಟಕ ಕುಂಡಲಾದ್ಯಾಭರಣಾಕಾ ರವಾಗಿಯೂ, ಕೈಯಲ್ಲಿ ಧರಿಸುವ ಆಯುಧಾಕಾರವಾಗಿಯೂ ಮತ್ತು ಆ ಮೂರ್ತಿ ಯ ವಾಹನಾಕಾರವಾಗಿಯೂ ತಯಾರಿಸುತ್ತಾನೆ. ಮತ್ತು ನಾಯಿ ನರ ವ್ಯಾಗ್ರಾ ದಿಗಳ ಆಕಾರವಾಗಿಯೂ ತಯಾರಿಸುವುದುಂಟು. ಇಂತಿಷ್ಟು ಆಕಾರವಾಗಿ ಭಿನ್ನ ಭಿನ್ನವಾಗಿ ತಯಾರಿಸಿದ್ದ ಮೂರ್ತಿಯನ್ನು ನೋಡಿ ಅರಿತುಕೊಳ್ಳುವವನು ಎಲ್ಲವೂ ಒಂದೇ ಕಬ್ಬಿಣವೇ ಎಂದು ತಿಳಿದುಕೊಳ್ಳುವನಾಗಲಿ (ಅಭೇದಜ್ಞಾನಮಾಡಿಕೊ ಳ್ಳುವನಾಗಲಿ) ಆ ಮೂರ್ತಿಯ ವಸ್ತ್ರವೇಬೇರೆ, ಆಯುಧವೇಬೇರೆ, ಆಭರಣಗಳೇ ಬೇರೆ, ವಾಹನವೇಬೇರೆ ಮತ್ತು ನಾಯಿ ನರ ವ್ಯಾಗ್ರಾದಿಗಳೇಬೇರೆ, ಎಂಬ ಭೇದ ಜ್ಞಾನಮಾಡಿಕೊಳ್ಳುವುದಿಲ್ಲ. ಏಕೆಂದರೆ ಅವೆಲ್ಲವೂ ಒಂದೇ ಕಬ್ಬಿಣದಿಂದಲೇ ತಯಾರಾಗಿರುವುದರಿಂದ ಕಬ್ಬಿಣ ಒಂದೇಎಂಬ ಅಭೇದ ಜ್ಞಾನಮಾಡಿಕೊಳ್ಳುತ್ತಾನೆ ಇದರಂತೆ ಘಟಪಟ ಮುಂತಾದ ಜ್ಞೇಯವಸ್ತುಗಳು ಭೇದಾಕಾರವಾಗಿ ಕಂಡರೂ ಜ್ಞಾನಿಯು ಅಭೇದವಾಗಿ ಭಾವಿಸುತ್ತಾನೆ. ಕಬ್ಬಿಣದಲ್ಲಿ ವಸ್ತ್ರಾಭರಣಗಳು ಕಲ್ಪಿತ ಗಳಾಗಿರುವಂತೆ ಆತ್ಮನಲ್ಲಿ ಘಟಪಟಾದಿ ಪ್ರಪಂಚವು ಕಲ್ಪಿತಮಯ ವಾಗಿರುತ್ತದೆ. ನಾಮರೂಪಾತ್ಮಕ ಪ್ರಪಂಚವನ್ನು ಸತ್ಯವೆಂದು ಅಜ್ಞಜನರು ತಿಳಿದುಕೊಂಡಂತೆ ಸು ಜ್ಞಾನಿಯು ತಿಳಿದುಕೊಂಡಿಲ್ಲ. ಮತ್ತೇನೆಂದರೆ ಸರ್ವಪ್ರಪಂಚವು ಚಿತ್ತಿನ ವಿವರ್ತ ವೆಂದು ಅರಿಯುತ್ತಾನೆ ನಾಮರೂಪಗಳನ್ನು ಅಲ್ಲಗಳೆದು "ಸರ್ವಂ ಖಲ್ವಿದಂ ಬ್ರಹ್ಮ ನೇಹನಾನಾಸ್ತಿ ಕಿಂಚನ" ಎಂಬ ಶ್ರುತಿವಚನಾನುಸಾರ ಬ್ರಹ್ಮಹೊರತು

ಮತ್ತೇನೂಇಲ್ಲವೆಂದು ಅರಿತುಕೊಳ್ಳುತ್ತಾನೆ. ಪೂರ್ಣಜ್ಞಾನಿಯು ಕಲ್ಪಿತ ಭೇದ ಮಯ ಪ್ರಪಂಚದಲ್ಲಿ ಅಕಲ್ಪಿತ ಅಭೇದಜ್ಞಾನವನ್ನು ಅಳವಡಿಸಿಕೊಂಡು ವಿಹರಿಸುತ್ತಾನೆ ಎಂಬ ಭಾವವು.

## ವಾರ್ಧಿಕ ಷಟ್ಪದಿ.

ಮೂರ್ತಿ ಲೋಹದ್ದಾಗ ಲದಕಿರುವ ಭೂಷಣವು ।
ವಸ್ತ್ರಾಯುಧಾದಿಗಳು ಲೋಹ ತಾನೆಂಬಂತೆ ।
ಮತ್ತೆ ನರ ನಾಯಿ ಗೋ ಮಹಿಷಿ ಸಿಂಹಾದಿಗಳುಲೋಹದಿಂ ನಿರ್ಮಿಸಲ್ಕೆ ।
ಎತ್ತನೋಡಲು ಲೋಹವಿರುವಂತೆ ಸರ್ವ ಪರ ।
ಮಾತ್ಮ ಮಯವೆಂಬ ಶ್ರುತಿವಚನದೋಲ್ ಸುಜ್ಞಾನಿ ।
ಚಿತ್ತೊಂದೆ ಯೆಂದರಿತು ನಾಮರೂಪಗಳನ್ನು ತೆಗೆದೊಗೆದು ವ್ಯವಹರಿಪನು ॥
॥೭೭॥

**ಅವತಾರಿಕೆ ;—** ಪೂರ್ಣಜ್ಞಾನಿಯು ಕಲ್ಪಿತ ಭೇದಮಯಪ್ರಪಂಚದಲ್ಲಿ ಅಕಲ್ಪಿತ ಅಭೇದಜ್ಞಾನವನ್ನು ಅಳವಡಿಸಿಕೊಂಡು ವ್ಯವಹರಿಸುತ್ತಾನೆ ಎಂದು ಹೇಳಿದಿರಿ. ಆದರೆ ಸಮಸ್ತ ಜನರು ಶರೀರಧರ್ಮದಿಂದ ವ್ಯವಹರಿಸುವುದರಲ್ಲಿ ಯಾವವ್ಯತ್ಯಾಸವೂ ತೋರುವುದಿಲ್ಲ. ಅಂದಮೇಲೆ ಜ್ಞಾನಿಯು ವ್ಯವಹಾರದಲ್ಲಿ ಶ್ರೇಷ್ಠತ್ವವೇನಿದೆ ? ಅಲ್ಲದೆ ಜ್ಞಾನಿಯನ್ನು ಗುರ್ತಿಸುವುದು ಹೇಗೆ ? ಎಂಬ ಪ್ರಶ್ನೆಗೆ ಜ್ಞಾನಿಯು ವ್ಯವಹಾರದಲ್ಲಿ ಶ್ರೇಷ್ಠತ್ವ ವಿರುವುದಿಲ್ಲ ವೆಂತಲೂ, ಆತನಲ್ಲಿರುವ ಆತ್ಮಜ್ಞಾನವುಮಾತ್ರ ಶ್ರೇಷ್ಠತ್ವವಾದುದೆಂತಲೂ, ಆತನನ್ನು ಆತ್ಮನಜ್ಞಾನದಿಂದಲೇ ಗುರುತಿಸಬೇಕೆಂಬ ಅಭಿಪ್ರಾಯಮುಳ್ಳ ಉತ್ತರವನ್ನು ಮುಂದಿನ ಶ್ಲೋಕದಲ್ಲಿ ಸೂಚಿಸುತ್ತಾರೆ.

## * ಆರ್ಯಾವೃತ್ತ.

ತ್ವಗಸೃಕ್ಫಲ ಮುಖ್ಯ ಧಾತು ದೇಹೇ ರತಿ ।
ನಿದ್ರಾಶನ ಮುಖ್ಯ ದೇಹ ಧರ್ಮೇ ॥
ತುಲಿತೇ ದ್ವಿಜ ಹೂಣ ಮುಖ್ಯ ಮರ್ತ್ಯೇನ ।
ಮಹಾನ್ ಕೋಽಪಿ ಮಹತ್ವ ಮಾತ್ಮವಿತ್ವಂ ॥ ೭೮ ॥

**ಪದಚ್ಛೇದ ;—** ತ್ವಕ್, ಅಸೃಕ್, ಫಲಮುಖ್ಯ, ಧಾತು, ದೇಹೇ, ರತಿ, ನಿದ್ರಾ, ಅಶನಮುಖ್ಯ, ದೇಹಧರ್ಮೇ. ತುಲಿತೇ ದ್ವಿಜ ಹೂಣಮುಖ್ಯ. ಮರ್ತ್ಯೇ, ನ. ಮಹಾನ್, ಕೋಪಿ, ಮಹತ್ವಂ, ಆತ್ಮವಿತ್ವಂ.

---

* ೧ ನೇ ಶ್ಲೋಕದ ಛಂದಸ್ಸನ್ನು ನೋಡಿ.

**ಟೀಕ :-** ತ್ವಕ್ = ಚರ್ಮ | ಅಸೃಕ್ = ರುಧಿರ | ಪಲಮುಖ್ಯ = ಮಾಂಸ ಮುಂತಾದ | ಧಾತು = ಸಪ್ತಧಾತು ಮಯವಾದ | ದೇಹೇ = ಶರೀರ ದಲ್ಲಿ | ರತಿ = ಕಾಮಕೇಳಿ | ನಿದ್ರಾ = ಸುಷುಪ್ತಿ | ಅಶನಮುಖ್ಯ = ಭೋಜನ ಮುಂತಾದ| ದೇಹಧರ್ಮೇ= ತನುವಿನಧರ್ಮವು| ತುಲಿತೇ = ತುಲನಮಾಡಲಾಗಿ | ದ್ವಿಜ = ಬ್ರಾಹ್ಮಣ | ಹೂಣಮುಖ್ಯ = ಶೂದ್ರಮೊದಲಾದ | ಮರ್ತ್ಯೇ = ಜನ ರಲ್ಲಿ | ಮಹಾನ್ = ಮಹತ್ತರವಾದುದು | ಕೋಪಿ = ಯಾವುದು | ನ = ಇರುವುದಿಲ್ಲ | ಆತ್ಮವಿತ್ವಂ = ಆತ್ಮಜ್ಞಾನವುಮಾತ್ರ | ಮಹತ್ವಂ = ಶ್ರೇಷ್ಠವಾ ದುದು |

ತಾ ;- ಚರ್ಮರಕ್ತಮುಂತಾದ ಸಪ್ತಧಾತುಯುಕ್ತ ಬ್ರಾಹ್ಮಣ ಶೂದ್ರ ಮುಂತಾ ದವರಶರೀರದಲ್ಲಿ ದೇಹಧರ್ಮಗಳಾದ ಕಾಮಕೇಳಿ ನಿದ್ರಾಶನ ಮುಂತಾದವುಗಳನ್ನು ವಿಚಾರಮಾಡಿದರೆ ಹೆಚ್ಚುಕಡಿಮೆಯಿರುವುದಿಲ್ಲ, ಆದರೆ ಅವುಗಳಲ್ಲಿ ಆತ್ಮಜ್ಞಾನವು ಮಾತ್ರ ಶ್ರೇಷ್ಠವಾಗಿರುತ್ತದೆ

**ವಿಶೇಷಾರ್ಥ ;-** ಆಹಾರ ನಿದ್ರಾ ಮೈಥುನಾದಿಗಳು, ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಚಾಂಡಾಲ ಜಾತೀಯರಲ್ಲಿ ವಯೋಧರ್ಮಕ್ಕನುಸರಿಸಿ ಸಮಾನ ವಾಗಿರುತ್ತವೆ. ಅಂದರೆ ಸರ್ವರಲ್ಲಿಯೂ ಸಮಾನವಾಗಿ ತೋರುತ್ತವೆ. ರಕ್ತ ಮಾಂಸಾಸ್ತಿ ಮುಂತಾದ ಸಪ್ತಧಾತುಗಳು ಶರೀರಕ್ಕನುಸರಿಸಿ ಸರ್ವ ಮಾನವರಲ್ಲಿ ಸಮಾನವಾಗಿ ತೋರುತ್ತವೆ. ಇವುಗಳ ದೃಷ್ಟಿಯಿಂದ ಶ್ರೇಷ್ಠ ಕನಿಷ್ಠತೆಯನ್ನು ತುಲನಮಾಡುವುದಕ್ಕೆ ಬರುವುದಿಲ್ಲ. ಆದರೆ ಬ್ರಾಹ್ಮಣಾದಿ ಯಾವ ಜಾತಿಯವ ರಲ್ಲಾಗಲಿ ಆತ್ಮಜ್ಞಾನವೊಂದಿದ್ದರೆ ಆತನನ್ನೇ ಶ್ರೇಷ್ಠನೆನ್ನಬೇಕು. ಆ ಆತ್ಮಜ್ಞಾನಿ ಯನ್ನು ಗುರ್ತಿಸಬೇಕಾದರೆ ಕಷ್ಟಸಾಧ್ಯವು. ಆದರೂ ಬ್ರಾಹ್ಮಣ ಶೂದ್ರರ ಶರೀರ ದೃಷ್ಟಿಯಿಂದ ಭೇದವು ತೋರಿದ್ದಾದರೂ, ವೇದಾಧ್ಯಯನ ದೃಷ್ಟಿಯಿಂದ ಬ್ರಾ ಹ್ಮಣ ನೆಂತಲೂ, ಅನಧ್ಯಯನ ದೃಷ್ಟಿಯಿಂದ ಶೂದ್ರನೆಂದೂ, ಗುರ್ತಿಸುವಂತೆ ಭಾವದಲ್ಲಿ ಬೇರೂರಿಕೊಂಡಿರುವ ಆತ್ಮ ಜ್ಞಾನ ನಿಷ್ಠೆಯಿಂದ ಇರುವಾತನನ್ನು ಆತ್ಮ ಜ್ಞಾನಿಯೆಂದೂ ಅಂತಹ ಜ್ಞಾನನಿಷ್ಠೆಯಿಂದಲೇ ಗುರ್ತಿಸಬೇಕು. ಬರೀ ವ್ಯವ ಹಾರದ ದೃಷ್ಟಿಯಿಂದ ಆತ್ಮಜ್ಞಾನಿಯನ್ನು ಗುರ್ತಿಸುವುದಕ್ಕಾಗುವುದಿಲ್ಲ. ಒಟ್ಟಾರೆ ಪರಬ್ರಹ್ಮನಾನೆಂಬ ಅಪರೋಕ್ಷಜ್ಞಾನವುಳ್ಳವನನ್ನೇ ಜ್ಞಾನಿಯೆಂದು ಗುರ್ತಿಸಬೇಕು ಎಂಬ ಭಾವವು.

ಭಾಮಿನಿಷಟ್ಪದಿ.

ರಕ್ತ ಮಾಂಸವು ಚರ್ಮ ಮೊದಲಹ |
ಸಪ್ತ ಧಾತುಗಳಿಂದ ಕೂಡಿದ |
ಗಾತ್ರದಲಿ ರತಿಸೌಖ್ಯ ನಿದ್ರಾಹಾರ ಸಮವಿರಲು ||

ಮರ್ತ್ಯರಲಿ ದ್ವಿಜ ಶೂದ್ರರೆಂಬುವು।
ದೆತ್ತಣದು ತಾನಧಿಕ ನ್ಯೂನತೆ।
ಆತ್ಮಜ್ಞಾನವು ಮಾತ್ರ ಸರ್ವಕ್ಕಧಿಕ ಮಾಗಿಹುದು ॥ ೭೮ ॥

**ಅವತಾರಿಕೆ ;—** ದೇಹದೃಷ್ಟಿಯಿಂದಲೂ, ವ್ಯವಹಾರದೃಷ್ಟಿಯಿಂದಲೂ. ಸರ್ವಜನರು ಸಮಾನವಾಗಿದ್ದರೂ ಆತ್ಮಜ್ಞಾನಿಯು ಮಾತ್ರಶ್ರೇಷ್ಠನೆಂದು ಹೇಳಿದಿರಿ. ಮತ್ತು ಆತ್ಮಜ್ಞಾನಿಯನ್ನು ಗುರ್ತಿಸ ಬೇಕಾದರೆ ಆತ್ಮಜ್ಞಾನವೇಬೇಕಾಗುತ್ತದೆಂತಲೂ ಹೇಳಿದಿರಿ. ಇರಲಿ ಆದರೆ ಅಂತಹ ಆತ್ಮ ಜ್ಞಾನಿಯು ಯಾವಜಾತಿಯಲ್ಲಿದ್ದರೂ ಯೋಗ್ಯನೆನಿಸುವನೆ ? ಎಂಬ ಪ್ರಶ್ನೆಗೆ ಆತ್ಮಜ್ಞಾನಿಯು ಯಾವ ಜಾತಿಯಲ್ಲಿದ್ದರೂ ಶ್ರೇಷ್ಠನೆ ಎಂಬುದಕ್ಕೆ ಪೂರ್ವಿಕರ ಉದಾಹರಣೆಗಳೊಂದಿಗೆ ಸಮರ್ಪಕವಾದ ಉಪಮಾನವನ್ನಿತ್ತು ಮುಂದಿನಶ್ಲೋಕದಲ್ಲಿ ಉತ್ತರಿಸುತ್ತಾರೆ.

## * ಮಾಲಿನೀವೃತ್ತ.

**ಪ್ರತಿಫಲಮಿವ ಪೂಷ್ಣಸ್ತೀರ್ಥ ಕುಲ್ಯೋಃ ಪರಿಸ್ಥಂ।**
**ವಿಯದಿವ ಶಿವಗೇಹಾರಿಷ್ಟ ವೇಶ್ಮಾಂತರಸ್ಥಂ।**
**ನಿಜವಿದಮಲ ಏವಾಗ್ರ್ಯಾಂತ್ಯ ಜಾತ್ಯೋರ್ಭವೋಽಪಿ।**
**ಶ್ರುತಿಪಥ ಮಭಿನೇ ಯಾವತ್ರ ಸಾನಂದ ಸೂತೌ ॥ ೭೯ ॥**

**ಪದಚ್ಛೇದ :–** ಪ್ರತಿಫಲಂ, ಇವ, ಪೂಷ್ಣಃ, ತೀರ್ಥ, ಕುಲ್ಯೋಃಪರಿಸ್ಥಂ, ವಿಯತ್, ಇವ, ಶಿವಗೇಹ, ಅರಿಷ್ಟ, ವೇಶ್ಮಾಂತರಸ್ಥಂ, ನಿಜವಿತ್, ಅಮಲ, ಏವ, ಅಗ್ರ, ಅಂತ್ಯ, ಜಾತ್ಯೋಃ ಭವೋಽಪಿ, ಶ್ರುತಿಪಥಂ ಅಭಿನೇಯೌ, ಅತ್ರ, ಸಾನಂದ, ಸೂತೌ.

**ಟೀಕೆ ;—** ತೀರ್ಥ = ಗಂಗಾನದ್ಯಾದಿ ನಿರ್ಮಲೋದಕ । ಕುಲ್ಯೋಃಪರಿಸ್ಥಂ = ಮಲಿನಕಾಲುವೆಯ ಮೇಲ್ಭಾಗದಲ್ಲಿದ್ದ । ಪೂಷ್ಣಃ = ಸೂರ್ಯನ । ಪ್ರತಿಫಲಂ = ಪ್ರತಿಬಿಂಬವು । ಇವ = ಹೇಗೋಹಾಗೆ । ಶಿವಗೇಹ = ಶಿವದೇವಾಲಯ । ಅರಿಷ್ಟವೇಶ್ಮಾಂತರಸ್ಥಂ = ಸೂತಿಕಾ ಮನೆಯಲ್ಲಿದ್ದ । ವಿಯತ್ = ಆಕಾಶವು । ಇವ = ಹೇಗೋಹಾಗೆ । ನಿಜವಿತ್ = ಬ್ರಹ್ಮಜ್ಞಾನಿಯು । ಅಗ್ರ = ಬ್ರಾಹ್ಮಣ । ಅಂತ್ಯಃ = ಚಾಂಡಾಲ । ಜ್ಯಾತ್ಯೋಃ ಜಾತಿಗಳಲ್ಲಿ । ಭವೋಽಪಿ = ಜನ್ಮಿಸಿದವನಾದಾಗ್ಯೂ । ಅಮಲ = ಶುದ್ಧನು । ಏವ = ನಿಜವು । ಅತ್ರ = ಈ ವಿಷಯದಲ್ಲಿ । ಶ್ರುತಿಪಥಂ = ವೇದಮಾರ್ಗವನ್ನು ಹಿಡಿದು । ಅಭಿನೇಯೌ

* 23 ನೇ ಶ್ಲೋಕದ ಛಂದಸ್ಸನ್ನು ನೋಡಿ

= ನಟಿಸುವಂಥ । ಸಾನಂದ ಸೂತೌ = ಸಾನಂದ ಸೂತರೀರ್ವರು. (ಉಪಮಾನ ರಾಗಿರುವರು.)

**ತಾತ್ಪರ್ಯ ;—** ತೀರ್ಥದಲ್ಲಿಯೂ ಕಾಲುವೆಯಲ್ಲಿಯೂ ಇರುವ ನೀರಿನಲ್ಲಿ ಪ್ರತಿಬಿಂಬಿಸಿದ ಸೂರ್ಯನು ನಿರ್ಮಲನಾಗಿರುವಂತೆ, ಮತ್ತು ಶಿವದೇಗುಲದಲ್ಲಿಯೂ ಸೂತಿಕಾ ಗೃಹದಲ್ಲಿಯೂ, ಇರುವ ಆಕಾಶವು ನಿರ್ಮಲವಾಗಿರುವಂತೆ ಬ್ರಹ್ಮಜ್ಞಾನಿಯು ಬ್ರಾಹ್ಮಣಜಾತಿಯಲ್ಲಿ ಹುಟ್ಟಿರಲಿ, ಅಥವಾ ಅಂತ್ಯಜಾತಿಯಲ್ಲಿ ಹುಟ್ಟಿರಲಿ, ಆತನು ಯೋಗ್ಯನೇ ಇರುತ್ತಾನೆ. ಶ್ರುತಿಮಾರ್ಗವನ್ನನುಸರಿಸಿದ ಸಾನಂದ ಸೂತರಿಬ್ಬರೂ ಈ ವಿಷಯದಲ್ಲಿ ಉದಾಹರಣೆಯಾಗಿರುತ್ತಾರೆ.

**ವಿಶೇಷಾರ್ಥ :-** ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದವನು ಉಪನಯನಾದಿಗಳಿಂದ ಸಂಸ್ಕರಿಸಲ್ಪಟ್ಟು ವೇದಾಧ್ಯಯನದಿಂದ ಯುಕ್ತನಾಗಿ ಪವಿತ್ರನಾಗಿರುತ್ತಾನೆಂತಲೂ, ಶೂದ್ರಜಾತಿಯಲ್ಲಿ ಹುಟ್ಟಿದವನು ಉಪನಯನಾದಿಗಳಿಂದ ಸಂಸ್ಕರಿಸಲ್ಪಡದೆ ವೇದಾಧ್ಯಯನ ವಿರಹಿತನಾಗಿ ಅಪವಿತ್ರನಾಗಿರುತ್ತಾನೆಂತಲೂ, ಶಾಸ್ತ್ರಗಳು ಹೇಳುತ್ತವೆ. ಮತ್ತು ಆ ಶಾಸ್ತ್ರಗಳಂತೆ ಜನರೂ ತಿಳಿದುಕೊಂಡಿರುತ್ತಾರೆ. ಆದರೆ ಪವಿತ್ರಾಪವಿತ್ರತೆಗಳೆರಡು ಕರ್ಮಬೋಧಕ ಶಾಸ್ತ್ರಗಳಲ್ಲಿಯೂ, ಕರ್ಮಠರಲ್ಲಿಯೂ, ಇರುತ್ತವೆ. ಅಂದರೆ ಕರ್ಮ ತತ್ಪರರ ದೃಷ್ಟಿಯಲ್ಲಿ ಪವಿತ್ರಾಪವಿತ್ರತೆಗಳು ತೋರುತ್ತವೆ. ಶ್ರುತಿ ದೃಷ್ಟಿಯಲ್ಲಿಯೂ. ಜ್ಞಾನಿಗಳ ದೃಷ್ಟಿಯಲ್ಲಿಯೂ, ಆ ಪವಿತ್ರಾಪವಿತ್ರತೆಗಳು ತೋರುವುದಿಲ್ಲ. ಬ್ರಹ್ಮನಿಷ್ಠನು ಯಾವ ಜಾತಿಯಲ್ಲಿ ಸಂಜನಿಸಿದರೂ ಆತನು ಪವಿತ್ರನೇ ಆಗಿರುತ್ತಾನೆ, ಎಂಬುದಕ್ಕೆ ಗ್ರಂಥಕರ್ತರು ಎರಡು ಉಪಮಾನಗಳನ್ನು ಕೊಟ್ಟು ಪೂರ್ವಿಕರ ದೃಷ್ಟಾಂತವನ್ನು ಮುಂದಿಟ್ಟು ಮನವರಿಕೆ ಮಾಡಿಕೊಡುತ್ತಾರೆ ಹೇಗೆಂದರೆ 'ಸೂರ್ಯನು ನಿರ್ಮಲ ತೀರ್ಥವೆನಿಸಿಕೊಂಡ ಗಂಗಾನದಿಯ ನೀರಿನಲ್ಲಿ ಪ್ರತಿಬಿಂಬಿಸಿರಲಿ, ಮತ್ತು ಬೀದಿಯ ಕಸಕಡ್ಡಿಯಿಂದ ಕೂಡಿಕೊಂಡು ಹರಿಯುವ ಕಾಲುವೆಯ ನೀರಿನಲ್ಲಿ ಪ್ರತಿಬಿಂಬಿಸಿರಲಿ, ಆ ಸೂರ್ಯನು ಸದಾ ನಿರ್ಮಲನಾಗಿರುವಂತೆ ಮತ್ತು ಪವಿತ್ರವಾದ ಈಶ್ವರ ದೇವಾಲಯದಲ್ಲಿರುವ ಆಕಾಶವು ಅಪವಿತ್ರವಾದ ಸೂತಿಕಾ ಗೃಹದಲ್ಲಿರುವ ಆಕಾಶವು ಸದಾ ನಿರ್ಮಲವಾಗಿಯೇ ಇರುವಂತೆ ಬ್ರಹ್ಮಜ್ಞಾನಿಯು ಬ್ರಾಹ್ಮಣಜಾತಿಯಲ್ಲಿ ಹುಟ್ಟಿದ್ದರೂ, ಚಾಂಡಾಲ ಜಾತಿಯಲ್ಲಿ ಹುಟ್ಟಿದ್ದರೂ ಆತನು ಸದಾ ಪವಿತ್ರನಾಗಿಯೇ ಇರುತ್ತಾನೆ. "ಜಾತಿ ಹೀನನ ಮನೆಯಲ್ಲಿರುವ ಜ್ಯೋತಿ ಹೀನವೆ ?" ಎಂಬಂತೆ ಬ್ರಹ್ಮಜ್ಞಾನಿಯು ಯಾವ ಜಾತಿಯಲ್ಲಿ ಹುಟ್ಟಿದ್ದರೂ ಆತನನ್ನು ಪವಿತ್ರನೆಂತಲೇ ತಿಳಿಯಬೇಕು. ಸಾನಂದ ಋಷಿಯು ಬ್ರಾಹ್ಮಣನು ಸೂತನು ಶೂದ್ರನು. ಆದರೂ ಇವರಿಬ್ಬರೂ ಬ್ರಹ್ಮನಿಷ್ಠೆಯಲ್ಲಿ ಸಮಾನರು. ಎಂಬುದನ್ನು ನಾವು ಶಾಸ್ತ್ರದೃಷ್ಟಿಯಿಂದ ಅರಿತುಕೊಳ್ಳಬಹುದು, ಅವರಿಬ್ಬರೂ ಶ್ರುತಿಪಥವನ್ನು ಅನುಸರಿಸಿದನ

ರಾಗಿರುತ್ತಾರೆ, ಅವರಲ್ಲಿ ಜಾತಿತ್ವ ದೃಷ್ಟಿಯಿಂದ ಮೇಲುಕೀಳು ಎಂಬುದು ಕಂಡು ಬಂದರೂ ಅವರು ಅರಿತು ಅಳವಡಿಸಿಕೊಂಡು ಆಚರಿಸಿದ ಬ್ರಹ್ಮ ನಿಷ್ಠತೆಯಲ್ಲಿ ಮಾತ್ರ ಯಾವಭೇದವೂ ತೋರುವುದಿಲ್ಲ "ಕೆಸರಿನಲ್ಲಿ ಹುಟ್ಟಿದ ಕಮಲವು ಪರಿಮಳಯುಕ್ತವಾಗಿರದೆ ?" "ಕಾಡುಕಲ್ಲುಗಳಲ್ಲಿಹುಟ್ಟಿದ ವಜ್ರಕ್ಕೆ ಬೆಲೆಸಿಗಲಾರದೆ ?" ಆದ್ದರಿಂದ ಚಾಂಡಾಲ ಜಾತಿಯಲ್ಲಿ ಹುಟ್ಟಿದ್ದರೂ, ಬ್ರಹ್ಮಜ್ಞಾನಿಯು ಪವಿತ್ರನಾಗಿಯೇ ಇರುತ್ತಾನೆ. ಎಂಬ ಭಾವವು

## ವಾರ್ಧಿಕ ಷಟ್ಪದಿ.

ತೀರ್ಥದಲಿ ಹಳ್ಳದಲಿ ಸೂರ್ಯ ಪ್ರತಿಬಿಂಬಕ್ಕೆ।
ಮತ್ತೆ ಶಿವದೇಗುಲದಿ ಸೂತಿಕಾಗೃಹದಲ್ಲಿ।
ಯುಕ್ತವಾದಾಕಾಶಕೆಂತುತ್ತಮಧಮವೆಂಬುವುದಿಲ್ಲವದರಂದದಿ॥
ಆತ್ಮನೇತ್ರನು ಬ್ರಾಹ್ಮಣಾಂತ್ಯಜಾತಿಗಳಲ್ಲಿ।
ಉತ್ಪತ್ತಿಯಾಗಿದ್ದರಮಲನಾಗಿರುತಿಹನು।
ಪ್ರತ್ಯಧ್ವವನು ಹಿಡಿದ ಸಾನಂದ ಸೂತರಿದಕುಪಮಾನವಾಗಿರ್ಪರು ॥೭೯॥

**ಅವತಾರಿಕೆ:—** ಬ್ರಹ್ಮಜ್ಞಾನಿಯು ಯಾವ ಜಾತಿಯಲ್ಲಿ ಹುಟ್ಟಿದರೂ, ಅವನು ಪವಿತ್ರನೇ ಎಂದು ಹೇಳಿದಿರಿ. ಆದರೆ ಬ್ರಹ್ಮಜ್ಞಾನಿಯು ಯಾವ ಆಶ್ರಮದಲ್ಲಿ ಇರಬೇಕು ? ಅಂದರೆ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಿಗಳೆಂಬ ಚತುರಾಶ್ರಮಗಳಲ್ಲಿ ಸನ್ಯಾಸಾಶ್ರಮವು ಉತ್ತಮವಾದ್ದರಿಂದ ಬ್ರಹ್ಮಜ್ಞಾನಿಯು ಸನ್ಯಾಸಿಯಾಗುವುದು ಯೋಗ್ಯವಲ್ಲವೆ? ಎಂಬ ಪ್ರಶ್ನೆಗೆ ಬ್ರಹ್ಮಜ್ಞಾನಿಯು ಯಾವ ಆಶ್ರಮದಲ್ಲಿದ್ದರೂ ಅವನನ್ನು ಸನ್ಯಾಸಿಯೆಂತಲೇ ತಿಳಿಯಬೇಕು. ಎಂಬ ಉತ್ತರವನ್ನು ಮುಂದಿನ ಶ್ಲೋಕದಲ್ಲಿ ಸೂಚಿಸುತ್ತಾರೆ.

## * ಶಾರ್ದೂಲ ವಿಕ್ರೀಡಿತಾ ವೃತ್ತ.

ಪಾಶೋ ವಿಶ್ವಮಿಷಂ ಪಶು ಸ್ತದನುಭು ಗ್ಜೀವಃ ಪತಿಸ್ತದ್ವಯೋ।
ರ್ನೇತಾಂ ಶಂಭು ರತಮ್ನ ಣ್ಯೈಸ್ತ್ರಿಪು ಟಿತೇ, ಪ್ಯಸ್ಮಿನ್ಪದಾರ್ಥತ್ರಯೇ।
ಅಂತಸ್ಸೂತ್ರ ಮಹಾಘಟೇ ಮಠ ಮಹಾ ದ್ಯೋಮ್ನೋವ ಭಿನ್ನೇತರಂ।
ಬ್ರಹ್ಮೇತ್ಯಾತ್ಮನಿ ವೇತ್ತಿಯಸ್ಸಚ ಯತಿ, ರ್ವ್ಯಾಘೋsಸ್ತು ವಾ ಪುಲ್ಕಸಃ ॥೮೦॥

* ೫ ನೇ ಶ್ಲೋಕದ ಛಂದಸ್ಸನ್ನು ನೋಡಿ.

**ಪದಚ್ಛೇದ:—** ಪಾಶಃ, ವಿಶ್ವಂ, ಇದಂ, ಪಶುಃ, ತದನುಭುಕ್, ಜೀವಃ, ಪತಿಃ, ತದ್ವಯೋಃ, ನೇತಾ, ಶಂಭುಃ, ಅತತ್, ಗುಣೈಃ, ತ್ರಿಪುಟಿತೇಪಿ, ಅಸ್ಮಿನ್ ಪದಾರ್ಥತ್ರಯೇ, ಅಂತಸ್ಯೂತ, ಮಹಾಘಟೇ, ಮಠಮಹತ್, ಯೋಮ್ನಿ, ಇವ ಭಿನ್ನೇತರಂ, ಬ್ರಹ್ಮ, ಆತ್ಮನಿ, ವೇತ್ತಿ, ಯಃ, ಸಃ, ಚ, ಯತಿಃ, ವ್ಯಾಧೋಸ್ತು, ವಾ, ಪುಲ್ಕಸಃ.

**ಟೀಕೆ:—** ಇದಂ = ಈ । ವಿಶ್ವಂ = ಜಗತ್ತೇ । ಪಾಶಃ = ಪಾಶವು । ತದನುಭುಕ್ = ಆಪಾಶವನ್ನು ಅನುಭವಿಸುವ । ಜೀವಃ = ಚಿದಾಭಾಸನೇ । ಪಶುಃ = ಪಶುವು । ತದ್ವಯೋಃ = ಆ ಪಾಶ ಪಶುರೂಪ ಜಗಜ್ಜೀವರನ್ನು । ನೇತಾ = ನಿಯಮಿಸುವಂತಹ । ಶಂಭುಃ = ಸುಖವನ್ನುಂಟುಮಾಡುವ ಈಶ್ವರನು । ಪತಿಃ = ಪತಿಯು । ಗುಣೈಃ = ಸತ್ವಾದಿ ಗುಣಗಳಿಂದ । ಅಸ್ಮಿನ್ = ಈ ಪಾಶ ಪಶು ಪತಿ । ಪದಾರ್ಥತ್ರಯೇ = ಮೂರುವಿಧ ಪದಾರ್ಥಗಳಲ್ಲಿ । ತ್ರಿಪುಟಿತೇಪಿ = ಪಾಶಪಶುಪತಿ ಭೇದದಿಂದ ಮೂರು ವಿಧವಾದಾಗ್ಯೂ ಪರಶಿವನು । ಅತತ್ = ಆ ತ್ರಿಪುಟಿವಿರಹಿತನೇ । ಮಹಾಘಟೇ = ವಿಶೇಷವಾದ ಘಟಾಕಾಶದ । ಮಠ ಮಹತ್ ವ್ಯೋಮ್ನಿ = ವಿಶೇಷವಾದ ಮಠಾಕಾಶದ । ಅಂತಸ್ಯೂತ = ಒಳಗೆತುಂಬಿದಂಥ । ಭಿನ್ನೇತರಮಿವ = ಏಕವಾದ ಸಾಮಾನ್ಯಾಕಾಶದಂತೆ । ಬ್ರಹ್ಮ = ಪರಬ್ರಹ್ಮವು । ಆತ್ಮನಿ = ಆತ್ಮನಾದ ನನ್ನ ಸ್ವರೂಪದಲ್ಲಿ ಅಭೇದವಾಗಿರುತ್ತದೆಂದು । ಯಃ = ಯಾವಾತನು । ವೇತ್ತಿ = ಅರಿಯುತ್ತಾನೋ । ಸಃ = ಆತನು । ವ್ಯಾಧೋಸ್ತು = ಭಿಲ್ಲನಾಗಿರಲಿ । ವಾ =ಅಥವಾ । ಪುಲ್ಕಸಃ ಚ = ಅಂತ್ಯಜನಾಗಿರಲಿ । ಯತಿಃ = ಸನ್ಯಾಸಿಯು.

**ತಾತ್ಪರ್ಯ ;—** ನಾಮರೂಪಾತ್ಮಕವಾದ ಪ್ರಪಂಚವು ಪಾಶಪದಾರ್ಥವು. ಪ್ರಪಂಚ ವಿಷಯೋಪ ಭೋಗಿಯಾದ ಜೀವನು ಪಶುಪದಾರ್ಥನು. ಈ ಪದಾರ್ಥ ದ್ವಯಗಳನ್ನು ನೇಮಿಸುವ ಈಶ್ವರನು ಪತಿಪದಾರ್ಥನು. ಈ ಪದಾರ್ಥತ್ರಯಗಳು ಸತ್ವಾದಿ ಗುಣ ತ್ರಯಗಳಿಂದ ಏರ್ಪಟ್ಟಿರುತ್ತವೆ. ಈ ತ್ರಿಪುಟಿಗಳಿಗೆ ಪರಬ್ರಹ್ಮವು ವಿಶೇಷವಾದ ಘಟಮಠಗಳ ಆಕಾಶದಲ್ಲಿ ಸಾಮಾನ್ಯಾಕಾಶವು ವ್ಯಾಪಿಸಿರುವಂತೆ ವ್ಯಾಪಿಸಿರುತ್ತದೆ. ಅಂದರೆ ಪರಬ್ರಹ್ಮವು ತ್ರಿಪುಟಿಗಳಿಗೆ ಹೊರತಾಗಿದೆ. ಅಂತಹ ಬ್ರಹ್ಮವು ನನ್ನ ಸ್ವರೂಪವಾಗಿರುತ್ತದೆ. ಎಂದು ಯಾವನು ತಿಳಿಯುತ್ತಾನೆಯೋ ಅವನು ವ್ಯಾಧನಾಗಿರಲಿ ಅಥವಾ ಚಾಂಡಾಲನಾಗಿರಲಿ ಅವನೇ ಸನ್ಯಾಸಿಯು.

**ವಿಶೇಷಾರ್ಥ;—** ವೀರಶೈವ ಮತಸಿದ್ಧಾಂತದಂತೆ ಪಾಶ ಪಶು ಪತಿ ಗಳೆಂಬ ತ್ರಿವಿಧ ಪದಾರ್ಥಗಳುಂಟು. ಶಬ್ದ, ಸ್ಪರ್ಶ ರೂಪ ರಸ ಗಂಧಗಳೆಂಬ ಪಂಚ

ವಿಷಯಗಳಿಂದ ಜೀವಿಗಳ ಭೋಗಕ್ಕೆಡೆಗೊಟ್ಟು ನಾಮ ರೂಪಗಳನ್ನು ಹಿಡಿದು ಕೊಂಡು ತೋರುವ ಪ್ರಪಂಚಕ್ಕೆ ಪಾಶಪದಾರ್ಥವೆಂಬ ಹೆಸರು ಪ್ರಪಂಚದಲ್ಲಿನ ವಿಷಯೋಪಭೋಗದಲ್ಲಿ ವ್ಯವಹರಿಸುವ ಜೀವನಿಗೆ ಪಶುಪದಾರ್ಥವೆಂಬ ಹೆಸರು. ಈ ಜಗಜ್ಜೀವಿಗಳನ್ನು ನಿಯಮಿಸುವ ಮಾಯಾ ವಿಶಿಷ್ಟನಾದ ಈಶ್ವರನಿಗೆ ಪತಿಪದಾರ್ಥವೆಂಬ ಹೆಸರು. ಈಶ್ವರನು ಸರ್ವ ಜೀವಿಗಳ ಹೃದಯದಲ್ಲಿದ್ದು ಅಂತರ್ಯಾಮಿ ರೂಪದಿಂದಲೂ, ಜೀವಿಗಳು ಹೀಗೆಯೇ ಪ್ರವರ್ತಿಸಬೇಕೆಂದು ಶಾಸನಮಾಡುವ ವೇದ ಸ್ವರೂಪದಿಂದಲೂ, ನಿಯಾಮಕ ನಾಗಿರುತ್ತಾನೆ. ಈ ಪಾಶ ಪಶು ಪತಿ ಪದಾರ್ಥಗಳು ಗುಣತ್ರಯಗಳನ್ನು ಹಿಡಿದುಕೊಂಡಿರುತ್ತವೆ. ಸತ್ವಗುಣವನ್ನು ಹಿಡಿದು ಕೊಂಡು ಪತಿ ಪದಾರ್ಥವು, ರಜೋಗುಣವನ್ನು ಹಿಡಿದುಕೊಂಡು ಪಶುಪದಾರ್ಥವು ತಮೋಗುಣವನ್ನು ಹಿಡಿದುಕೊಂಡು ಪಾಶಪದಾರ್ಥವು ಇರುತ್ತದೆಂದು ತಿಳಿಯಬೇಕು. ಈ ಪಾಶ ಪಶು ಪತಿರೂಪ ತ್ರಿಪುಟಿಗಳು ಭೇದವಾಗಿ ತೋರಿದರೂ ಇವುಗಳಲ್ಲಿ ಪರ ಬ್ರಹ್ಮವು ಘಟಮಠಗಳಲ್ಲಿ ಮಹಾಕಾಶವೊಂದೇ ವ್ಯಾಪಿಸಿರುವಂತೆ ಬಾಹ್ಯಾಂತರ ವ್ಯಾಪಿಸಿಕೊಂಡಿರುತ್ತದೆ ಅಂತಹ ಪರಿಶುದ್ಧ ನಿರುಪಾಧಿಕ ಬ್ರಹ್ಮವೇ ನನ್ನ ಸ್ವರೂಪವೆಂದು ಯಾವ ಮಹಾತ್ಮನು ತಿಳಿಯುತ್ತಾನೆಯೋ ಆ ಮಹಾತ್ಮನು ಬಿಲ್ಲಂ ಪಿಡಿದು ಮೃಗಗಳಂ ಹತಿಸಿ ಜೀವಿಸುವ ವ್ಯಾಧನಾಗಿರಲಿ ನಿಕೃಷ್ಟವಾದ ಚಾಂಡಾಲನಾಗಿರಲಿ ಯತಿವರ್ಯನು (ಸನ್ಯಾಸಿಯು) ಎನಿಸಿಕೊಳ್ಳುತ್ತಾನೆ. ಸ್ವರೂಪಜ್ಞಾನವಿಲ್ಲದೆ ಬರೀ ಕಾಷಾಯಾಂಬರಗಳನ್ನು ಧರಿಸಿದರೆ ಅವನಿಗೆ ವೇಷಧಾರಿಯೆನ್ನಬೇಕು. ಬ್ರಹ್ಮನಿಷ್ಠನು ಚತುರಾಶ್ರಮಗಳಲ್ಲಿ ಯಾವ ಆಶ್ರಮದಲ್ಲಿದ್ದರೂ ಚತುರ್ವರ್ಣಗಳಲ್ಲಿ ಯಾವ ವರ್ಣದವನಾದರೂ ಆತನೇ ನೈಜವಾದ ಸನ್ಯಾಸಿಯು ಆತನು ಪೂಜೆವಂದನಾದಿಗಳಿಗೆ ಅರ್ಹತೆ ಯುಳ್ಳವನು ಎಂಬ ಭಾವವು.

## ವಾರ್ಧಿಕ ಷಟ್ಪದಿ

ಪಾಶವೆಂಬುದು ವಿಶ್ವವಾವಿಶ್ವ ವಿಷಯಂಗ ।
ಳಾಸಕ್ತಿಯಿಂದ ವ್ಯವಹರಿಪ ಜೀವನೆ ಪಶುವು ।
ಈಶನೇಪತಿಯು ತ್ರೈಗುಣವಿಡಿದು ಕೊಂಡಿರುವ ಪೀತ್ರಿಪುಟಿಯುಲನುಸ್ಯೂತದಿಂ ॥
ವಾಸಿಸುತ ಘಟಮಠದಿನಭವಿರ್ಪ ತೆರ ಬ್ರಹ್ಮ ।
ವಾಸಿಸಿಹುದಾಬ್ರಹ್ಮ ವಾತ್ಮನೆಂದರಿಯೆ ಸ ।
ನ್ಯಾಸಿಯುಹನವನು ಚಾಂಡಾಲನಾಗಲಿ ವ್ಯಾಧನಾಗಲೀ ಧರಣಿಯಲ್ಲಿ ॥ ॥೮೦॥

**ಅವತಾರಿಕೆ** :— ಯಾವ ಆಶ್ರಮದಲ್ಲಿದ್ದರೂ, ಯಾವ ಜಾತಿಯವನಾದರೂ, ಬ್ರಹ್ಮಜ್ಞಾನವುಮಾತ್ರ ವಿದ್ದರೆ ಅವನು ಸನ್ಯಾಸಿಯೆಂದು ಹೇಳಿದಿರಿ, ಆದರೆ ಮುಕ್ತಿಸುಖ ಪ್ರಾಪ್ತಿಗಾಗಿ ಸನ್ಯಾಸಾಶ್ರಮವನ್ನು ಸ್ವೀಕರಿಸಬೇಕೆಂಬ ವಿಧಿಯಿರುತ್ತದೆ.

ಆದ್ದರಿಂದ ಸನ್ಯಾಸಾಶ್ರಮ ಧಾರಿಯೇ ಮುಕ್ತನೆನ್ನಬೇಕಲ್ಲವೆ ? ಎಂಬಪ್ರಶ್ನೆಗೆ ಬ್ರಹ್ಮಜ್ಞಾನವಿಲ್ಲದ ವೇಷಗಾರನನ್ನು ಸಹ ಮುಕ್ತನೆನ್ನಬೇಕಾಗುತ್ತದೆ. ಎಂಬಉತ್ತರ ವನ್ನುಮುಂದಿನ ಶ್ಲೋಕದಲ್ಲಿ ಸೂಚಿಸುತ್ತಾರೆ.

## ಆರ್ಯಾಗೀತಿ *

ಆಶ್ರಮ ಮಾತ್ರಾದ್ಯದಿ ನಿರ್ವಾಣಂ ।
ಮಾ ದ್ವಿಷ ತದ್ವೇಷಂ ಕುರ್ವಾಣಂ ॥
ಜಹಿ ಬಹಿರಭಿಮತಿಮಯಿ ಮೂಢತ್ವಂ ।
ಹೃದಿ ಪರಿಶೀಲಯ ವಾಸ್ತವ ತತ್ವಂ ॥ ೮೧ ॥

**ಪದಚ್ಛೇದ ;—** ಆಶ್ರಮ, ಮಾತ್ರಾತ್, ಯದಿ ನಿರ್ವಾಣಂ, ಮಾದ್ವಿಷ, ತತ್, ವೇಷಂ, ಕುರ್ವಾಣಂ. ಜಹಿ. ಬಹಿಃ, ಅಭಿಮತಿಂ, ಅಯೀ, ಮೂಢ ತ್ವಂ, ಹೃದಿ, ಪರಿಶೀಲಯ, ವಾಸ್ತವ, ತತ್ವಂ,

**ಟೀಕ;—** ಯದಿ = ಒಂದುವೇಳೆ । ಆಶ್ರಮಮಾತ್ರಾತ್ = ಬ್ರಹ್ಮಜ್ಞಾನ ವಿಲ್ಲದೆ ಸನ್ಯಾಸಾಶ್ರಮದಿಂದಲೇ । ನಿರ್ವಾಣಂ = ಮುಕ್ತಿಯಾಗುವುದೆಂದರೆ । ವೇಷಂ ಕುರ್ವಾಣಂ = ವೇಷಗಾರನನ್ನು । ಮಾದ್ವಿಷ = ನಿರಾಕರಿಸಬೇಡ । ಅಯೀ = ಎಲೋ । ಮೂಢ = ಮೂರ್ಖನೇ । ತತ್ = ಆ । ಅಭಿಮತಿಂ = ಸನ್ಯಾಸಾಶ್ರಮ ದಿಂದಲೇ ಮುಕ್ತಿಯಾಗುವುದೆಂಬ ತಪ್ಪು ತಿಳುವಳಿಕೆಯನ್ನು । ಬಹಿಃ = ಮತಿಯಿಂದ ಹೊರಗೆ । ಜಹಿ = ಬಿಟ್ಟು । ವಾಸ್ತವ= ನಿಜತತ್ವವನ್ನು । ಪರಿಶೀಲಯ = ವಿಚಾರಿಸು.

**ತಾತ್ಪರ್ಯ:-** ಬ್ರಹ್ಮಜ್ಞಾನವಿಲ್ಲದೆ ಸನ್ಯಾಸಾಶ್ರಮ ಗ್ರಹಣ ಮಾಡಿದ ಮಾತ್ರಕ್ಕೆ ಮುಕ್ತಿಯು ಪ್ರಾಪ್ತಿಯಾಗುವುದೆಂದು ಪಡೆಂಬಟ್ಟರೆ. ಸನ್ಯಾಸ ವೇಷ ಧಾರಿಗೆ ಮುಕ್ತಿಯಾಗುವುದೆಂದು ಪಡೆಂಬಡಬೇಕಾಗುತ್ತದೆ. ಎಲೋ ಮೂಢನೇ ! ಸನ್ಯಾಸಾಶ್ರಮದಿಂದ ಮುಕ್ತಿಯಾಗುತ್ತದೆಂಬ ತಪ್ಪು ತಿಳುವಳಿಕೆಯನ್ನು ಬುದ್ಧಿ ಯಿಂದ ಹೊರದೂಡು. ನೀನು ಹೃದಯದಲ್ಲಿ ನಿಜತತ್ವವನ್ನು ಪರಿಶೀಲಿಸು.

**ವಿಶೇಷಾರ್ಥ:-** ಸನ್ಯಾಸಾಶ್ರಮ ಗ್ರಹಣಮಾತ್ರದಿಂದಲೇ ಮುಕ್ತಿಯಾಗು ವುದೆಂದು ಒಡಬಡಿಸುವ ಕಾವಿಶಾಟಿಯ ಭಕ್ತರನ್ನು ಕುರಿತು ಗ್ರಂಥಕರ್ತರು ಚೆನ್ನಾಗಿ ಕೈ ಹಚ್ಚಿದ್ದಾರೆ ಮೂಢನೇ ಎಂದು ಸಂಬೋಧಿಸಿ ಹೀಯಾಳಿಸಿದ್ದಾರೆ ಆದರೆ ಆಶ್ರಮ ವಿಧಿಗಳೆಲ್ಲವೂ ಯೋಗ್ಯವಾಗಿದ್ದರೂ ಆ ವಿಧಿಗಳೆಲ್ಲವೂ ದೇಹ ಕರಣಾದಿಗಳಿಗೆ ಸಂಬಂಧಿಸಿರುತ್ತವೆ. ಆತ್ಮನಿಗೂ ಸಂಬಂಧವಿಲ್ಲ ಮುಕ್ತಿಗೂ ಸಾಧನ

* ಒಂದನೇ ಶ್ಲೋಕದ ಛಂದಸ್ಸನ್ನು ನೋಡಿರಿ.

ವಲ್ಲ. ಮುಕ್ತಿಪ್ರಾಪ್ತಿಗೆ ಆತ್ಮಜ್ಞಾನವೊಂದೇ ಸಾಧನವಾಗಲಿ ಮತ್ತಾವೂ ಸಾಧನವಾಗುವುದಿಲ್ಲ. ಏಕೆಂದರೆ ಆತ್ಮಜ್ಞಾನವಿಲ್ಲದೆ ಬಿಳಿಯ ವಸ್ತ್ರಕ್ಕೆ ಕಾಷಾಯಬಣ್ಣ ಕೊಟ್ಟು ಅದನ್ನು ಧರಿಸಿ ನಾನು ಸಾಧು ಸನ್ಯಾಸಿ ಎಂದು ಹೇಳಿಕೊಂಡ ಮಾತ್ರಕ್ಕೆ ಮುಕ್ತಿಯು ಪ್ರಾಪ್ತಿಯಾಗುವುದಿಲ್ಲ. ಆ ಸನ್ಯಾಸಾಶ್ರಮ ಸ್ವೀಕಾರ ಮಾತ್ರದಿಂದ ಮುಕ್ತಿಯು ತನಗಾಗುವುದೆಂದು ಒಪ್ಪಿಕೊಂಡರೆ ಹಗಲು ವೇಷಗಾರನು ಒಂದು ಸಮಯದಲ್ಲಿ ಯತಿವೇಷವನ್ನು ಧರಿಸಿಕೊಂಡು ಗ್ರಾಮದಲ್ಲೆಲ್ಲಾ ತಿರುಗುತ್ತಾ ಆ ವೇಷಕ್ಕೆ ತಕ್ಕ ಮಾತುಗಳನ್ನು ಸಹ ಹೇಳುತ್ತಾನೆ. ಯತಿಗಿಂತಲೂ ಆ ವೇಷಗಾರನ ಯತಿವೇಷವು ಹತ್ತುಪಟ್ಟು ಸೊಗಸಾಗಿರುತ್ತದೆ. ಅವನಿಗೂ ಮುಕ್ತಿಯಾಗುವುದೆಂದು ಒಪ್ಪಿಕೊಳ್ಳಬೇಕಾಗುತ್ತದೆ. ಎಲೈ ಮೂರ್ಖನೇ ! ನಾನು ಯತಿಯಾಗಬೇಕೆಂಬ ಮತ್ತು ಯತ್ಯಾಶ್ರಮದಿಂದ ಮುಕ್ತಿಯುಂಟಾಗುವುದೆಂಬ ಭ್ರಮೆಯನ್ನು ನಿನ್ನ ಬುದ್ಧಿಯಿಂದ ಹೊರಕ್ಕೆ ತಳ್ಳು. ಈ ತಪ್ಪು ತಿಳುವಳಿಕೆಯು ನಿನಗೆ ಶ್ರೇಯಸ್ಸನ್ನುಂಟು ಮಾಡುವುದಿಲ್ಲ. ಬ್ರಹ್ಮಾತ್ಮರಲ್ಲಿ ಅಭೇದತ್ವವನ್ನು ವಿಚಾರಪೂರ್ವಕವಾಗಿ ನಿನ್ನ ಹೃದಯದಲ್ಲಿ ಅರಿತು ಅಳವಡಿಸಿಕೊ. ಇದರಿಂದ ನಿನಗೆ ಶ್ರೇಯಸ್ಸುಂಟಾಗುವುದು. ಭವಬಂಧವು ನೀಗುವುದು. ನಿಜಸುಖವು ಕೈ ಸೇರುವುದು ಎಂಬ ಭಾವವು.

## ವಾರ್ಧಿಕಷಟ್ಪದಿ

ಯತಿಯಾಶ್ರಮಾನ್ವಿತಗೆ ಮುಕ್ತಿಯಾಗುವುದೆನಲು ।
ಯತಿವೇಷಧರಿಸಿರುವ ವೇಷಗಾರನುಮುಕ್ತಿ ।
ಯುತನೆನ್ನಬೇಕೆಲೋ ಮೂಢನೇ ಯತಿಯು ನಾನಾಗಬೇಕೆಂದುಬಗೆವ ॥
ಮತಿಯ;ಬಿಡು ನೀನು ನಿಜ ತತ್ವವಂ ಕೈಬಿಡದೆ ।
ಮತಿಯಲ್ಲಿ ಪರಿಶೀಲಿಸುತ್ತ ನೈಜಾರ್ಥವಂ ।
ಪತಿಕರಿಸು ನಿಜಮೋಕ್ಷ ನಿನ್ನಕರಗತಮಪ್ಪುದಿದು ಸತ್ಯಶ್ರುತಿಸಿದ್ಧವು ॥೮೧॥

**ಅವತಾರಿಕೆ ;—** ಬ್ರಹ್ಮಜ್ಞಾನವೊಂದೇ ಮುಕ್ತಿಗೆ ಸಾಧನವಾಗಲಿ ಸನ್ಯಾಸಾಶ್ರಮವು ಸಾಧನವಲ್ಲವೆಂದು ಹೇಳಿದಿರಿ. ಆದರೆ ಅನೇಕರು ಸನ್ಯಾಸಾಶ್ರಮ ಧಾರಿಗಳಾಗಿರುತ್ತಾರೆ ಆ ಆಶ್ರಮದಿಂದ ಅವರಿಗೆ ಲಭಿಸುವ ಫಲವೇನು ? ಎಂಬ ಪ್ರಶ್ನೆಗೆ ತಿರಿದುಣ್ಣುವುದೇ ಫಲವೆಂಬ ಉತ್ತರವನ್ನು ಮುಂದಿನ ಶ್ಲೋಕದಲ್ಲಿ ಸೂಚಿಸುತ್ತಾರೆ.

## * ಇಂದ್ರವಜ್ರವೃತ್ತ.

ಶ್ವನೋಪನೋದಾಯ ಚ ಕಕ್ಷದಂಡ ।
ಶ್ಶೀತಾಪನೋದಾಯ ಚ ದೇಹಕಂಥಾ ॥
ಕ್ಷುಧಾಪನೋದಾಯ ಚ ಪಾಣಿ ಪಾತ್ರಂ ।
ಭವಾಪನೋದಾಯ ತು ತತ್ವಬೋಧಃ ॥ ॥೮೨॥

**ಪದಚ್ಛೇದ** ;— ಶ್ವನೋಪನೋದಾಯ, ಚ, ಕಕ್ಷದಂಡಃ, ಶೀತಾಪನೋದಾಯ, ಚ, ದೇಹಕಂಥಾ, ಕ್ಷುಧಾಪನೋದಾಯ, ಚ, ಪಾಣಿಪಾತ್ರಂ, ಭವಾಪನೋದಾಯ, ತು, ತತ್ವ, ಬೋಧಃ,

**ಟೀಕೆ** :— ಶ್ವನೋಪನೋದಾಯ = ನಾಯಿಗಳನ್ನು ಹೊಡೆದೋಡಿಸಲು। ಕಕ್ಷದಂಡಃ = ಬಗಲಲ್ಲಿರುವ ಬಡಿಗೆ । ಚ = ಮತ್ತು । ಶೀತಾಪನೋದಾಯ = ಚಳಿ ನಿವೃತ್ತಿಗಾಗಿ । ದೇಹಕಂಥಾ = ಶರೀರಕ್ಕೆ ಧರಿಸಿಕೊಳ್ಳುವ ಕಂಥೆಯು । ಚ = ಮತ್ತು । ಕ್ಷುಧಾಪನೋದಾಯ = ಹಸಿವುನಿವೃತ್ತಿಗೆ ।ಪಾಣಿಪಾತ್ರಂ = ಕೈಯಲ್ಲಿ ಧರಿಸಿದಪಾತ್ರೆಯು । ಚ = ಮತ್ತು । ಭವಾಪನೋದಾಯ = ಜನ್ಮದುಃಖವನ್ನು ಕಳೆದುಕೊಳ್ಳುವುದಕ್ಕೆ । ತತ್ವ = ನಿಜವಸ್ತುವಿನ । ಬೋಧಃ = ಸಾಕ್ಷಾತ್ಕಾರವು ಇರುತ್ತದೆ । ತು = ನಿಜವು ।

**ತಾತ್ಪರ್ಯ** ;— ನಾಯಿಗಳನ್ನು ತಳ್ಳುವುದಕ್ಕೆ ಬಗಲಲ್ಲಿರುವಕೋಲು, ಶೀತನಿವಾರಣಕ್ಕೆಮಾತ್ರ ದೇಹಕ್ಕೆಧರಿಸಿರುವಕಂಥೆ ಹಸಿವಿನನಿವಾರಣಕ್ಕೆಮಾತ್ರಭಿಕ್ಷಾಪಾತ್ರೆ ಇವುಗಳಿಂದಿಷ್ಟೇ ಪ್ರಯೋಜನವು. ಬ್ರಹ್ಮಸಾಕ್ಷಾತ್ಕಾರವುಮಾತ್ರ ಜನನಮರಣಾತ್ಮಕ ಬಂಧನಿವೃತ್ತಿ ಪರಮಾನಂದ ಪ್ರಾಪ್ತಿಗೆ ಕಾರಣವಾಗಿದೆ.

**ವಿಶೇಷಾರ್ಥ**— ಬಾಹ್ಯಾಡಂಬರ ಯತಿವೇಷದ ಪ್ರಯೋಜನವನ್ನು ಯಥಾರ್ಥವಾಗಿಯು ಯಾರಮುಲಾಜುಇಡದೆ ಗ್ರಂಥಕರ್ತರು ಬರೀ ವೇಷಧಾರಿ ಸನ್ಯಾಸಿಗಳಿಗೆ ನಾಚಿಕೆ ಬರುವಂತೆ ತಿಳಿಸುತ್ತಾರೆ, ತಾನು ಬೀದಿಯಲ್ಲಿ ತಿರುಪೆಗಾಗಿ ಹೋಗುವಾಗ ಬೀದಿಯ ನಾಯಿಗಳು ಅಡ್ಡಗಟ್ಟಿ ನೀನು ಲಗ್ನಮಾಡಿಕೊಂಡು ಸಂಸಾರಿಯಾಗಿ ಬಾಳುವುದು ಬಿಟ್ಟು, ದುಡಿಯಲಾರದೆ ಹೊಟ್ಟೆಕೂಳಿಗಾಗಿ ಏತಕ್ಕೆ ಬರುವೆ, ? ಎಂದು ಹೇಳಿ ಬುದ್ಧಿಗಲಿಸಲು ಬರುವಂತೆ ಬೊಗಳುತ್ತವೆ. ಆಗ

---

* ೨ ತಗಣಗಳು ೧ ಜಗಣ ೨ ಗುರುಗಳಿದ್ದು, ೬ ನೇ ಅಕ್ಷರಕ್ಕೆ ಯತಿಯಿದ್ದುದಾದರೆ ಇಂದ್ರವಜ್ರ ವೃತ್ತವಾಗುತ್ತದೆ.

ಆ ನಾಯಿಗಳನ್ನು ಹೊಡೆದೋಡಿಸುವುದಕ್ಕೆ ಬಗಲಲ್ಲಿರುವ ಬಡಿಗೆಯು ಪ್ರಯೋಜನಕಾರಿಯಾಗಿರುತ್ತದೆ. ಮತ್ತು ಶರೀರಕ್ಕೆ ಥಂಡಿಯು (ಶೀತವು) ಆಗದಂತೆ ಮಾಡಿಕೊಳ್ಳುವುದಕ್ಕೆ ಮಾತ್ರ ಧರಿಸಿದ ಕಂಥೆ (ಉದ್ದವಾದ ಅಂಗಿ) ಯು ಪ್ರಯೋಜನಕಾರಿಯಾಗಿರುತ್ತದೆ. ಹಸಿವು ನಿವೃತ್ತಿಮಾಡಿಕೊಳ್ಳುವುದಕ್ಕಾಗಿ ಪರರ ಮನೆಯ ಮುಂದೆ ನಿಂತು, ತಾಯಿಾ! ಭಿಕ್ಷೆಯನ್ನು ನೀಡು, ಎಂದು ಕೇಳಿದರೆ ಆ ತಾಯಿಯು ತಂದು ನೀಡುವ ಭಿಕ್ಷೆಯನ್ನು ನೀಡಿಸಿಕೊಳ್ಳುವುದಕ್ಕೆ ಮಾತ್ರ ಕೈಯಲ್ಲಿರುವ ಪಾತ್ರೆಯು ಪ್ರಯೋಜನಕಾರಿಯಾಗಿರುತ್ತದೆ. ಇಷ್ಟೇ ಅಲ್ಲದೆ ಬಡಿಗೆಯಿಂದಲೂ, ಕಂಥೆಯಿಂದಲೂ, ಕರಪಾತ್ರೆಯಿಂದಲೂ, ಬೇರೆ ಯಾವ ಪ್ರಯೋಜನವೂ ಇಲ್ಲ. ಅಂದರೆ ಬಾಹ್ಯಾಡಂಬರದ ಯತಿವೇಷದ ಪ್ರಯೋಜನವು ಇಷ್ಟೇ. ಇದರಿಂದ ಪುನರಾವೃತ್ತಿ ರಹಿತವಾದ ಮುಕ್ತಿ ಸುಖವು ಸಿಕ್ಕುವುದಿಲ್ಲ ಆ ಮುಕ್ತಿ ಸುಖವು ದೊರೆಯ ಬೇಕಾದರೆ ತತ್ತ್ವಬೋಧೆಯೊಂದೇ ಕಾರಣವಾಗಿರುತ್ತದೆಂಬ ಭಾವವು.

ಕಂದ ;- ಕಕ್ಷದ ದಂಡವು ನಾಯ್ಗಳ ।
ಶಿಕ್ಷೆಗೆ, ಶೀತವನು ಕಳೆಯಲ್ ದೇಹದ ಕಂಥೇ, ।
ಕುಕ್ಷಿಂಭರಣಕೆ ಪಾತ್ರೆಯು, ।
ಅಕ್ಷಯ ಸುಖಕಾಗಿ ತತ್ತ್ವಬೋಧೆಯದಿರ್ಕುಂ ॥ ೮೨ ॥

**ಅವತಾರಿಕೆ ;—** ಯತಿವೇಷ ಬಾಹ್ಯಾಡಂಬರದ ಪ್ರಯೋಜನವನ್ನು ಹೇಳಿದಿರಿ. ಮತ್ತು ಈ ಹಿಂದೆ ಯತ್ಯಾಶ್ರಮಿಯಾಗದಿದ್ದರೂ, ಬ್ರಹ್ಮಜ್ಞಾನಿಗೆ ಯತಿಯೆನ್ನಬೇಕೆಂದು ತಿಳಿಸಿದಿರಿ. ಯತ್ಯಾಶ್ರಮವನ್ನು ಸ್ವೀಕರಿಸದಿರುವ ಬ್ರಹ್ಮಜ್ಞಾನಿಗೆ ಯತಿಯೆಂದು ಹೇಳಬೇಕಾದರೆ, ಆ ಬ್ರಹ್ಮಜ್ಞಾನಿಗೆ ಶಾಸ್ತ್ರ ನಿರ್ದಿಷ್ಟವಾದ ಯತಿ ಚಿನ್ಹಗಳು ಇರಬೇಕಲ್ಲವೇ ? ಆ ಚಿನ್ಹೆಗಳಿಲ್ಲದೆ ಆತನನ್ನು ಯತಿಯೆಂದು ಹೇಳುವುದು ಸರಿಯೇ ? ಎಂಬ ಪ್ರಶ್ನೆಗೆ ಆ ಚಿನ್ಹೆಗಳು ಬಾಹ್ಯದಲ್ಲಿ ತೋರದಿದ್ದರೂ, ಅವು ಅಂತರದಲ್ಲಿ ಉಂಟೆಂಬ ಉತ್ತರವನ್ನು ಮುಂದಿನ ಶ್ಲೋಕದಲ್ಲಿ ಸೂಚಿಸುತ್ತಾರೆ.

## * ಶಾಲಿನೀ ವೃತ್ತ.

ಜ್ಞಾನಂ ದಂಡೋ ಹಸ್ತ ಪಾತ್ರಂ ವಿರಾಗಃ ।
ಸತ್ಯಂ ಕಂಥಾ ಭಸ್ಮಲೇಪ ಸ್ತಿತಿಕ್ಷಾ ।

---

* ೧೬ ನೇ ಶ್ಲೋಕದ ಭಾವವನ್ನು ನೋಡಿರಿ.

**ತುಷ್ಟಿಃ ಕುಂಡೀತ್ಯಾಂತರೀಂ ಪಂಚಮುದ್ರಾಂ ।**
**ಧತ್ತೇ ಯಃ ಕೋಽಪ್ಯಸ್ತು ಸೋಽಯಂ ಮಹರ್ಷಿಃ ॥ ೮೩ ॥**

**ಪದಚ್ಛೇದ;—** ಜ್ಞಾನಂ ದಂಡಃ, ಹಸ್ತಪಾತ್ರಂ, ವಿರಾಗಃ, ಸತ್ಯಂ, ಕಂಥಾ, ಭಸ್ಮಲೇಪಃ, ತಿತಿಕ್ಷಾ, ತುಷ್ಟಿಃ, ಕುಂಡಿ, ಇತಿ, ಆಂತರೀಂ, ಪಂಚಮುದ್ರಾ, ಧತ್ತೇ, ಯಃ, ಕೋಪ್ಯಸ್ತಿ, ಸಃ, ಅಯಂ, ಮಹರ್ಷಿಃ

**ಟೀಕೆ;—** ಜ್ಞಾನಂ = ಬ್ರಹ್ಮಾತ್ಮರಲ್ಲಿ ಅಭೇದಜ್ಞಾನವೇ । ದಂಡಃ = ಕೋಲು । ವಿರಾಗಃ = ವಿರತಿಯೆ । ಹಸ್ತಪಾತ್ರಂ = ಕರಪಾತ್ರೆಯು । ಸತ್ಯಂ = ಬಾಧಾರಹಿತವೇ । ಕಂಥಾ = ಕಂಥೆಯು । ತಿತಿಕ್ಷಾ = ಶೀತೋಷ್ಣಾ ದ್ವಂದ್ವ ಧರ್ಮಸಹನತೆಯೇ । ಭಸ್ಮಲೇಪಃ = ವಿಭೂತಿಲೇಪನವು । ತುಷ್ಟಿಃ = ತೃಪ್ತಿಯೇ । ಕುಂಡಿ = ಕಮಂಡಲವು । ಇತಿ =ವಿಧವಾದ । ಆಂತರೀಂ = ಒಳಗೆ ಸಂಬಂಧ ವಾಗಿರುವ । ಪಂಚಮುದ್ರಾ = ದಂಡಾದಿ ಪಂಚಮುದ್ರೆಯನ್ನು । ಯಃ = ಯಾವನು । ಧತ್ತೇ = ಧರಿಸುತ್ತಾನೆಯೋ । ಸಃ = ಅವನು । ಕೋಪ್ಯಸ್ತಿ = ಯಂಥವನಿದ್ದರೂ । ಅಯಂ = ಇವನೇ । ಮಹರ್ಷಿಃ = ಋಷಿವರ್ಯನು।

**ತಾತ್ಪರ್ಯ!—** ಜ್ಞಾನವೇ ದಂಡ, ವೈರಾಗ್ಯವೇ ಕರಪಾತ್ರೆ, ಸತ್ಯವೇ ಕಂಥೆ, ತಿತಿಕ್ಷೆಯೇ ಭಸ್ಮಲೇಪನ, ತೃಪ್ತಿಯೇ ಕಮಂಡಲ. ಈ ವಿಧವಾದ ಅಂತರಂಗ ಸಂಬಂಧವಾದ ಪಂಚಮುದ್ರೆಗಳನ್ನು ಯಾವನು ಧರಿಸುವನೋ ಅವನೇ ಮಹರ್ಷಿಯು

**ವಿಶೇಷಾರ್ಥ;—** ದಂಡ ಕಮಂಡಲ ಕರಪಾತ್ರೆ ಕಂಥೆ ಭಸ್ಮೋದ್ಧೂಳನ ಇವು ಯತಿಗೆ ಇರಬೇಕಾದ ಚಿನ್ಹಗಳು ಇವಕ್ಕೆ ಪಂಚಮುದ್ರೆಗಳೆಂಬ ಹೆಸರು ಈ ಪಂಚಮುದ್ರೆಗಳ ಯುಕ್ತನಾದವನಿಗೆ ಸನ್ಯಾಸಿ ಯೆಂದುಕರೆಯುತ್ತಾರೆ. ಬ್ರಹ್ಮ ಜ್ಞಾನಿಯು ಜನರತೋರ್ಕೆಗಾಗಿ ಬಾಹ್ಯದಲ್ಲಿ ಧರಿಸುವುದೂ ಉಂಟು ಬಾಹ್ಯದಲ್ಲಿ ಧರಿಸಿದ್ದರೂ ಅಂತರದಲ್ಲಿ ಧರಿಸಿರುತ್ತಾನೆ ಅಂತರ ಮುದ್ರೆಗಳವಿವರ ಹೊರಗಿನ ದಂಡವು ನಾಯಿಗಳನ್ನು ಹೊಡೆದೋಡಿಸುವುದಕ್ಕೆ ಅನುಕೂಲವಾಗುವಂತೆಶಿವಜೀವರಲ್ಲಿ ಏಕತ್ವರೂಪ ಜ್ಞಾನವೆಂಬ ದಂಡವು ಅನೇಕ ಸಂದೇಹಗಳೆಂಬ ನಾಯಿಗಳನ್ನು ಹೊಡೆದೋಡಿಸುವುದಕ್ಕೆ ಅನುಕೂಲವಾಗಿದೆ. ಹೊರಗಿನ ಕಮಂಡಲವು ನೀರು ತುಂಬಿಕೊಳ್ಳುವುದಕ್ಕೆ ಅನುಕೂಲವಾಗುವಂತೆವಿದ್ಯಾನಂದವನ್ನು ತುಂಬಿಕೊಳ್ಳುವುದಕ್ಕೆ ತೃಪ್ತಿ ಎಂಬ ಕಮಂಡಲವು ಅನುಕೂಲವಾಗಿದೆ. ಹೊರಗಿನ ಕರಪಾತ್ರೆಯು ಅನ್ನವನ್ನು ಭುಂಜಿಸುವುದಕ್ಕೆ ಅನುಕೂಲವಾಗುವಂತೆ, ಇಹ ಪರಲೋಕಗಳ ವಿಷಯ ಸುಖಗಳಂ ತಿರಸ್ಕರಿಸುವ ವೈರಾಗ್ಯವೆಂಬ ಕರಪಾತ್ರೆಯು ನಿರ್ವಿಷಯಾನಂದವನ್ನು

ಭುಂಜಿಸುವುದಕ್ಕೆ ( ಅನುಭವಿಸುವುದಕ್ಕೆ ) ಅನುಕೂಲವಾಗಿದೆ. ಹೊರಗಿನ ಶೀತ ಬಾಧೆಯನ್ನು ಕಳೆಯುವುದಕ್ಕೆ ಕಂಥೆಯು ಅನುಕೂಲವಾಗುವಂತೆ ಅಬಾಧ್ಯ ರೂಪ ಸದ್ವಸ್ತುವು ನಾನಾಗಿದ್ದೇನೆಂಬ ಸತ್ಯರೂಪ ಕಂಥೆಯು ಭವಬಾಧೆ ಕಳೆಯಲಿಕ್ಕೆ ಯೋಗ್ಯವಾಗಿದೆ. " **ಭಸ್ಮಸ್ನಾನಂ ಹರೇತ್ಪಾಪಂ** " ಪಾಪನಿವೃತ್ತಿಗೆ ಹೊರಗಿನ ಭಸ್ಮೋದ್ಧೂಳನವು ಅನುಕೂಲವಾಗಿರುವಂತೆ ತಿತೀಕ್ಷೆಯೆಂಬ ಭಸ್ಮೋದ್ಧೂಳನವು ಶೀತೋಷ್ಣಾದಿ ದ್ವಂದ್ವ ಧರ್ಮರೂಪ ತಾಪನಿವೃತ್ತಿಗೆ ಅನುಕೂಲವಾಗಿದೆ ಅಂದರೆ ಪಂಚಮುದ್ರೆಗಳನ್ನು ಆತ್ಮವೇತ್ತನು ಅಂತರದಲ್ಲಿ ಧರಿಸಿಕೊಂಡಿರುತ್ತಾನೆ ಆದ್ದರಿಂದಲೇ ಆತನನ್ನು ಯತಿಯೆನ್ನಬೇಕೆಂಬ ಭಾವವು.

### ಭಾಮಿನಿ ಷಟ್ಪದಿ.

ಅರುವೆ ದಂಡವು, ನಿಜವಿರಾಗವೆ ।
ಕರದಪಾತ್ರೆಯು, ಸತ್ಯವೆಂಬುದು ।
ಪರಮ ಕಂಥೆಯು, ಪರತಿತೀಕ್ಷೆಯೆ ಭಸಿತಲೇಪನವು, ॥
ನಿರುತ ಸಂತುಷ್ಟಿಯೆ ಕಮಂಡಲ ।
ವರಿಯಲೀಪಿಥ ಪಂಚಮುದ್ರೆಯ ।
ಧರಿಸಿದವನಾರಾದರೇ ನವನಹನು ಯತಿವರ್ಯ ॥ ೮೩ ॥

**ಅವತಾರಿಕೆ** :— ಅಂತರ್ಯದಲ್ಲಿ ಪಂಚಮುದ್ರೆಗಳನ್ನು ಧರಿಸಿದವರು ಯಾರಾದರೂ ಸರಿಯೇ, ಅವರು ಯತಿವರ್ಯರೆಂದು ಹೇಳಿದಿರಿ. ಆದರೆ ಕೆಲವರು ಬಾಹ್ಯಚಿನ್ಹೆಗಳನ್ನು ಧರಿಸದೆ ಬಲ್ಲವರಲ್ಲಿ ವೇದಾಂತವಾಕ್ಯಗಳನ್ನು ಮಾತನಾಡುತ್ತಾ ಕರ್ಮನಿಷ್ಠರಾಗಿರುತ್ತಾರೆ. ಇವರಿಗೇನೆನ್ನಬೇಕು ? ಎಂಬ ಪ್ರಶ್ನೆಗೆ ಅಂಥವರಿಗೆ ಬಾಯ್ಬಡಕ ಜ್ಞಾನಿಗಳೆನ್ನಬೇಕು. ಇಲ್ಲವೇ ಬಜಾರ ಪಂಡಿತರೆನ್ನಬೇಕು. ಎಂಬ ಉತ್ತರವನ್ನು ಮುಂದಿನ ಶ್ಲೋಕದಲ್ಲಿ ಸೂಚಿಸುತ್ತಾರೆ.

### * ಶಾಲಿನೀ ವೃತ್ತಂ.

ಪಾಕ್ಯೈಃ ಸಾಕಂ ಪುತ್ರಿ ಕಾರಂಗ ಭೂಮೇ ।
ಜಾತ್ಯಂಧಾಯ ಧ್ಮಾಂತಿ ಶಸ್ತಂ ಹಸಂತಃ
ತಜ್ಞೈ ರ್ಬ್ರಾಹ್ಮೀಂ ಕಿಂ ವದಂತೀಂ ಭಣಂತಃ ।
ಶ್ಲಾಘಾ ಲೋಭಾಧ್ಮಾಂತಿ ವಾಜ್ಞಾಲ ಕಾಸ್ತತಾ ॥ ೮೪ ॥

* ೧೮ ನೇ ಶ್ಲೋಕದ ಛಂದಸ್ಸನ್ನು ನೋಡಿರಿ

**ಪದಚ್ಛೇದ** — ಪಾಕ್ಯೈಃ ಸಾಕಂ, ಪುತ್ರಿಕಾ ರಂಗ ಭೂಮೌ, ಜಾತ್ಯಂಧಾ, ಯದಿ, ಯಾಂತಿ, ಶಸ್ತಂ, ಹಸಂತಃ ತಜ್ಞೈಃ, ಬ್ರಾಹ್ಮೀಂ, ಕಿಂ. ವದಂತೀಂ, ಭಣಂತಃ, ಶ್ಲಾಘಾ ಲೋಭಾತ್, ಯಾಂತಿ, ವಾಚಾಲಕಾಃ, ತತ್,

**ಟೀಕೆ ;**— ಪುತ್ರಿಕಾ ರಂಗ ಭೂಮೌ = ಗೊಂಬೆಗಳನ್ನು ಕುಣಿಸುವ ರಂಗಸ್ಥಳದಲ್ಲಿ । ಪಾಕ್ಯೈಃ ಸಾಕಂ = ವಿಸ್ತಾರವಾಗಿ ನೆರೆದ ಜನರ ಗುಂಪಿನಿಂಕೂಡಿ। ಹಸಂತಃ = ನಗುತ್ತಿರುವಂಥ । ಜಾತ್ಯಂಧಾಃ = ಹುಟ್ಟುಗುರುಡರು । ಯದಿ = ಒಂದುವೇಳೆ । ಶಸ್ತಂ = ಹೇಗೆ ನಾವು ಮಾತ್ರ ಹೊಗಳುವಿಕೆ । ಯಾಂತಿ = ಹೊಂದುತ್ತಾರೆಯೋ ( ಹಾಗೆ ) ಶ್ಲಾಘಾಲೋಭಾತ್ = ತಮ್ಮನ್ನು ಅರಿತವರೆಂದು ಹೊಗಳಿಸಿಕೊಳ್ಳಲಿಚ್ಛೆಯಿಂದ । ತಜ್ಞೈಃ = ಬ್ರಹ್ಮಜ್ಞಾನಿಗಳಲ್ಲಿ ( ಕೂಡಿಕೊಂಡು )। ಬ್ರಾಹ್ಮೀಂ = ಬ್ರಹ್ಮಸಂಬಂಧವಾದ । ಕಿಂವದಂತೀ = ವಾರ್ತಾವಿಷಯಗಳನ್ನು । ಭಣಂತಃ = ಮಾತನಾಡುವಂಥ । ವಾಚಾಲಕಾಃ = ವಾಗ್‌ಬ್ರಹ್ಮಿಗಳು । ತತ್ = ಆ ಮೇಲಿನ । ಹೊಗಳುವಿಕೆಯನ್ನು ಮಾತ್ರ । ಯಾಂತಿ = ಹೊಂದುತ್ತಾರೆ.

**ತಾತ್ಪರ್ಯ**—ಹುಟ್ಟುಕುರುಡರು ಗೊಂಬೆಗಳನ್ನಾಡಿಸುವ ನಾಟಕಸ್ಥಳಕ್ಕೈದು ಆ ನಾಟಕವನ್ನು ನೋಡಿ ನಗುವವರ ಜೊತೆಗೆ ತಾವೂ ನಗುತ್ತ ನಾವೂ ನಾಟಕವನ್ನು ನೋಡಿದೆವೆಂದು ಕಣ್ಣಿದ್ದವರು ತಿಳಿದುಕೊಳ್ಳುವಂತೆ ನಟಿಸುತ್ತ ಇರುವಹಾಗೆ ವಾಗ್ಬ್ರಹ್ಮಿಯು ಬಲ್ಲವರೆಡೆಗೈದು ಅವರಿಂದ ತಾ ಬಲ್ಲವ ನೆನಿಸಿ ಕೊಳ್ಳಬೇಕೆಂದು ವಾಚಾಮಾತ್ರವಾಗಿ ಬ್ರಹ್ಮಜ್ಞಾನಸ ಸಂಬಂಧವಾದ ಮಾತುಗಳನ್ನಾಡಿ ಬಲ್ಲವರೆಂದು ಹೊಗಳಿಸಿ ಕೊಳ್ಳುತ್ತಾರೆ

**ವಿಶೇಷಾರ್ಥ** —ಜ್ಞಾನನೇತ್ರ ವಿಲ್ಲದ ವಾಗ್ಬ್ರಹ್ಮಿಗಳು ತಾವೂ ಬ್ರಹ್ಮಜ್ಞಾನಿಗಳೆಂದು ಪರರುತಿಳಿದುಕೊಂಡು ಅವರಿಂದ ಹೊಗಳಿಸಿಕೊಳ್ಳಲಿಚ್ಛೆಯಿಂದ . ತತ್ವವೇತ್ತರ ಬಳಿಯಲ್ಲಿ ಕುಳಿತು ಅವರೊಡನೆ ಬ್ರಹ್ಮ ವಿಚಾರದಲ್ಲಿ ಭಾಗವಹಿಸಿ ಅವರಿಗಿಂತಲೂ ನಾಲ್ಕುಮಾತುಗಳು ಹೆಚ್ಚು ನುಡಿಯುತ್ತಾರೆ. ಆದರೆ ಆ ತತ್ವವೇತ್ತರಲ್ಲಿರುವ ಅಕರ್ತೃತ್ವ, ಅಸಂಗತ್ವ, ಬ್ರಹ್ಮನೈಷ್ಠಿಕತ್ವ, ಅಖಂಡತ್ವ ಭಾವನೆಯು ಈ ವಾಗ್ಬ್ರಹ್ಮಿಗಳಲ್ಲಿ ಇರುವುದಿಲ್ಲ. ಎಂಬುದಕ್ಕೆ ಗ್ರಂಥಕರ್ತರು ಬಹುಸೊಗಸಾದ ಉಪಮಾನವನ್ನುಕೊಟ್ಟು ಮನವರಿಕೆ ಮಾಡಿಸಿಕೊಡುತ್ತಾರೆ ಕಿಳ್ಳೇಕೇತರೆಂಬ ಜನರು ಚರ್ಮದಿಂದ ಸ್ತ್ರೀಪುರುಷಾಕೃತಿಯ ಗೊಂಬೆಗಳನ್ನು ತಯಾರಿಸಿ ಸಾಮಾನ್ಯಜೇಳಕಿನಲ್ಲಿ ಪರದೆಯ ಹಿಂಭಾಗದಲ್ಲಿ ನಿಂತು ಆ ಗೊಂಬೆಗಳನ್ನು ಕುಣಿಸುತ್ತಾ ರಾಮಾಯಣ ಭಾರತದೊಳಗಣ ಕಥೆಗಳನ್ನು ನಾಟಕರೂಪವಾಗಿ ಪ್ರದರ್ಶಿಸುತ್ತಾರೆ. ಈನಾಟಕಕ್ಕೆ ಕಿಳ್ಳೇಕೇತರ ನಾಟಕವೆಂಬ ಹೆಸರು. ಆ ನಾಟಕದಲ್ಲಿ ಹಾಸ್ಯ ರಸವನ್ನು ಹೆಚ್ಚಿಗೆತರುತ್ತಾರೆ. ಅದನ್ನು ನೋಡಲುಜನರು ಹೆಚ್ಚಿಗೆಸೇರುತ್ತಾರೆ. ಆ ಜನರ

ಮಧ್ಯದಲ್ಲಿ ಹುಟ್ಟಿ ಕುರುಡನು ಕುಳಿತು ಆ ಜನರು ನಗುವಾಗಲೆಲ್ಲಾ ತಾನು ಹೆಚ್ಚಿಗೆ ನಕ್ಕು ತನ್ನ ಕುರುಡುತನವನ್ನು ತೋರಿಸಿಕೊಳ್ಳದೆ ಕಣ್ಣುಳ್ಳವರಿಂದ ಇವನು ಕಣ್ಣುಳ್ಳವನೆಂದು ಹೊಗಳಿಸಿ ಕೊಳ್ಳುವಂತೆ ವ್ಯವಹರಿಸುತ್ತಾನೆ. ಇವನಿಗೆ ನೇತ್ರಗೋಲಕಗಳಿದ್ದರೂ ನೋಡುವ ದೃಷ್ಟಿಯಿರುವುದಿಲ್ಲ. ಈ ಕುರುಡನಂತೆ ಬಾಯಿಬ್ರಹ್ಮಿಯು ವೇದಾಂತ ವಿಷಯಗಳನ್ನು ಪಾಠಮಾಡಿಕೊಂಡು ಗಿಳಿಯು ನುಡಿಯುವಂತೆ ಬಲ್ಲವರಬಳಿಯಲ್ಲಿ ನುಡಿದು ಯಶಸ್ಸನ್ನು ಪಡೆಯುವ ವಾಂಛೆಯಿಂದಿರುತ್ತಾನೆ, ಇಷ್ಟೇ ಆಗಲಿ ಅವನಿಗೆ ಸ್ವಸ್ವರೂಪ ಜ್ಞಾನವಿರುವುದಿಲ್ಲ. ಅಂದರೆ ಗ್ರಾಂಫೋನ್ ಪ್ಲೇಟಿನಲ್ಲಿರುವ ಪದವನ್ನು ಹೇಳಿದಂತೆ ತಾನು ಪಾಠಮಾಡಿದ್ದನ್ನು ಮಾತ್ರ ಹೇಳುತ್ತಾನಾಗಲಿ ಅದರ ಅನುಭವವು ಅವನಿಗಿರುವುದಿಲ್ಲ. ಅವನ ಅನುಭವದಲ್ಲಿ ನಾನು ಕರ್ತನು ಭೋಕ್ತನು ಇತ್ಯಾದಿ ಅನಾತ್ಮ ಜ್ಞಾನವು ಬೇರೂರಿ ಕೊಂಡಿರುತ್ತದೆ. ಇವನು ಬಾಯಿಬ್ರಹ್ಮಿಯಾಗಿರುತ್ತಾನೆಂಬ ಭಾವವು.

**ಅವತಾರಿಕೆ** — ಅನ್ಯಜನರಿಂದ ಹೊಗಳಿಸಿಕೊಳ್ಳಲೋಸುಗ ವಾಗ್ಬ್ರಹ್ಮಿಯು ತಾನು ಕಲಿತ ಪಾಠವನ್ನು ಮಾತ್ರಗಿಳಿಯಂತೆ ನುಡಿಯುತ್ತಾನೆ ಅದರ ಅನುಭವವು ಅವನಿಗಿರುವುದಿಲ್ಲ. ಎಂದುಹೇಳಿದಿರಿ. ಎಲ್ಲರೂ ಬ್ರಹ್ಮ ವಿಚಾರವನ್ನು ಬಾಯಿಂದಲೇ ಹೇಳುತ್ತಿರುತ್ತಾರೆ. ಇವರ ಪೈಕಿ ಈತನೇ ವಾಗ್ಬ್ರಹ್ಮಿಯು ಈತನು ವಾಗ್ಬ್ರಹ್ಮಿಯಲ್ಲ. ಎಂಬುದನ್ನು ಹೇಗೆತಿಳಿಯಬೇಕು? ಅಲ್ಲದೆ ವಾಗ್ಬ್ರಹ್ಮಿಗಿರುವಪ್ರತ್ಯೇಕ ವಾದ ಲಕ್ಷಣವೇನು? ಎಂಬ ಪ್ರಶ್ನೆಗೆ ಜ್ಞಾನ ಮತ್ತು ಕರ್ಮ ಎರಡರಿಂದ ಮುಕ್ತಿಯು ಪ್ರಾಪ್ತಿಯಾಗುತ್ತದೆಂಬ ಸಮುಚ್ಚಯ ವಾದಿತ್ವವೇ ವಾಗ್ಬ್ರಹ್ಮಿಗಿರುವ ಪ್ರತ್ಯೇಕ ಲಕ್ಷಣವು. ಎಂಬುದನ್ನು ಮುಂದಿನ ಶ್ಲೋಕದಲ್ಲಿ ಉತ್ತರಿಸುತ್ತಾರೆ.

## * ಮಾಲಿನೀ ವೃತ್ತ.

ಸಮಮಧಿಕೃತ ತತ್ವೈಃ ಕೇವಲಜ್ಞಾನ ವಾರ್ತಾ ।
ಭ್ಯುಪಗತಿ ರುಪಕಂಠೇ ಕರ್ಮಣಃ ಕರ್ಮಠಾನಾಂ ।
ಹೃದಿತದುಭಯ ಮುಕ್ತ್ವಾ ಮುಕ್ತಿಭಾವೇ ನ್ಯತಾಪ್ತೇ ।
ರಸವದಭೃತಿ ರಿತ್ಥಂ ಭಾತಿವಾಗ್ಬ್ರಹ್ಮ ವೃತ್ತಂ ॥ ೮೫ ॥

**ಪದಚ್ಛೇದ** ;— ಸಮಂ, ಅಧಿಕೃತಂ, ತತ್ವೈಃ. ಕೇವಲ, ಜ್ಞಾನವಾರ್ತಾ. ಅಭ್ಯುಪಗತಿಃ, ಉಪಕಂಠೇ, ಕರ್ಮಣಃ. ಕರ್ಮಠಾನಾಂ, ಹೃದಿ, ತತ್, ಉ

* ೨೩ ನೇ ಶ್ಲೋಕದ ಛಂದಸ್ಸನ್ನು ನೋಡಿರಿ.

ಭಯ ಮುಷ್ಟಾಮುಷ್ಟಿಭಾವೇ, ಮೃತಾಪ್ತೇಃ, ಅಸತ್, ಅವಧೃತಿಃ, ಇತ್ಥಂ ಭಾತಿ, ವಾಗ್ಬ್ರಹ್ಮ, ವೃತ್ತಂ,

**ಟೀಕೆ;**—ಸಮಂ=ಜ್ಞಾನ ಕರ್ಮ ಸಮುಚ್ಚಯ ವಾದಿಗಳಾದ | ಕರ್ಮಠಾನಾಂ = ಕರ್ಮನಿಷ್ಠರ | ಅಧಿಕೃತಂ = ಮುಖ್ಯವಾದ | ತತ್ವೈಃ = ತತ್ವಗಳಿಂದ | (ಮಿಳಿತ) ಕೇವಲ ಜ್ಞಾನವಾರ್ತಾ = ಬರೀಜ್ಞಾನವೃತ್ತಾಂತದ | ಅಭ್ಯುಪಗತಿಃ = ಪ್ರಾಪ್ತಿಯು | ಉಪಕಂಠೇ = ನಾಲಿಗೆಯಲ್ಲಿ | ಹೃದಿ = ಭಾವದಲ್ಲಿ | ಕರ್ಮಣಃ = ಕರ್ಮದ (ಪ್ರಾಪ್ತಿಯು) ತದುಭಯ = ಆ ಜ್ಞಾನ ಕರ್ಮಗಳೆರಡಕ್ಕೆ ವಿರೋಧವಿರುವುದರಿಂದ | ಮುಷ್ಟಾಮುಷ್ಟಿಭಾವೇ = ಗುದ್ದಿಗೆ ಗುದ್ದು ಮಲ್ಲಯುದ್ಧ ವಾಗಲಾಗಿ | ಮೃತಾಪ್ತೇಃ = ಮರಣಪ್ರಾಪ್ತಿ ಯಾಗುವುದರಿಂದ | ಇತ್ಥಂ = ಈವಿಧವಾದ | ಅಸದವಧೃತಿಃ = ಅಯೋಗ್ಯನಿಷ್ಠೆಯಾದ ವಾಗ್ಬ್ರಹ್ಮ = ಬಾಯಿಬ್ರಹ್ಮಯ | ವೃತ್ತಂ = ವರ್ತನೆಯು | ಭಾತಿ = ತೋರುತ್ತದೆ |

**ತಾತ್ಪರ್ಯ;**—ಜ್ಞಾನ ಕರ್ಮ ಸಮುಚ್ಚಯವಾದಿಗಳೋ ವಾಗ್ಬ್ರಹ್ಮಗಳು ಇವರು ಹೃದಯದಲ್ಲಿ ಕರ್ಮನಿಷ್ಠರಾಗಿ, ಬಾಯಿಯಲ್ಲಿ ಮಾತ್ರಬ್ರಹ್ಮತತ್ವವನ್ನುಹೇಳುವವರಾಗಿ ಇರುತ್ತಾರೆ. ಜ್ಞಾನ ಕರ್ಮ ಗಳಿಗೆ ಪರಸ್ಪರ ವಿರೋಧ ವಿರುವುದರಿಂದ ಮುಷ್ಟಾಮುಷ್ಟಿ ಯುದ್ಧವು ಜರಿಗಿ ಮರಣಪ್ರಾಪ್ತವಾದ ಸ್ಥಿತಿಯಲ್ಲಿ ಪರಿವರ್ತಿಸುತ್ತಾರೆ.

**ವಿಶೇಷಾರ್ಥ,**— ಕರ್ಮ ಜ್ಞಾನ ಗಳೆರಡೂ ಮೋಕ್ಷ ಪ್ರಾಪ್ತಿಗೆ ಸಾಧನವೆಂದು ವ್ಯವಹರಿಸುವ ಸಮುಚ್ಚಯ ವಾದಿಗಳು ನಾಲಿಗೆಯಲ್ಲಿ ಮಾತ್ರ ಅಧ್ಯಾತ್ಮಜ್ಞಾನ ತತ್ವಗಳನ್ನು ಜನರಮುಂದೆ ಹೇಳುತ್ತಾರೆ. ತಮ್ಮ ಹೃದಯದಲ್ಲಿ ಕರ್ಮನಿಷ್ಠರಾಗಿರುತ್ತಾರೆ. ಇವರಿಗೆ ವಾಗ್ಬ್ರಹ್ಮ ಗಳೆನ್ನಬೇಕು. ವಾಗ್ಬ್ರಹ್ಮಗಳ ವರ್ತನೆಯು ಮತ್ತು ಸ್ಥಿತಿಯು ಮರಣಪ್ರಾಯವಾಗಿರುವುದೆಂಬುದನ್ನು ಗ್ರಂಥಕರ್ತರು ಯುದ್ಧೋಪಮಾನ ವನ್ನಿತ್ತಿರುತ್ತಾರೆ. ಯುದ್ಧವು ಪರಸ್ಪರ ವೈರತ್ವವಿದ್ದರೆ ಮಾತ್ರ ಜರುಗುತ್ತದೆ ವೈರತ್ವ ವಿಲ್ಲದಿದ್ದರೆ ಯುದ್ಧವು ಜರುಗುವುದಿಲ್ಲ ಯುದ್ಧದಲ್ಲಿ ಒಬ್ಬರಿಗೆಜಯ ಮತ್ತೊಬ್ಬರಿಗೆ ಅಪಜಯ ಹೀಗೆಂಬುದು ಲೋಕರೂಢಿಯಿದ್ದರೂ ವಾಗ್ಬ್ರಹ್ಮಯ ಸ್ಥಿತಿಯು ಸುಂದೋಪ ಸುಂದರ ಯುದ್ಧದಂತೆ ಮರಣರೂಪ ಅಪಜಯವೇ ಪ್ರಾಪ್ತಿ ಯಾದಂತಿರುತ್ತದೆ. ಅಂದರೆ ವಾಗ್ಬ್ರಹ್ಮಯುಕರ್ಮ ಜ್ಞಾನಗಳೆರಡರಿಂದಲು ಅಪಜಯ ಹೊಂದುತ್ತಾನೆ. ಈ ಅಭಿಪ್ರಾಯವನ್ನು ಈ ಹಿಂದೆ ಗ್ರಂಥಕರ್ತರು ಆನೇಶ್ಲೋಕದಲ್ಲಿ "**ಕರ್ಮ ಜ್ಞಾನ್ಸದಯಕೃತ ನಿಷ್ಠಃ ಪಾತಿತ್ಯಂ ಯಾ ತ್ಯುಭಯ ಭ್ರಷ್ಟಃ** " ಎಂದುಹೇಳಿರುತ್ತಾರೆ. ಜ್ಞಾನದ ಸ್ವ

ರೂಪವು ಅಸಂಗ, ಅಕರ್ತೃ, ಅಭೋಕ್ತೃ, ಸರ್ವಸಾಕ್ಷಿ, ಚಿನ್ಮಾತ್ರ ಬ್ರಹ್ಮವೇ ನಾನಿದ್ದೇನೆ. ಎಂಬ ಒಪ್ಪಾದ ತಿಳುವಳಿಕೆಯಾಗಿದೆ. ಕರ್ಮದ ಸ್ವರೂಪವು ಸಂಸಾರಿ, ಕರ್ತೃ, ಭೋಕ್ತೃ, ಸುಖ, ದುಃಖ ಪುಣ್ಯ, ಪಾಪ ಸಹಿತ ಜೀವನೇ ನಾನಿದ್ದೇನೆಂಬುದು ತಪ್ಪುತಿಳುವಳಿಕೆಯಾಗಿದೆ. ಈ ಎರಡು ತಿಳುವಳಿಕೆಗಳು ಪರಸ್ಪರ ವಿರುದ್ಧವಾಗಿವೆ ಈ ಒಪ್ಪು ತಪ್ಪಾದ ತಿಳುವಳಿಕೆಯಿಂದ ಯುಕ್ತನಾದ್ದರಿಂದ ಕರ್ಮಜ್ಞಾನಗಳ ಫಲಗಳಲ್ಲಿ ತನಗೊಂದು ಫಲವಾದರೂ ಲಭಿಸದೆ ಉಭಯ ಫಲಗಳಿಂದಲೂ ಭ್ರಷ್ಟನಾಗುತ್ತಾನೆ. ವಾಗ್ಬ್ರಹ್ಮಿಯಸ್ಥಿತಿಯು ಸುಂದೋಪಸುಂದರ ಯುದ್ಧದಂತೆ ಮರಣಪ್ರಾಪ್ತಿಯಲ್ಲದೆ ಆ ಕರ್ಮಜ್ಞಾನಗಳಲ್ಲಿ ಒಂದುಫಲವನ್ನು ಸಹ ಹೊಂದುವುದಿಲ್ಲ, ವದನದಲ್ಲಿ ತತ್ತ್ವಜ್ಞಾನ, ಹೃದಯದಲ್ಲಿ ಕರ್ಮನಿಷ್ಠೆ, ಇವೆರಡು ಪರಸ್ಪರ ವಿರುದ್ಧಗಳಾಗಿರುವುದರಿಂದ ಇವೆರಡಕ್ಕೆ ಯುದ್ಧ ಜರುಗಿರುವುದೆಂದು ತಿಳಿಯಬೇಕು. ಈ ಯುದ್ಧದಲ್ಲಿ ಸಿಕ್ಕ ವಾಗ್ಬ್ರಹ್ಮಿಗೆ ನಿಜವಾಗಿಯೂ ಮರಣಪ್ರಾಪ್ತಿಸ್ಥಿತಿಯುಂಟಾಗುವುದೆಂದು ಗ್ರಹಿಸಬೇಕು.

## ವಾರ್ಧಿಕಷಟ್ಪದಿ

ನೆರೆ ಹುಟ್ಟು ಕುರುಡ ತಾಂ ಗೊಂಬೆಯಾಟಕೆ ಜನರು ।
ನೆರೆದಿರಲ್ಕಲ್ಲಿ ಕುಳಿತವರು ನಗುತಿರಲವರ ।
ಪರಿಯಂತೆ ನಗುವಂತೆ ಸುಜ್ಞಾನ ಸಂಪನ್ನರಿರುತಿರ್ಪ ಸ್ಥಾನದಲ್ಲಿ ॥
ಅರಿಯದಜ್ಞಾನಿತಾ ನವರಂತೆ ಬಾಯಿಂದ ।
ಪರಬ್ರಹ್ಮ ಸುವಿಚಾರ ವಾಕ್ಯಗಳ ನಾಡುತ್ತ ।
ಬರಿದೆ ಹೊಗಳಿಸಿಕೊಳ್ಳ ವಿಚ್ಛೆಯಿಂ ನಟಿಸುವನು ವಾಗ್ಬ್ರಹ್ಮಿಯಿಾಜಗದಲಿ ॥ ೨೪ ॥

ಜ್ಞಾನ ಕರ್ಮ ಗಳೆರಡು ಮುಕ್ತಿಸಾಧನವೆಂದು ।
ತಾನೊಪ್ಪಿ ಹೃದಯ ದಲಿ ಕರ್ಮನಿಷ್ಠಿತನಾಗಿ ।
ಜ್ಞಾನಪರ ವಾಕ್ಯಗಳು ವದನದಿಂ ನುಡಿಯುತಲಿ ಕ್ಕಾಜ್ಞಾನಕರ್ಮ ಗಳಿಗೆ ॥
ನ್ಯಾಸವಿಲ್ಲದೆ ಯುದ್ಧ ಜರುಗಿ ಮರಣ ಪ್ರಾಪ್ತಿ ।
ತಾನಪ್ಪಸ್ಥಿತಿಯಲ್ಲಿ ವರ್ತಿಸುತ್ತಿರುತಿಹನು ।
ಕ್ಷೋಣಿಯಲಿ ವಾಗ್ಬ್ರಹ್ಮಿ ಯಿದು ಯಥಾರ್ಥವು ನಾಡೆಸುವಿಚಾರದಿಂ ತಿಳಿಯಲು ॥ ೨೫ ॥

**ಅವತಾರಿಕೆ :** —ವಾಗ್ಬ್ರಹ್ಮಿಯ ಲಕ್ಷಣವನ್ನು ಹೇಳಿದಿರಿ ಅವನು ಜ್ಞಾನಕರ್ಮವೆಂಬೆರಡರಿಂದಲೂ ಭ್ರಷ್ಟನಾಗುತ್ತಾನೆಂಬುದು ಗೊತ್ತಾಯಿತು. ಇದರ ಹಿಂದಿನ ಅವತಾರಿಕೆಯಲ್ಲಿ ಮಾಡಿದ ಒಂದುಪ್ರಶ್ನೆಯು ಹಾಗೇ ಉಳಿಯಿತು ಯಾವುದೆಂದರೆ ವಾಗ್ಬ್ರಹ್ಮಿಯು ಮತ್ತು ವಾಗ್ಬ್ರಹ್ಮಿಯಲ್ಲದವನು ಅವರೀರ್ವರೂ ಬಾ

ಯಿಂದ ಬ್ರಹ್ಮ ವಿಚಾರವನ್ನು ಹೇಳುತ್ತಾರೆ ಇವರ ಪೈಕಿ ಈತನೇ ವಾಗ್ಬ್ರಹ್ಮಿಯು, ಈತನು ವಾಗ್ಬ್ರಹ್ಮಿಯಲ್ಲ ಎಂಬುದನ್ನು ಹೇಗೆತಿಳಿಯಬೇಕು? ವಾಗ್ಬ್ರಹ್ಮಿಯಲಕ್ಷಣ ವನ್ನು ಮಾತ್ರ ಹೇಳಿದ್ದಾಯಿತು. ವಾಗ್ಬ್ರಹ್ಮಿಯಲ್ಲದಾತನು ಹೇಗಿರುತ್ತಾನೆ ಆತನನ್ನು ಗುರ್ತಿಸುವುದುಹೇಗೆ? ಎಂಬ ಪ್ರಶ್ನೆಗೆ ಇನ್ನೂ ಉತ್ತರ ಬರಲಿಲ್ಲ, ಆ ವಾಗ್ಬ್ರಹ್ಮಿಯಲ್ಲದಾತನು ಬಾಯಿಯಿಂದ ಬ್ರಹ್ಮ ವಿಚಾರವನ್ನು ಹೇಳಲೇಬಾರದೇನು? ಮೌನವಾಗಿರಬೇಕೇನು ? ಎಂಬ ಪ್ರಶ್ನೆಗೆ ನರ್ತಕಿಯಉಪಮಾನವನ್ನಿತ್ತು ವಾಗ್ಬ್ರಹ್ಮಿಯಲ್ಲ ದಾತನ ಲಕ್ಷಣವನ್ನು ಸೂಚಿಸುತ್ತಾರೆ.

## ಹರಿಣೀ ವೃತ್ತಂ.

**ವಪುಷಿ ವಲನಾಂ ಪಾದೇತಾಳಂ ಕರೇಭಿನಯಕ್ರಮಂ ।**
**ಮುಖಭುವಿರಸಂ ವಾಣ್ಯಾಂ ಗೀತಿಂ ನಿಜಾಶಯುತಾಂ ಹೃದಿ ॥**
**ಅಪಿಭೃತವತೀ ಮೂರ್ಧ್ನಾ ಕುಂಭಂ ಹೃತಾಸ್ಥನಟೀವಭಾ ।**
**ತ್ಯಖಿಲ ವಿಷಯೈಃ ಕ್ಷುಬ್ಧೋಽಪ್ಯಾತ್ಮನ್ಯದಿಷ್ಠಿ ತಧೀರ್ಯತಿಃ ॥ ೮೬ ॥**

**ಪದಚ್ಛೇದ ;—** ವಪುಷಿ. ವಲನಾಂ, ಪಾದೇ; ತಾಳಂ, ಕರೇ, ಅಭಿನಯಕ್ರಮಂ, ಮುಖವಿಭುರಸಂ, ವಾಣ್ಯಾಂ, ಗೀತಿಂ, ನಿಜಾಶಯುತಾಂ, ಹೃದಿ, ಅಪಿ, ಭೃತವತೀ. ಮೂರ್ಧ್ನಾ, ಕುಂಭಂ, ಹೃತಾಸ್ಥ. ನಟಿ, ಇವ, ಭಾತಿ, ಅಪಿ, ಅಖಿಲ ವಿಷಯೈಃ, ಕ್ಷುಬ್ಧಃ, ಅಪಿ. ಆತ್ಮನಿ, ಅಧಿಷ್ಠಿತ, ಧೀಃ, ಯತಿಃ,

**ಟೀಕೆ ;—** ವಪುಷಿ = ಶರೀರದಲ್ಲಿ । ವಲನಾಂ = ವೈಯ್ಯಾರವನ್ನು । ಪಾದೇ = ಪಾದದಲ್ಲಿ । ತಾಳಂ = ತಾಳದ ಸ್ಥಾಯಿಯನ್ನು । ಕರೇ = ಕರದಲ್ಲಿ । ಅಭಿನಯಕ್ರಮಂ = ನಾಟ್ಯದರೀತಿಯನ್ನು । ಮುಖವಿಭುರಸಂ = ಮುಖದಲ್ಲಿಶೃಂಗಾರಾದಿ ರಸವನ್ನು । ವಾಣ್ಯಾಂ = ವಾಣಿಯಲ್ಲಿ । ಗೀತಿಂ = ಹಾಡುಗಾರಿಕೆಯನ್ನು ಹೃದಿ = ಮನದಲ್ಲಿ । ನಿಜಾಶಯುತಾಂ = ತನ್ನ ಅಭಿಪ್ರಾಯವನ್ನು । ಅಪಿ = ಮತ್ತು । ಮೂರ್ಧ್ನಾ = ತಲೆಯಮೇಲೆ । ಕುಂಭಂ = ಕೊಡವನ್ನು । ಭೃತವತೀ = ಧರಿಸಿದಂಥ । ಹೃತಾಸ್ಥ = ಜನರಚಿತ್ತವನ್ನು ಸೆಳೆದುಕೊಳ್ಳುವ । ನಟೀವ = ನರ್ತಕಿಯಂತೆ । ಯತಿಃ = ಜ್ಞಾನಿಯು । ( ಪರಮಹಂಸನು ) ಅಖಿಲವಿಷಯೈಃ = ಸಮಸ್ತವಿಷಯುಗಳಿಂದ । ಕ್ಷುಬ್ಧಃ = ವಿಕ್ಷಿಪ್ತನಾಗಿ । ಭಾತ್ಯಪಿ = ತೋರಿದಾಗ್ಯೂ । ಆತ್ಮನಿ = ಸಾಕ್ಷ್ಯಾತ್ಮನಲ್ಲಿ । ಅಧಿಷ್ಠಿತ = ಅಧಿಷ್ಠಾನವೆಂದಂಗೀಕರಿಸಿದ । ಧೀಃ = ಬುದ್ಧಿಯುಳ್ಳವನಾಗಿರುತ್ತಾನೆ ।

**ತಾತ್ಪರ್ಯ ;—** ನರ್ತಕಿಯು ಶರೀರದಿಂದ ವೈಯ್ಯಾರವನ್ನು, ಚರಣದಿಂದ ತಾಳದ ಗತಿಯನ್ನು, ಕರದಿಂದ ಅಭಿನಯ ಪದ್ಧತಿಯನ್ನು, ಮುಖದಿಂದ ಶೃಂಗಾರಾದಿರಸವನ್ನು, ವಾಣಿಯಿಂದ ಹಾಡುಗಾರಿಕೆಯನ್ನು, ಮನಸ್ಸಿನಲ್ಲಿ ಜನರು ಮೆಚ್ಚಬೇಕೆಂಬ ಉದ್ದೇಶವನ್ನು ನಾಟ್ಯರೂಪದಿಂ ಪ್ರದರ್ಶಿಸುತ್ತಾ, ನಾನು ಶಿರದಲ್ಲಿ ಹೊತ್ತ ಕಲಶದಲ್ಲಿ ನಿಜಲಕ್ಷವನ್ನಿಟ್ಟುಕೊಂಡಿರುವಂತೆ ಬ್ರಹ್ಮಜ್ಞಾನಿಯು ಪ್ರಕ್ಚಂದನಾದಿ ವಿಷಯುಗಳಲ್ಲಿ ವ್ಯವಹರಿಸುತ್ತಿದ್ದರೂ ತನ್ನ ನಿಜಲಕ್ಷ್ಯೆಯನ್ನು ಬ್ರಹ್ಮದಲ್ಲಿಟ್ಟಿರುತ್ತಾನೆ.

**ವಿಶೇಷಾರ್ಥ ;—** ವಾಗ್‌ಬ್ರಹ್ಮಿಯಲ್ಲದ ಬ್ರಹ್ಮಜ್ಞಾನಿಯು ಮೌನವಾಗಿ ಇರಬೇಕಾದ್ದೇನೂಇಲ್ಲ ಅಧಿಕಾರಿಗಳಲ್ಲಿ ಬ್ರಹ್ಮವಿಚಾರವನ್ನು ಹೇಳುತ್ತಲೂ, ಕೇಳುತ್ತಲೂ ಇರಬಹುದು. ವಾಗ್‌ಬ್ರಹ್ಮಿಯಂತೆ ಹೊರಗೆ ಜ್ಞಾನದಮಾತು ಒಳಗೆ ಕರ್ಮದನಿಷ್ಠೆ ಈರೀತಿಬ್ರಹ್ಮಜ್ಞಾನಿಯಿರುವುದಿಲ್ಲ ವಾಣಿಯಿಂದ ನುಡಿಯುವಂತೆ ಹೃದಯದಲ್ಲಿ ನಾನು ಅಕರ್ತಾ, ಅಭೋಕ್ತಾ, ಅಸಂಗ, ಸಚ್ಚಿದಾನಂದ ಅಖಂಡೈಕ ರಸರೂಪನೆಂದು ತಿಳಿದು ತನ್ನಿಷ್ಠೆಯಲ್ಲಿರುತ್ತಾನೆ ಅಂದರೆ ಪರಬ್ರಹ್ಮವೇ ನಾನೆಂಬನಿಷ್ಠೆಯು ಜ್ಞಾನಿಯ ಹೃದಯದಲ್ಲಿ ಬೇರುಬಿಟ್ಟಿರುತ್ತದೆ. ಆ ಬ್ರಹ್ಮಜ್ಞಾನಿಯು ಯಾವ ವ್ಯವಹಾರದಲ್ಲಿದ್ದರೂ ಬ್ರಹ್ಮನಿಷ್ಠೆಯಲ್ಲಿಯೇ ಇರುತ್ತಾನೆ ಎಂಬುದು ನರ್ತಕಿಯ ಉಪಮಾನವನ್ನಿತ್ತು ಗ್ರಂಥಕರ್ತರು ಮನವರಿಕೆಮಾಡಿಕೊಡುತ್ತಾರೆ. ನರ್ತಕಿಯು ನಿರಭಿಮಾನದಿಂದ ( ನಾಚಿಕೆಯನ್ನು ಬಿಟ್ಟು ) ತಲೆಯಮೇಲೆ ಕುಂಭವನ್ನು ಹೊತ್ತುಕೊಂಡು ನಾಟ್ಯಮಾಡುತ್ತಾಳೆ. ( ಕುಣಿಯುತ್ತಾಳೆ ) ಆ ಕುಣಿತದಲ್ಲಿ ಶರೀರದಲ್ಲಿ ವಲನಾತ್ಮಕ ವೈಯ್ಯಾರವನ್ನು ತೋರಿಸುತ್ತಾಳೆ ಚರಣಗಳಲ್ಲಿ ತಾಳದ ಗತ್ತನ್ನು ಅನುಸರಿಸುತ್ತಾಳೆ. ಕೈಗಳಿಂದ ಭರತನಾಟ್ಯದ ಅಭಿನಯ ಪದ್ಧತಿಯನ್ನು ತೋರಿಸುತ್ತಾಳೆ. ಮುಖದಲ್ಲಿ ಶೃಂಗಾರವೇ ಮೊದಲುಗೊಂಡು ಕರುಣಾಂತ ಮಾದ ನವರಸಗಳನ್ನು ಸೂಚಿಸುತ್ತಾಳೆ ವಾಣಿಯಿಂದ ಸಂಗೀತವನ್ನುಮಾಡುತ್ತಾಳೆ. ತನ್ನ ಮನಸ್ಸಿನಿಂದ ಜನರು ನನ್ನನ್ನು ಮೆಚ್ಚಿಕೊಂಡು ವಶವಾಗಬೇಕೆಂಬ ತನ್ನ ನಿಜಾಶಯವನ್ನು ವ್ಯಕ್ತಪಡಿಸುತ್ತಾಳೆ. ಇಂತಿಷ್ಟು ರೂಪದಿಂದ ನರ್ತಕಿಯು ವ್ಯವಹರಿಸಿದರೂ ತಾನು ಹೊತ್ತಿರುವ ಕುಂಭದಲ್ಲಿ ಮಾತ್ರ ತನ್ನ ನಿಜಲಕ್ಷ್ಯೆಯನ್ನು ಇಟ್ಟೇ ಇರುತ್ತಾಳೆ. ಈ ಉಪಮಾನದಂತೆ ಬ್ರಹ್ಮಜ್ಞಾನಿಯು ಅಧಿಕಾರಿಗಳಲ್ಲಿ ಬ್ರಹ್ಮವಿಚಾರವನ್ನು ಹೇಳುತ್ತಲೂ ಕೊಡುಕೊಳ್ಳುವ ವ್ಯವಹಾರದಲ್ಲಿ ಇರುತ್ತಲೂ ಪ್ರಕ್ಚಂದನಾದಿ ಭೋಗ್ಯವಸ್ತುಗಳನ್ನು ಭೋಗಿಸುತ್ತಲೂ ಇದ್ದರೂ, ತನ್ನ ಹೃದಯದಲ್ಲಿಮಾತ್ರ ತನ್ನ ಸ್ವರೂಪನಿಷ್ಠೆಯನ್ನು ಬಿಟ್ಟಿರುವುದಿಲ್ಲ. ಈ ಲಕ್ಷಣದಿಂದ ಕೂಡಿದಾತನು ವಾಗ್‌ಬ್ರಹ್ಮಿಯಲ್ಲದ ಬ್ರಹ್ಮಜ್ಞಾನಿಯೆಂದು ( ಜೀವನ್ಮುಕ್ತನೆಂದು ) ತಿಳಿಯಬೇಕು ಎಂಬ ಭಾವವು.

## ವಾರ್ಧಿಕ ಷಟ್ಪದಿ.

ಚರಣದಲಿ ತಾಳಗತಿ ತನುವಿನಲಿ ವೈಯ್ಯಾರ ।
ಕರದ ಲಭಿನಯಕ್ರಮವು ವದನದಲಿ ಶೃಂಗಾರ ।
ಸುರಸಸಂಗೀತ ತಾಂ ವಾಣಿಯಲಿ ಮನದಲ್ಲಿ ಜನಮೆಚ್ಚಲುದ್ದೇಶವು ।
ಶಿರದಮೇಲ್ ಪೊತ್ತಿರುವ ಕುಂಭದಲಿ ನಿಜಲಕ್ಷೆ ।
ಯಿರಿಸಿ ನಟಿಸುವ ನರ್ತಕಿಯರೀತಿ ಸುಜ್ಞಾನಿ ।
ಪರಿಪರಿಯ ವಿಷಯಂಗಳಲ್ಲಿ ವ್ಯವಹರಿಸಿದರು ಬ್ರಹ್ಮಲಕ್ಷದಲಿರ್ಪನು ॥೮೬॥

**ಅವತಾರಿಕೆ ;—** ವಾಗ್ಬ್ರಹ್ಮಿಯಲ್ಲದ ಬ್ರಹ್ಮಜ್ಞಾನಿಯು ಸಕಲವ್ಯವಹಾರದಲ್ಲಿದ್ದರೂ ತನ್ನ ಸ್ವರೂಪದಲ್ಲಿ ನಿಜಲಕ್ಷ್ಯೆಯನ್ನಿಟ್ಟುಕೊಂಡಿರುತ್ತಾನೆಂದು ಹೇಳಿದಿರಿ. ಆದರೆ ವ್ಯವಹಾರವೆಂಬುದು ಅನೇಕ ಖೇದಮೋದಗಳಿಂದ ಕೂಡಿಕೊಂಡಿದೆ, ಅನೇಕ ಸಂಕಟಸಂದರ್ಭಗಳು ಬಂದೊದಗಿದಾಗ ಆ ಬ್ರಹ್ಮನಿಷ್ಠೆಯು ನಿಲ್ಲುವುದೆಂತು ? ಎಂಬ ಪ್ರಶ್ನೆಗೆ ಬ್ರಹ್ಮಜ್ಞಾನಿಯು ಮೇಲು ಕೀಳುಗಳೆಂಬುದರಲ್ಲಿ ಸಮದರ್ಶಿಯಾಗಿರುತ್ತಾನೆಂಬ ಉತ್ತರವನ್ನು ಮುಂದಿನ ಶ್ಲೋಕದಲ್ಲಿ ಸೂಚಿಸುತ್ತಾರೆ.

## * ಶಾಲಿನೀವೃತ್ತ.

**ಗ್ರಾಮಂ ದಾವಂ ಭಿಸ್ಸಟಾಂ ಸ್ವಾದ್ವಪೂಪಂ ।**
**ಸೌಧಂ ಗೋಷ್ಟಂ ರಲ್ಲಕಾರ್ಥಂ ದುಕೂಲಂ ।**
**ಮುಂಡಂ ದುಗ್ಧಂ ಶಾದ್ವಲಂ ಸ್ವರ್ಣಮುಂಚಂ ।**
**ತುಲ್ಯಂ ಮತ್ವಾಕ್ರೀಡತಿ ಬ್ರಹ್ಮವೇತ್ತಾ ॥ ೮೭ ॥**

**ಪದಚ್ಛೇದ** — ಗ್ರಾಮಂದಾವಂ ಭಿಸ್ಸಟಾಂ, ಸ್ವಾದು, ಅಪೂಪಂ, ಸೌಧಂ, ಗೋಷ್ಠ, ರಲ್ಲಕಾರ್ಥಂ. ದುಕೂಲಂ, ಮುಂಡಂ, ದುಗ್ಧಂ, ಶಾದ್ವಲಂ, ಸ್ವರ್ಣಮುಂಚಂ, ತುಲ್ಯಂಮತ್ವಾ. ಕ್ರೀಡತಿ, ಬ್ರಹ್ಮವೇತ್ತಾ,

**ಟೀಕೆ ;—** ಬ್ರಹ್ಮವೇತ್ತಾ = ಬ್ರಹ್ಮಜ್ಞಾನಿಯು । ಗ್ರಾಮಂದಾವಂ = ಊರನ್ನು ಅರಣ್ಯವನ್ನು । ಭಿಸ್ಸಟಾಂ = ಹೊತ್ತಿದ್ದಾಗಿಯೂ, ಹಳಸಿದ್ದಾಗಿಯೂ ಇರುವ ಅನ್ನವನ್ನು । ಸ್ವಾದು = ರುಚಿಯಾದ । ಅಪೂಪಂ = ಅತಿರಸವನ್ನು । ಸೌಧಂ = ಮಹಡಿಯ ಮನೆಯನ್ನು । ಗೋಷ್ಟಂ = ಗೋವಿನ ದೊಡ್ಡಿಯನ್ನು । ರಲ್ಲಕಾರ್ಥಂ = ಹರಿವ ಕಂಬಳಿಕೋರಿಯನ್ನು । ದುಕೂಲಂ = ರೇಶಿಮೆಯ ಬಟ್ಟೆ

* ೧೮ನೇ ಶ್ಲೋಕದ ಛಂದಸ್ಸನ್ನು ನೋಡಿ

ಯನ್ನು । ಮಂಡಂ = ಗಂಜಿಯನ್ನು । ದುಗ್ಧಂ = ಹಾಲನ್ನು । ಶಾದ್ವಲಂ = ಹುಲ್ಲಿನ ಹಾಸಿಗೆಯನ್ನು । ಸ್ವರ್ಣಮಂಚಂ = ಕನಕ ನಿರ್ಮಿತ ಮಂಚವನ್ನು । ತುಲ್ಯಂ ಮತ್ವಾ = ಸಮಾನನೆಂದು ಒಪ್ಪಿಕೊಂಡು । ಕ್ರೀಡತಿ = ರಮಿಸುತ್ತಾನೆ ।

**ತಾತ್ಪರ್ಯ;**– ಬ್ರಹ್ಮವೇತ್ತನು ಊರನ್ನು ಅಡವಿಯನ್ನು, ಕಾದನ್ನವನ್ನು ಸ್ವಾದಾನ್ನವನ್ನು, ಮೇಲುಪ್ಪರಿಗೆಯನ್ನು ದನಗಳ ದೊಡ್ಡಿಯನ್ನು. ಕಂಬಳಿಕೋರಿಯನ್ನು, ಪೀತಾಂಬರವನ್ನು. ಗಂಜಿಯನ್ನು ಕ್ಷೀರವನ್ನು, ತೃಣಾಸನವನ್ನು ಸುವರ್ಣ ಮಂಚವನ್ನು, ಸಮಾನನೆಂದು ತಿಳಿದು ರಮಿಸುತ್ತಾನೆ.

**ವಿಶೇಷಾರ್ಥ;**— ಭೇದವೋದಗಳು ಮೇಲುಕೀಳುಗಳು ಅಜ್ಞಾನಿಗಳ ಮನಸ್ಸಿಗೆ ಮೆತ್ತಿಕೊಳ್ಳುವಂತೆ ಬ್ರಹ್ಮಜ್ಞಾನಿಯ ಮನಸ್ಸಿಗೆ ಮೆತ್ತಿಕೊಳ್ಳುವುದಿಲ್ಲ. ಏಕೆಂದರೆ ವ್ಯವಹಾರ ವಿಷಯಗಳೆಲ್ಲವೂ ತನ್ನ ಸ್ವರೂಪದಲ್ಲಿ ಮಿಥ್ಯಾಭಾಸಗಳೆಂದು ಅರಿತು ಅಳವಡಿಸಿಕೊಂಡು ಆಚರಿಸುತ್ತಾನೆ ಅವನ ದೃಷ್ಟಿಯಲ್ಲಿ ಊರು ಕಾಡುಸಮವೆ ಹೊತ್ತಿಯೂ ಹಳಸಿಯೂ ಇರುವ ಅನ್ನವಾಗಲಿ ಮೃಷ್ಟಾನ್ನವಾಗಲಿ ಸಮವಾಗಿ ಭುಂಜಿಸುತ್ತಾನೆ. ಮೇಲ್ಮಂದಿರದಲ್ಲಾಗಲಿ ದನಗಳು ಕೂಡಿದ ದೊಡ್ಡಿಯಲ್ಲಾಗಲಿ ಸಮಾನವೆಂದರಿತು ವಾಸಿಸುವನು. ಕಂಬಳಿಕೋರಿಯನ್ನಾಗಲಿ ಒಳ್ಳೆ ಪೀತಾಂಬರವನ್ನಾಗಲಿ ಒಂದೇ ಎಂದು ತಿಳಿದು ಹೊದೆಯುವನು. ಹುಲ್ಲಿನ ಹಾಸಿಗೆಯಲ್ಲಾಗಲಿ ಬಂಗಾರದ ಮಂಚದಮೇಲೆ ಹಾಸಿರುವ ಸುಪ್ಪತ್ತಿಗೆಯ ಹಾಸಿಗೆಯಲ್ಲಾಗಲಿ ಸಂತೋಷವಾಗಿ ನಿದ್ರಿಸುತ್ತಾನೆ. ಗಂಜಿಯನ್ನಿತ್ತರು ಹಾಲನ್ನಿತ್ತರು ತೃಪ್ತಿಕರವಾಗಿ ಕುಡಿಯುತ್ತಾನೆ ಅಂದರೆ ಬ್ರಹ್ಮಜ್ಞಾನಿಯ ದೃಷ್ಟಿಯಲ್ಲಿ ಶ್ರೇಷ್ಟ ಕನಿಷ್ಟಗಳು ಸಮಾನವಾಗಿರುತ್ತವೆಂಬ ಭಾವವು

## ವಾರ್ಧಿಕ ಷಟ್ಪದಿ.

ಹಳಸಿದನ್ನದಲಿ ಮೇಣ್ ಸ್ವಾದಾನ್ನದಲಿ ಕಂ ।
ಬಳಿ ಕೋರಿಯಲಿ ನವ್ಯ ವಸ್ತ್ರದಲಿ ಗೋಷ್ಪದಲಿ ।
ಜಲವೆಸಿಪ ಮೇಲ್ಮಂದಿರದಲಿ ಗೋಕ್ಷೀರದಲಿ ಗಂಜಿಯಲಿ ಬಂಗಾರದಿ ॥
ಹೊಳೆಯುತಿಹ ಮಂಚದಲಿ ಪುಲ್ಲಿನ್ಹಾಸಿಗೆಯಲ್ಲಿ ।
ತುಲನಾತ್ಮದೃಷ್ಟಿಯಿಂ ದೊಪ್ಪಿ ಕ್ರೀಡಿಸನು. ನಿ ।
ರ್ಮಲ ಬ್ರಹ್ಮಜ್ಞಾನಿಯಿವನಲ್ಲಿ ಶ್ರೇಷ್ಠಾಶ್ರೇಷ್ಠವೆಂಬೆರಡು ಸಮವೆನಿಸವು ॥
॥೮೭॥

**ಅವತಾರಿಕೆ;-** ಬ್ರಹ್ಮಜ್ಞಾನಿಯಲ್ಲಿ ಶಯನ ಊಟೋಪಚಾರಗಳಲ್ಲಿ ಕೀಳು ಮೇಲಿದ್ದರೂ ಸಮವಾಗಿರುತ್ತವೆಂದು ಹೇಳಿದಿರಿ. ಈ ಊಟೋಪಚಾರಗಳು ಹೇಗಿದ್ದರೂ ಸಮಯಾನುಸಾರ ಸರ್ವರೂ ಸಹಿಸಿಕೊಂಡು ವ್ಯವಹರಿಸುವುದುಂಟು. ಪ್ರಪಂಚ ವ್ಯವಹಾರದಲ್ಲಿ ಬಂದೊದಗುವ ಲಾಭ, ನಷ್ಟ, ಜಯಾಪಜಯ ಸುಖ ದುಃಖಾದಿಗಳಲ್ಲಿ ಸಮತ್ವ ಭಾವವು ಬ್ರಹ್ಮಜ್ಞಾನಿಯಲ್ಲಿ ಇರುತ್ತದೆಯೇ ? ಎಂಬ ಪ್ರಶ್ನೆಗೆ ಇರುತ್ತದೆ ಎಂಬ ಉತ್ತರವನ್ನು ಮುಂದಿನ ಶ್ಲೋಕದಲ್ಲಿ ಸೂಚಿಸುತ್ತಾರೆ

## * ಶಿಖರಿಣಿವೃತ್ತ

**ಸುಖಂದುಃಖಂ ಲಾಭೋವ್ಯಯ ಮಪಜಯಶ್ಚಾಪಿವಿಜಯಃ |**
**ಕ್ಷುದಾತೃಪ್ತಿಃ ಪೂಜಾಹನನಮಪಕೀರ್ತಿ ರ್ಘನಯಶಃ ||**
**ನುತಿರ್ನಿಂದಾ ರೋಗ್ಯಂರುಗ ಸಮುದರಿದ್ರಂ ವಿಭವತಾ |**
**ಮತೌ ಭಿನ್ನಾ ಪೀಷಲ್ಲಗತಿ ಯತಿಭಾವೇಸಮತಯಾ || ೮೮ ||**

**ಪದಚ್ಛೇದ ;—** ಸುಖಂದುಃಖಂ, ಲಾಭಃ, ವ್ಯಯಂ, ಅಪಜಯಃ, ಚ, ಅಪಿ, ವಿಜಯಃ, ಕ್ಷುಧಾ, ತೃಪ್ತಿಃ, ಪೂಜಾ, ಹನನಂ ಅಪಕೀರ್ತಿಃ, ಘನಯಶಃ, ನುತಿಃ, ನಿಂದಾ, ಆರೋಗ್ಯಂ, ರುಕ್ ಅಸಮುದರಿದ್ರಂ, ವಿಭವತಾ, ಮತೌ, ಭಿನ್ನಾಪಿ, ಈಷತ್, ಲಗತಿ, ಯತಿಭಾವೇ, ಸಮತಯಾ,

**ಟೀಕೆ ;—** ಸುಖಂದುಃಖಂ = ಸುಖದುಃಖವು | ಲಾಭೋವ್ಯಯಂ = ಲಾಭನಷ್ಟವು | ಚ = ಮತ್ತು | ಅಪಜಯಃ = ಸೋಲು | ವಿಜಯಃ = ಗೆಲುವು | ಅಪಿ = ಮತ್ತು | ಕ್ಷುಧಾ = ಹಸಿವು | ತೃಪ್ತಿಃ = ಸಂತುಷ್ಟಿಯು | ಪೂಜಾ = ಪೂಜೆಯು | ಹನನಂ = ಸಂಹರಿಸುವುದು | ಅಪಕೀರ್ತಿಃ = ಅಪಖ್ಯಾತಿಯು | ಘನಯಶಃ = ಅಧಿಕವಾದ ಯಶಸ್ಸು | ನುತಿಃ = ಸ್ತೋತ್ರವು | ನಿಂದಾ = ದೂಷಣೆಯು | ಆರೋಗ್ಯಂ = ರೋಗವಿಲ್ಲದಿರುವಿಕೆಯು | ರುಕ್ = ರೋಗವು | ಅಸಮು ದರಿದ್ರಂ = ಹೆಚ್ಚಾದ ಬಡತನವು | ವಿಭವತಾ = ಐಶ್ವರ್ಯತ್ವವು | ಮತೌ = ಬುದ್ಧಿಯಲ್ಲಿ | ಈಷತ್ = ಸ್ವಲ್ಪ | ಭಿನ್ನಾಪಿ = ಬೇರೆಯಾದರೂ | ಯತಿಭಾವೇ = ಬ್ರಹ್ಮಜ್ಞಾನಿಯ ಭಾವದಲ್ಲಿ | ಸಮತಯಾ = ಸಮತ್ವದಿಂದ | ಲಗತಿ = ಸಂಬಂಧಿಸುತ್ತದೆ. |

**ತಾತ್ಪರ್ಯ ;—** ಸುಖ ದುಃಖವು, ಲಾಭನಷ್ಟವು, ಜಯಾಪಜಯವು ಕ್ಷುಧಾ ತೃಪ್ತಿಯು, ಅರ್ಚನೆಯು ಹತ್ಯವು, ಕೀರ್ತಿ ಅಪಕೀರ್ತಿಯು, ಪುರಸ್ಕಾರ

* ೧೦ ನೇ ಶ್ಲೋಕದ ಛಂದಸ್ಸನ್ನು ನೋಡಿ,

ತಿರಸ್ಕಾರವು, ಆರೋಗ್ಯವು ರೋಗವು, ಅತಿಶಯ ದರಿದ್ರತ್ವವು ಹೆಚ್ಚಾದ ಸಿರಿತನವು, ಇವೆಲ್ಲವೂ ಹೆಚ್ಚುಕಡಿಮೆಯಿಂದಿದ್ದರೂ ಬ್ರಹ್ಮವೇತ್ತನ ಬುದ್ಧಿಯಲ್ಲಿ ಸಮತ್ವವಿರುತ್ತದೆ.

**ವಿಶೇಷಾರ್ಥ :—** ಬ್ರಹ್ಮನಿಷ್ಠನಾದ ಯತಿಯು ಪ್ರಾರಾಬ್ಧಕರ್ಮದಿಂದುಂಟಾಗುವ ಸುಖದುಃಖಾದಿ ದ್ವಂದ್ವಗಳೆಲ್ಲವೂ ಕರ್ಮವೈಚಿತ್ರವೆಂದರಿತುಕೊಂಡಿರುವುದರಿಂದ ಅಜ್ಞಜನರಲ್ಲಿ ಖೇದಮೋದಗಳುಂಟಾಗುವಂತೆ ಆತನಲ್ಲಿ ಉಂಟಾಗುವುದಿಲ್ಲ, ಆತನಿಗೆ ಊಚನೀಚ ಭೋಗಗಳು ತಟಸ್ಥವಾದರೂ, ಅವುಗಳನ್ನು ಸಮದೃಷ್ಟಿಯಿಂದ ನೋಡುತ್ತಾನೆ ಎಂಬ ಭಾವವು.

## ವಾರ್ಧಿಕ ಷಟ್ಪದಿ.

ಕೀರ್ತಿ ಯಪಕೀರ್ತಿಯಲಿ ಲಾಭನಷ್ಟಗಳಲ್ಲಿ ।
ತೃಪ್ತಿಯತೃಪ್ತಿಯಲಿ ಸುಖವು ಮೇಣ್ ದುಃಖದಲಿ ।
ಮತ್ತೆ ಸ್ತುತಿನಿಂದೆಯಲಿ ಗೆಲುವು ಸೋಲುಗಳಲ್ಲಿ ರೋಗವಾರೋಗ್ಯದಲ್ಲಿ ॥
ಅತ್ಯಧಿಕ ದಾರಿದ್ರ ಹೆಚ್ಚೈಶ್ವರ್ಯದಲಿ ।
ಹೆತ್ತಮೇಣ್ ಪೂಜೆಯಲಿ ಮೇಲುಕೀಳುಗಳಲ್ಲಿ ।
ತತ್ತ್ವವೇತ್ತನ ಭಾವ ಸಮತೆಯಲ್ಲಿರುತಿಹುದು ರಾಗದ್ವೇಷಗಳಿಲ್ಲದೇ ॥ ೬೮ ॥

**ಅವತಾರಿಕೆ :—** ಬ್ರಹ್ಮಜ್ಞಾನಿಗೆ ಊಚನೀಚ ಭೋಗಗಳು ತಟಸ್ಥವಾದರೂ ಅವುಗಳನ್ನು ಸಮದೃಷ್ಟಿಯಿಂದ ನೋಡುತ್ತಾನೆಂದು ಹೇಳಿದಿರಿ. ಆದರೆ ಪ್ರಾರಾಬ್ಧವಶಾತ್ ಆ ಸಮತಾ ದೃಷ್ಟಿಯು ಹೋಗಿ ವಿಪರೀತಬುದ್ಧಿಯುಂಟಾಗಬಹುದಲ್ಲವೆ? ಎಂಬ ಪ್ರಶ್ನೆಗೆ ಸಾಂಖ್ಯ ಅಮನಸ್ಕಗಳೇ ಕೂಡಿಕೊಂಡು ರಾಜಯೋಗಸ್ಥಿತಿಯಲ್ಲಿರುವುದರಿಂದ ಆತನ ಬುದ್ಧಿಯು ವಿಪರೀತವಾಗಲಾರದೆಂಬ ಉತ್ತರವನ್ನು ಮುಂದಿನ ಶ್ಲೋಕದಲ್ಲಿ ಸೂಚಿಸುತ್ತಾರೆ.

## * ಮಂದಕ್ರಾಂತವೃತ್ತಂ.

ಪಂಚೀಕೃತ್ವಾ ಪೃಥಗಪಿ ಪೃಥಕ್ ಪಂಚಭೂತಾನಿ ತೇಷಾ ।
ಮನ್ಯೋನ್ಯೈಕ್ಯೇ ಸತಿ ಸಮುದಿತೈಃ ಪಂಚ ಪಂಚಾಂಗತತ್ತ್ವೈಃ ॥
ಸಾಂಖ್ಯಶ್ಚರ್ಚಾ ಶಬಲಿತತನು ಸ್ತಾರಕೋ ಭ್ರಾದತೀತ ।
ಸಾಕ್ಷೀತೇಷಾ ಮಹಮತಿ ಮನ ಸ್ತಸ್ಯಲೋಪೋ ಮನಸ್ಕಃ ॥೬೯॥

* ೯ ನೇ ಶ್ಲೋಕದ ಛಂದಸ್ಸನ್ನು ನೋಡಿ.

**ಪದಚ್ಛೇದ :—** ಪಂಚೀಕೃತ್ವಾ, ಪೃಥಕ್, ಅಪಿ, ಪೃಥಕ್, ಪಂಚಭೂತಾನಿ, ತೇಷಾಂ, ಅನ್ಯೊನ್ಯ, ಐಕ್ಯೈಸತಿ, ಸಮುದಿತೈಃ, ಪಂಚಪಂಚ, ಅಂಗ ತತ್ವೈಃ, ಸಾಂಖ್ಯಃ, ಚರ್ಚಾ, ಶಬಲಿತ ತನುಃ ತಾರಕಃ, ಅಭ್ರಾದತೀತಃ, ಸಾಕ್ಷೀ, ತೇಷಾಂ, ಅಹಂ, ಇತಿ, ಮನಃ, ತಸ್ಯಲೋಪಃ, ಅಮನಸ್ಕಃ,

**ಟೀಕೆ :—** ಪಂಚಭೂತಾನಿ = ಆಕಾಶಾದಿ ಪಂಚಭೂತಗಳನ್ನು | ಪೃಥಕ್ = ಒಂದೊಂದರಲ್ಲಿ ಎರಡೆರಡರಂತೆ ಭಾಗಿಸಿ | ಅಪಿ = ಮತ್ತು | ಪೃಥಕ್ = ಅರ್ಧಭಾಗದಲ್ಲಿ ನಾಲ್ಕಾಗಿಭಾಗಿಸಿ | ಪಂಚೀಕೃತ್ವಾ = ಈ ವಿಧವಾಗಿ ಒಂದೊಂದ ರಲ್ಲಿ ಐದೈದು ಭಾಗವೆಸಗುವುದರಿಂದ | ತೇಷಾಂ = ಆ ಭಾಗಗಳಿಗೆ | ಅನ್ಯೊನ್ಯೈಕ್ಯೇ ಸ್ಸತಿ = ಪರಸ್ಪರ ಕೂಡಿಕೊಳ್ಳಲು | ಸಮುದಿತೈಃ = ಉಂಟಾದಂಥ | ಪಂಚಪಂಚ = ಐದು ಐದು ಇಪ್ಪತ್ತೈದು | ಅಂಗತತ್ವೈಃ = ಅವಯವರೂಪ ತತ್ವಗಳಿಂದ | ಚರ್ಚಾ = ವಿಚಾರದಿಂ ಸಿದ್ಧವಾದ | ಶಬಲಿತ = ಸಾಕಾರವಾದ| ತನುಃ = ದೇಹವೇ | ಸಾಂಖ್ಯಃ = ಸಾಂಖ್ಯಯೋಗವು | ತೇಷಾಂ = ಆ ಮೊದಲು ಹೇಳಿದ ತತ್ವಗಳಿಗೆ | ಸಾಕ್ಷೀ = ಸಾಕ್ಷಿಸ್ವರೂಪದಿಂ | ಅಭ್ರಾದತೀತಃ = ಆಕಾಶಾದಿಂ ಮೀರಿದವನೇ | ಅಹಂ = ನಾನು | ಇತಿ = ಈರೀತಿ ನಿಶ್ಚಯಿಸಿದ | ಮನಃ = ಮನಸ್ಸೇ| ತಾರಕಃ = ತಾರಕಯೋಗವು | ತಸ್ಯಲೋಪಃ = ಆ ಮನೋಲಯುವೇ | ಅಮನಸ್ಕಃ = ಅಮನಸ್ಕಯೋಗವು |

**ತಾತ್ಪರ್ಯ ; -** ಆಕಾಶಾದಿ ಪಂಚ ಭೂತಗಳನ್ನು ಒಂದೊಂದರಲ್ಲಿ ಎರಡೆರಡಂತೆ ಭಾಗಮಾಡಿ ಮತ್ತು ಆ ಭಾಗಮಾಡಿದ ಒಂದದಲ್ಲಿ ನಾಲ್ಕರಂತೆ ಭಾಗಮಾಡಲು ಉಳಿದ ಮುಖ್ಯಾಂಶಗಳೈದನ್ನು ಪಂಚೀಕರಣ ಪ್ರಕಾರ ಆ ಭಾಗಗಳೆಲ್ಲವನ್ನು ಕೂಡಿಸಲು ೨೫ ತತ್ವಗಳಿಂದ ಸಾಕಾರವಾಗಿ ತೋರುವುದೇ, ಸಾಂಖ್ಯವು. ಇದರ ವಿಚಾರವೇ ಸಾಂಖ್ಯಯೋಗವು. ಆ ತತ್ವಗಳಿಗೆ ಸಾಕ್ಷಿಯಾಗಿ ಆಕಾಶಾದಿಗಳಿಗೆ ಮೀರಿರುವನು ನಾನೆಂಬ ಮನಸ್ಸಿನ ನಿರ್ಧಾರವೇ ತಾರಕಯೋಗವು. ಅಂತಹ ಮನೋಲಯವೇ ಅಮನಸ್ಕರೂಪವಾದ ರಾಜಯೋಗವು,

**ವಿಶೇಷಾರ್ಥ :-** ಭೂಜಲಾಗ್ನಿ ಮಾರುತಾಂಬರಗಳೆಂಬ ಪಂಚಭೂತಗಳ ಹಂಚಿಕೆಯಿಂದ ಇಪ್ಪತ್ತೈದು ತತ್ವಗಳು ಉಂಟಾಗಿರುವ ವಿಷಯವು ಸಾಂಖ್ಯ ಶಾಸ್ತ್ರ ಪ್ರತಿಪಾದಿತ ಪಂಚೀಕರಣದಿಂದ ತಿಳಿದುಬರುತ್ತದೆ. ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ, ಜ್ಞಾತೃ, ಪ್ರಾಣ, ಅಪಾನ, ಸಮಾನ, ಉದಾನ, ವ್ಯಾನ, ಶ್ರೋತ್ರ, ತ್ವಚ, ನೇತ್ರ, ಜಿಹ್ವೆ, ಘ್ರಾಣ, ಶಬ್ದ, ಸ್ಪರ್ಶ, ರೂಪ, ರಸ, ಗಂಧ, ವಾಕ್ಕು, ಪಾಣಿ, ಪಾದ, ಪಾಯು. ಉಪಸ್ಥ ಇವೇ ಪಂಚೀಕರಣದಿಂದಾದ ೨೫ ತತ್ವಗಳು. ಈ ತತ್ವಗಳಿಂದ ಕೂಡಿರುವುದೇ ಸ್ಥೂಲ ಶರೀರವು. ಇದು

ಸಾಂಖ್ಯದ ಸ್ವರೂಪವು. ಈ ತತ್ವಗಳು ಜಡವಾಗಿಯೂ, ದೃಶ್ಯವಾಗಿಯೂ, ತೋರುವುದರಿಂದ ಇವುಗಳನ್ನು ನೇತಿಗಳೆಯುವುದು ಸಾಂಖ್ಯಯೋಗದ ಸ್ವರೂಪವು. ಅಂದರೆ ೨೫ ತತ್ವಗಳಿಂದ ಸ್ಥೂಲಶರೀರವಾಗಿರುವುದೆಂದು ವಿಚಾರಪೂರ್ವಕ ತಿಳಿಯುವುದು ಸಾಂಖ್ಯದ ಸ್ವರೂಪವು. ಆ ೨೫ ತತ್ವಗಳು ವಿಚಾರರೂಪಕ ನೇತಿಗಳೆಯುವುದು ಸಾಂಖ್ಯಯೋಗದ ಸ್ವರೂಪವು. ಮೊದಲುಸಾಂಖ್ಯದ ಸ್ವರೂಪವು ಗೊತ್ತಾದಮೇಲೆ ಸಾಖ್ಯಯೋಗದ ಸ್ವರೂಪವು ಗೊತ್ತಾಗುತ್ತದೆ. ತತ್ವಗಳ ಉತ್ಪತ್ತಿಯನ್ನು ತಿಳಿಯುವುದು ಸಾಂಖ್ಯವಿಚಾರವೆನ್ನಲ್ಪಡುತ್ತದೆ. ಆ ತತ್ವಗಳನ್ನು ನೇತಿಗಳೆಯುವುದು ಸಾಂಖ್ಯಯೋಗವಿಚಾರವೆನ್ನಲ್ಪಡುತ್ತದೆ. ನಾನು ಆ ಜಡದೃಶ್ಯಮಾನವಾಗಿ ತೋರುವ ತತ್ವಗಳನ್ನು ಪ್ರಕಾಶಮಾಡುತ್ತಾ ಆಕಾಶಾದಿ ಪಂಚಭೂತಗಳಿಗತೀತನಾಗಿ ಸಾಕ್ಷಿ ಸ್ವರೂಪದಿಂದಿದ್ದೇನೆಂಬ ಮನೋನಿರ್ಧಾರವೇ ತಾರಕಯೋಗವು. ಇಂಥಾ ತಾರಕಯೋಗದಲ್ಲಿ ಕರಿಗೊಂಡ ಮನಸ್ಸಿನ ಲಯವೇ ಅಮನಸ್ಕವು. ಈ ರೀತಿಯಾದ ಸಾಂಖ್ಯ ತಾರಕ ಅಮನಸ್ಕಗಳಿಂದ ಕೂಡಿದ್ದೇ ರಾಜಯೋಗವು. ಇಂತಹ ರಾಜಯೋಗದಿಂದ ಕೂಡಿದಾತನೇ ರಾಜಯೋಗಿಯು. ಇಂತಹ ರಾಜಯೋಗಿಯಾದ ಬ್ರಹ್ಮವೇತ್ತನ ಬುದ್ಧಿಯು ಸುಖದುಃಖಾದಿ ದ್ವಂದ್ವ ಭೋಗಗಳಲ್ಲಿ ಸಮನ್ವಿತವಾಗಿರುತ್ತದೆ. ಪ್ರಾರಾಬ್ಧ ಕರ್ಮ ವೈಚಿತ್ರದಿಂದ ಭೋಗಗಳು ವಿಪರೀತವಿದ್ದರೂ, ಆತನ ಬುದ್ಧಿಯು ವಿಪರೀತವಾಗುವುದಿಲ್ಲ ಅಂದರೆ ಕ್ರೋಧದಿಂದ ಗುದ್ದಾಡಲಿ, ಬಾಧೆಯಿಂದ ಒದ್ದಾಡಲಿ, ಮೋದದಿಂದ ಮುದ್ದಾಡಲಿ, ಇವೆಲ್ಲವೂ ಕರಣಗಳ ಧರ್ಮವಲ್ಲದೆ ಆತ್ಮನಾದ ನನ್ನ ಸ್ವರೂಪಧರ್ಮವಲ್ಲವೆಂದು ತನ್ನ ಬುದ್ಧಿಯಲ್ಲಿ ನಿಜವಾಗಿಯೂ ನಿರ್ಧರಿಸಿರುತ್ತಾನೆ. ಆದ್ದರಿಂದ ಆತನಲ್ಲಿ ವಿಪರೀತವಾದ ಬುದ್ಧಿಯು ತಲೆದೋರುವುದಿಲ್ಲ ಶ್ರೀಕೃಷ್ಣನು ಗೀತೆಯಲ್ಲಿ " **ಯಂಹಿನವ್ಯಥಯಂತ್ಯೇತೇ ಪುರುಷಂ ಪುರುಷರ್ಷಭ । ಸಮದುಃಖಂ ಸುಖಂ ಧೀರಂ ಸೋಽಮೃತತ್ವಾಯ ಕಲ್ಪತೇ ॥ ಅ ೨ ಶ್ಲೋ ೧೫.** " ಎಲೈ ಅರ್ಜುನನೇ! ಅನಿತ್ಯಗಳಾದ ಸುಖ ದುಃಖಗಳಲ್ಲಿ ಸಮತ್ವ ಬುದ್ಧಿಯಿಂದ ಪ್ರವರ್ತಿಸಿ, ಅವುಗಳಿಂದಲಿಪ್ತನಾದ ಧೀರನಿಗೆ ಪರಮ ಪುರುಷಾರ್ಥವಾದ ಮೋಕ್ಷವು ಸಿದ್ಧಿಸುತ್ತದೆ. " ಎಂದು ಹೇಳಿರುತ್ತಾನೆ. ಆದ್ದರಿಂದ ಪ್ರಾರಾಬ್ಧಕರ್ಮ ವೈಚಿತ್ರದಿಂದ ಸುಖದುಃಖಾದಿ ದ್ವಂದ್ವಗಳು ತಟಸ್ಥವಾದರೂ ಬ್ರಹ್ಮವೇತ್ತನ ಬುದ್ಧಿಯು ಭ್ರಮಿಸುವುದಿಲ್ಲ ಎಂಬ ಭಾವವು.

## ವಾರ್ಧಿಕಷಟ್ಪದಿ

ಐದು ಭೂತಂಗಳೊಳ ಗೊಂದರೊಳ ಗೆರಡಾಗಿ ।
ಭೇದಿಸುತ ಮತ್ತದರೊ ಳೊಂದರೊಳು ನಾಲ್ಕಾಗಿ ।
ಭೇದಿಸುತ್ತವುಗಳಿಂ ಮಿಳಿತವಾಗುತ ಪಂಚವಿಂಶತತ್ವದಿ ಹುಟ್ಟಿದ ॥

ಈದೇಹದಾಕಾರದವಯವಂಗಳು ನೇತಿ।
ಗೈದೊಡದು ಸಾಂಖ್ಯಾಂಖ್ಯ ಯೋಗವಿದಕಂ ಸಾಕ್ಷಿ।
ಯಾದಪೆನು ನಾನೆಂಬ ಮನವೆ ತಾರಕಯೋಗವದುಲಯಿಸಲಮನಸ್ಕವು ॥ ೮೯ ॥

**ಅವತಾರಿಕೆ :—** ಪ್ರಾರಬ್ಧ ಕರ್ಮಾನುಸಾರದಿಂದೊದಗುಪ ಸುಖದುಃಖಾದಿಗಳಲ್ಲಿ ರಾಜಯೋಗಿಯಾದ ಬ್ರಹ್ಮವೇತ್ತ್ರನ ಬುದ್ಧಿಯು ವ್ಯತ್ಯಾಸವಾಗದೆ ಸಮತ್ವದಿಂದಿರುತ್ತದೆಂದು ಹೇಳಿದಿರಿ, ಆದರೆ ಎಷ್ಟು ಸಮತ್ವದಿಂದಿದ್ದರೂ, ಒಂದು ವೇಳೆಯಲ್ಲದೆ ಮತ್ತೊಂದುವೇಳೆಯಲ್ಲಾದರೂ, ಬುದ್ಧಿಯು ಮಲಿನತ್ವದೊಡನೆ ಭ್ರಮಿಸಬಹುದು. ಆದ್ದರಿಂದ ಆ ಬುದ್ಧಿಯು ( ಮನಸ್ಸು ) ಭ್ರಮೆಗೊಳ್ಳದಂತೆ ಯೋಗವನ್ನು ಮಾಡುವುದು ಯುಕ್ತವಲ್ಲವೇ ? ಅಂದರೆ ಮನೋನಿರ್ಮಲತೆಯು (ನಿಶ್ಚಲತೆಯು) ದೆಶೆಯಿಂದ ಬ್ರಹ್ಮಜ್ಞಾನಿಯಾದರೂ ಯೋಗವನ್ನು ಆಚರಿಸುವುದು ಯೋಗ್ಯವಲ್ಲವೇ ? ಎಂಬ ಪ್ರಶ್ನೆಗೆ ಕಲ್ಪಿತ ಮನೋಧರ್ಮಗಳಿಗೆ ತಾನು ಸಂಬಂಧಪಡದವನೆಂಬ ತಿಳುವಳಿಕೆಯುಳ್ಳವನು ಪುನಃ ಮನೋನೈರ್ಮಲ್ಯಕ್ಕಾಗಿ ಯತ್ನಿಸುವುದಾದರೆಅವನನ್ನು ಮೂಢನೆನ್ನಬೇಕೆಂಬ ಉತ್ತರವನ್ನು ಮುಂದಿನ ಶ್ಲೋಕದಲ್ಲಿ ಸೂಚಿಸುತ್ತಾರೆ.

## * ಶಾರ್ದೂಲ ವಿಕ್ರೀಡಿತಾ ವೃತ್ತ.

ದುಃಖಂ ಜನ್ಮನಿತತ್ಕ್ರಿಯಾಸ್ವಚಿದಿತಾ ಸ್ಸಾಮಾನಸೇ ತಜ್ಜನಿ ।
ರ್ಭೂತೇತತ್ಪ್ರಕೃತೌ ಮಯಿಸ್ಫುರತಿಸಾ ಶುಕ್ತೌಮೃಷಾ ರೌಪ್ಯವತ್ ।
ತಸ್ಮಾನ್ಮೇಮನಸಾನತೇನ ಕಲತೇತ್ಯಾಮ್ನಾಯ ಶೃಂಗೈರ್ಮನಾ ।
ಗ್ಭೂಯಸ್ತಸ್ಯ ಗುಣಾರ್ಪಕೋ ನಿಜಮಲಸ್ಯಾಮೋದ ಕಾಂಕ್ಷೀಭವೇತ್॥೯೦

**ಪದಚ್ಛೇದ :—** ದುಃಖಂ, ಜನ್ಮನಿ ತತ್ ಕ್ರಿಯಾಸು, ಅಚಿದಿ, ತಾಃ, ಸಾ, ಮಾನಸೇ, ತತ್, ಜನಿಃ, ಭೂತೇ, ತತ್, ಪ್ರಕೃತೌ, ಮಯಿಾ, ಸ್ಫುರತಿ ಸಾ, ಶುಕ್ತೌ, ಮೃಷಾ, ರೌಪ್ಯವತ್, ತಸ್ಮಾತ್, ಮೇ, ಮನಸಾ, ತೇನ, ಕಲ್ಪನಾ, ಇತಿ, ಆಮ್ನಾಯಶೃಂಗೈಃ, ಮನಾಗ್ಭೂಯಃ, ತಸ್ಯ ಗುಣಾರ್ಪಕಃ, ನಿಜ ಮಲಸ್ಯ, ಆಮೋದಕಾಂಕ್ಷೀ, ಭವೇತ್

**ಟೀಕೆ :—** ದುಃಖ = ಖೇದವು । ಜನ್ಮನಿ = ಜನ್ಮದಲ್ಲಿ । ತತ್ = ಆ ಜನ್ಮವು । ಕ್ರಿಯಾಸು = ಕರ್ಮಗಳಲ್ಲಿ । ತಾಃ = ಆ ಕರ್ಮಗಳು । ಅಚಿದಿ

* ೧೧ ನೇ ಶ್ಲೋಕದ ಧ್ರುವಪ್ಪನ್ನು ನೋಡಿ,

= ಪ್ರಾಣದಲ್ಲಿ । ಸಾ = ಆ ಪ್ರಾಣವು । ಮಾನಸೇ = ಮನಸ್ಸಿನಲ್ಲಿ । ತತ್= ಆ ಮನಸ್ಸಿನ । ಜನಿಃ = ಜನನವು । ಭೂತೇ = ಭೂತದಲ್ಲಿ । ತತ್ = ಆ ಭೂತವು । ಪ್ರಕೃತೌ = ಪ್ರಕೃತಿಯಲ್ಲಿ । ಸಾ = ಆ ಪ್ರಕೃತಿಯು । ಶುಕ್ತೌ= ಶುಕ್ತಿಯಲ್ಲಿ । ವೃಷಾ = ಮಿಥ್ಯೆಯಾದ । ರೌಪ್ಯವತ್ = ರಜತಪ್ರತೀತಿಯಂತೆ । ಮಯಿ = ನನ್ನಲ್ಲಿ । ಸ್ಫುರತಿ = ತೋರಿಕೊಳ್ಳುತ್ತದೆ । ತಸ್ಮಾತ್ = ಆ ಕಾರಣದಿಂದ । ಆಮ್ನಾಯಶ್ರುಂಗೈಃ = ವೇದಶಿರವಾದ ಶ್ರುತಿಗಳಿಂದ ವಿಚಾರಿಸಲಾಗಿ । ತೇನ = ಆಯಾಯ । ಮನಸಾ = ಮನಸ್ಸಿನಿಂದ । (ಉತ್ಪನ್ನವಾದ) ಕಲನಾ = ಕಲ್ಪನೆಯು । ಮೇ = ನನಗೆ । ನ = ಇಲ್ಲ । ಇತಿ = ಈ ವಿಧವಾಗಿ ತಿಳಿದು । ತಸ್ಯ = ಆ ಮನಸ್ಸಿಗೆ । ಮನಾಗ್ಭೂಯಃ = ಕಡಿಮೆಹೆಚ್ಚು । ಗುಣಾರ್ಪಕಃ = ಗುಣಗಳನ್ನರ್ಪಿಸುವವನು । ನಿಜಮಲಸ್ಯ = ಬಿಟ್ಟಮಲಕ್ಕೆ । ಆಮೋದಕಾಂಕ್ಷೀ = ಸುಗಂಧವನ್ನಿಚ್ಛಿಸುವವನು । ಭವೇತ್ = ಆಗುತ್ತಾನೆ ।

**ತಾತ್ಪರ್ಯ ;—** ದುಃಖವು ಜನ್ಮದಲ್ಲಿ, ಆ ಜನ್ಮವು ಕರ್ಮಗಳಲ್ಲಿ, ಆ ಕರ್ಮಗಳು ಪ್ರಾಣದಲ್ಲಿ, ಆ ಪ್ರಾಣವು ಮನದಲ್ಲಿ, ಆ ಮನೋತ್ಪತ್ತಿಯು ಪಂಚ ಭೂತದಲ್ಲಿ, ಆ ಭೂತಗಳು ಪ್ರಕೃತಿಯಲ್ಲಿ, ಆ ಪ್ರಕೃತಿಯು ಶುಕ್ತಿಯಲ್ಲಿ ಮಿಥ್ಯಾ ಪ್ರತೀತಿಯಾದ ರಜತದಂತೆ ನನ್ನಲ್ಲಿ ಸ್ಫುರಿಸಿರುತ್ತದೆ. ಇವೆಲ್ಲವೂ ಮನಸ್ಸಿನ ಸಂಕಲ್ಪದಲ್ಲಿ ಹುಟ್ಟಿರುತ್ತವೆ. ಶ್ರುತಿಪ್ರಮಾಣದಿಂದ ವಿಚಾರಿಸಲಾಗಿ ಇವೆಲ್ಲವು ನನಗೆ ಸಂಬಂಧವಿಲ್ಲ. ಈ ರೀತಿಯಾಗಿ ತಿಳಿದು ಪುನಃ ನ್ಯೂನ್ಯಾಧಿಕ್ಯ ಗುಣಗಳನ್ನು ಅರ್ಪಿಸಿಕೊಂಡು ಆ ಮನಸ್ಸನ್ನು ಶುದ್ಧಿಗೊಳಿಸುತ್ತೇನೆಂಬುವವನು ಬಿಟ್ಟಮಲವನ್ನು ಶುದ್ಧಿಗೊಳಿಸಿ ಅದನ್ನು ಸುಗಂಧವನ್ನಾಗಿ ಮಾಡುತ್ತೇನೆಂದು ಪ್ರಯತ್ನಿಸುವ ಮೂರ್ಖನಂತಾಗುವನು.

**ವಿಶೇಷಾರ್ಥ :—** ತನುತ್ರಯಗಳಿಗೂ, ಅವಸ್ಥಾತ್ರಯಗಳಿಗೂ, ಗುಣತ್ರಯಗಳಿಗೂ, ಜೀವತ್ರಯಗಳಿಗೂ, ವಿಲಕ್ಷಣವಾದ ಅದ್ವಿತೀಯ ಪರಬ್ರಹ್ಮವೇ, ನನ್ನ ಸ್ವರೂಪವೆಂದು ತತ್ತ್ವಮಸ್ಯಾದಿ ಮಹಾವಾಕ್ಯಗಳಿಂದ ಅರಿತುಕೊಂಡಾತನು ಪುನಃ ಮನೋವಾಸನಾ ನಿಮಿತ್ತವಾಗಿ ಯೋಗರೂಪ ಕರ್ಮದಲ್ಲಾಸಕ್ತನಾದವನನ್ನು ಕುರಿತು ಗ್ರಂಥ ಕರ್ತರು ಹೀಯಾಳಿಸುತ್ತಾರೆ. ಬಿಟ್ಟ ಮಲದ ದುರ್ವಾಸನೆಯನ್ನು ಕಳೆಯುವುದಕ್ಕೆ ಪ್ರಯತ್ನ ಪಡುವ ಮೂರ್ಖನಿಗೆ ಸಮವೆಂದು ಮೂದಲಿಸುತ್ತಾರೆ. ಹೇಗೆಂದರೆ ಬಂಧರೂಪ ದುಃಖವು ಜನ್ಮದಿಂದ ಉಂಟಾಗಿರುತ್ತದೆ. ಆ ಜನ್ಮವು ಕರ್ಮದಿಂದ (ಶುಭಾಶುಭ ಮಿಶ್ರರೂಪ ಕರ್ಮದಿಂದ) ಉಂಟಾಗಿರುತ್ತದೆ. ಕರ್ಮವು ಚಲನಾತ್ಮಕ ಪ್ರಾಣದಿಂದ ಉಂಟಾಗಿರುತ್ತದೆ. ಆ ಪ್ರಾಣವು ಮನಸ್ಸಿನಿಂದ ಜನಿಸಿರುತ್ತದೆ. ಮನಸ್ಸು ಪಂಚಭೂತಗಳಿಂದ ಉಂಟಾಗಿರುತ್ತದೆ.

ಭೂತಗಳು ಮೂಲಪ್ರಕೃತಿಯಿಂದ ಉತ್ಪತ್ತಿಯಾಗಿರುತ್ತವೆ. ಆ ಮೂಲಪ್ರಕೃತಿಯಾದರೋ ತನ್ನ ಸ್ವರೂಪದಲ್ಲಿ ಶುಕ್ತಿರಜತನ್ಯಾಯದಂತೆ ಮಿಥ್ಯಾ ಸ್ವರೂಪವಾಗಿಯೂ ನಿರ್ನಿಮಿತ್ತವಾಗಿಯೂ, ಸ್ಫುರಿಸಿರುತ್ತದೆ. ಅಂದರೆ ದುಃಖವು ಮೊದಲುಗೊಂಡು ಪ್ರಕೃತಿಯ ಪರಿಯಂತರ ಇರತಕ್ಕವುಗಳೆಲ್ಲವೂ, ವಿಚಾರಿಸಿನೋಡಿದರೆ ಮನೋಕಲ್ಪನೆಯಲ್ಲಿ ಭಾಸಮಾನವಾಗಿರುತ್ತವೆ. ಮತ್ತು ಅವು ಮನಸ್ಸಿಗೆ ಸಂಬಂಧಿಸಿರುತ್ತವೆ. ಆ ಮನಸ್ಸುನಾನಲ್ಲ. ನಾನು ಅಸಂಗ ನಿರ್ವಿಕಾರನು ಎಂದು ಶ್ರುತಿವಾಕ್ಯ ಪ್ರಮಾಣದಿಂದಲೂ, ಸ್ವಾನುಭವದಿಂದಲೂ, ವಿಚಾರಿಸಿ ತಿಳಿದುಕೊಂಡನಂತರ ಪುನಃ ಆ ಮನಸ್ಸಿನ ವಾಸನೆಯನ್ನು ನಿವಾರಣೆಮಾಡಬೇಕೆಂದು ಪ್ರಯತ್ನಿಸುವುದಾದರೆ ಅಂಥವನ ತಿಳುವಳಿಕೆಯು ಬಿಟ್ಟ ಮಲವನ್ನು ತೊಳೆದು ಶುದ್ಧಪಡಿಸಿ ಅದನ್ನು ಸುಗಂಧವಾಗುವಂತೆ ಮಾಡುತ್ತೇನೆಂದು ಪ್ರಯತ್ನಿಸುವ ಗಾಂಪನಿಗೆ (ಮೂರ್ಖನಿಗೆ) ಸರಿಯಾಗುತ್ತಾನೆ. ಮನಸ್ಸೇ ನನಗೆ ಸಂಬಂಧವಿಲ್ಲವೆಂದಮೇಲೆ ಮನಸ್ಸಿನ ಚಂಚಲತೆಯು ಮತ್ತು ಮನೋವಿಕಾರಗಳು ತನಗೆ ಸಂಬಂಧವಾಗುವುದುಂಟೇ? ಸಂಬಂಧ ವಿಲ್ಲವೆಂಬ ಭಾವವು.

### ಸೀಸಮಾಲಿಕೆ.

ಜನಿತವಾಯಿತು ದುಃಖ ಜನ್ಮದಿಂದಾಜನ್ಮ।
ಜನಿಸಿಹುದು ಕರ್ಮದಿಂದಾಕರ್ಮವು।
ಜನಿಸಿಹುದು ಪ್ರಾಣದಿಂದಾಪ್ರಾಣ ಮನದಿಂದ।
ಜನಿಸಿರ್ಪುದಾ ಮನವು ಭೂತದಿಂದ।
ಜನಿಸಿತಾಭೂತತಾಂ ಪ್ರಕೃತಿಯಿಂ ಪ್ರಕೃತಿಯದು।
ಜನಿಸಿತೆನ್ನೊಳು ಶುಕ್ತಿ ರಜತದಂತೆ।
ಘನಶ್ರುತಿಯ ವಾಕ್ಯಂಗಳಿಂದ ಪರಿಕಿಸಿ ತಿಳಿಯೆ।
ಮನದ ಕಲ್ಪನೆಯವುಗಳೆಂಬುದಕ್ಕು।
ಮನದ ಕಲ್ಪನೆಯೆಂದು ನಿಶ್ಚಯಿಸಿ ನಿಸ್ಸಂಗ।
ಚಿನುಮಯಾತ್ಮಕನು ನಾನಿರುವೆನೆಂಬ।
ಮನವಿರಲ್ಕಾತ್ಮನಿಗೆ ದುಃಖವೇ ಮೊದಲಾಗಿ।
ಕೊನೆಗುಳ್ಳ ಪ್ರಕೃತಿಗುಣ ವರ್ಜಿಸಲ್ಕೆ।
ಮನವಿತ್ತವನು ಬಿಟ್ಟ ಮಲದಲ್ಲಿ ಸೌಗಂಧ।
ವನು ಬಯಸಿದಂತಾಗುತಿಹುದು ತಿಳಿಯೆ॥ ೯೦ ॥

**ಅವತಾರಿಕೆ:—** ಬ್ರಹ್ಮವೇತ್ತನು ತಾನಾದಮೇಲೆ ಮನೋವಾಸನೆಯನ್ನು ಕಳೆಯುವುದಕ್ಕೆ ಪ್ರಯತ್ನಪಟ್ಟರೆ ಅವನು ಮೂರ್ಖನೆಂದು ತಿಳಿಯಬೇಕು ಎಂಬು

ದಾಗಿ ಹೇಳಿದಿರಿ. ಆದರೆ ಆ ಬ್ರಹ್ಮವೇತ್ತನು ಮನೋವ್ಯೈಲಿಗೆಯನ್ನು ಕಳೆಯದೆ ಹಾಗೇ ಇಟ್ಟುಕೊಂಡಿದ್ದಾದರೆ ಆ ಮನೋವ್ಯೈಲಿಗೆಯಿಂದ ( ಮನಸ್ಸಿನ ವಾಸನೆಯಿಂದ ) ಪುನಃ ಜನ್ಮಾದಿ ಬಂಧವು (ದುಃಖವು) ಸಂಭವಿಸ ಬಹುದು ? ಎಂಬ ಪ್ರಶ್ನೆಗೆ ಶ್ರುತಿಗುರುಪಥ ವಿಹೀನರಾದ ದೇಹಾತ್ಮಮತಿಯುಳ್ಳವರು ಜನನ ಮರಣ ದುಃಖಕ್ಕೆ ಗುರಿಯಾಗುವರಾಗಲಿ ಬ್ರಹ್ಮವೇತ್ತನು ಗುರಿಯಾಗಲಾರನು ಎಂಬ ಉತ್ತರವನ್ನು ಮುಂದಿನ ಶ್ಲೋಕದಲ್ಲಿ ಮಾರಿಯ (ಮೃತ್ಯುವಿನ) ಉಪಮಾನವನ್ನಿತ್ತು ಸೂಚಿಸುತ್ತಾರೆ.

## * ಮಂದಕ್ರಾಂತವೃತ್ತಂ.

ಕ್ರೋಡೀಕೃತ್ಯ ಶ್ರುತಿಗುರುಪಥಾ ದಾತ್ಮತಾದಾತ್ಮ್ಯಸಂಧಾ।
ವಂತರ್ಧಿತ್ಸೂನ್ನರವಪುರವೀ ನ್ಗೃಸ್ಯ ಸಂದೇಹ ದಂತ್ಯೈಃ ।
ಸಂಸಾರಾಸ್ಯಾದಪಿ ನಿಗಳತೀ ಯಾದಯಾದ್ರಾ್ರಜಹಾನಾ ।
ಶಶ್ವದ್ಭೂಯಃ ಪುನರಪಿ ಮನೋವ್ಯಾಜ ಮಾರೀ ಸಮಸ್ತಂ ॥೯೧॥

**ಪದಚ್ಛೇದ ;—** ಕ್ರೋಡೀಕೃತ್ಯ ಶ್ರುತಿಗುರುಪಥಾತ್, ಆತ್ಮತಾದಾತ್ಮ್ಯಸಂಧೌ, ಅಂತರ್ಧಿತ್ಸೂನ್, ನರವಪುರವೀನ್, ಗೃಸ್ಯ, ಸಂದೇಹದಂತ್ಯೈಃ, ಸಂಸಾರಾಸ್ಯಾತ್, ಅಪಿ, ನಿಗಳತಿ, ಯಾ, ದಯಾದ್ರಾ್ರನ್‌ಜಹಾನಾ, ಶಶ್ವದ್ಭೂಯಃ ಪುನರಪಿ, ಮನೋವ್ಯಾಜಮಾರೀ, ಸಮಸ್ತಂ,

**ಟೀಕೆ ;—** ದಯಾದ್ರಾ್ರನ್‌ಜಹಾನ್ = ಕರಣಾದ್ರ್ರಗಳನ್ನುಬಿಟ್ಟ । ಯಾ = ಯಾವ । ಮನೋವ್ಯಾಜಮಾರೀ = ಮನೋನಿಮಿತ್ತಮೃತ್ಯುವು । ಆತ್ಮತಾದಾತ್ಮ್ಯಸಂಧೌ = ಆತ್ಮನ ತಾದಾತ್ಮ್ಯರೂಪಸಂಧಿನಲ್ಲಿ । ಶ್ರುತಿಗುರುಪಥಾತ್ = ಶ್ರುತಿಗುರುಮಾರ್ಗಧಿಂದ । ಅಂತರ್ಧಿತ್ಸೂನ್ = ಮರೆಯಾದ । ನರವಪುರವೀನ್= ಮಾನವ ಕುರಿಗಳನ್ನು । ಕ್ರೋಡೀಕೃತ್ಯಾ = ಒಟ್ಟುಗೂಡಿಸಿಕೊಂಡು । ಸಂದೇಹದಂತ್ಯೈಃ = ಸಂಶಯ ಹಲ್ಲುಗಳಿಂದ । ಗೃಸ್ಯ = ಕಚ್ಚಿ । ಪುನರಪಿ = ಮತ್ತು ಮತ್ತು । ಸಂಸಾರಾಸ್ಯಾತ್ = ಸಂಸೃತಿ ರೂಪಮುಖದಿಂದ । ಸಮಸ್ತಂ = ಆ ನರಗುರಿಗಳೆಲ್ಲವನ್ನು । ಅಪಿ = ಮತ್ತು । ಶಶ್ವದ್ಭೂಯಃ = ಪದೇಪದೆ । ನಿಗಳತಿ = ನುಂಗುತ್ತದೆ ।

**ತಾತ್ಪರ್ಯ ;—** ಕಾರುಣ್ಯಭಾವನೆಯಂ ತೊರೆದು ಯಾವ ಮನೋನಿಮಿತ್ತಿಕ ಮೃತ್ಯುವು ಆತ್ಮನ ತಾದಾತ್ಮ್ಯಾಧ್ಯಾಸರೂಪ ಸಂಧಿನಲ್ಲಿ, ಶ್ರುತಿಗುರು ಪಥ ವಿಹೀನರಾದ ನರಗುರಿಗಳನ್ನು ಕೂಡಿಸಿಕೊಂಡು ಸಂಶಯರೂಪ ಹಲ್ಲಿನಿಂದ

* 37 ನೇ ಶ್ಲೋಕದ ಛಂದಸ್ಸನ್ನು ನೋಡಿರಿ.

ಕಚ್ಚಿ ಜನನ ಮರಣಾತ್ಮಕ ಸಂಸಾರಮುಖದಿಂದ ಪದೇಪದೇ ನುಂಗುತ್ತದೆ.

**ವಿಶೇಷಾರ್ಥ ;—** ಉಪನಿಷದ್ವಾಕ್ಯಗಳನ್ನು ಕೇಳದೆ, ಸದ್ಗುರೂಪದಿಷ್ಟ ಮಾರ್ಗವನ್ನು ಅನುಸರಿಸದೆ ಇರುವ ಅಜ್ಞಜನರು ಪದೇಪದೇ ಮೃತ್ಯುವಿಗೆ ತುತ್ತಾಗುವುದು ನಿಜ. ದಯಾರಸವಿನಿತಾದರೂ ಇಲ್ಲದ ಮೃತ್ಯುವು ಕುರಿಗಳಂತೆ ಇರುವ ಮಾನವರಲ್ಲಿದ್ದ ಮನಸ್ಸನ್ನೇ ನಿಮಿತ್ತಮಾಡಿಕೊಂಡು ಆತ್ಮನ ತಾದಾತ್ಮ್ಯಾಧ್ಯಾಸ ರೂಪ ಬಿಕ್ಕಟ್ಟಾದ ಇಕ್ಕಟ್ಟಿನಲ್ಲಿ ಸಿಕ್ಕಿಸಿ, ಅಂದರೆ ಆತ್ಮನು ನಾನಿದ್ದೇನೆಂಬ ಸರಿಯಾದ ತಿಳುವಳಿಕೆಯನ್ನು ಹೋಗಲಾಡಿಸಿ, ಶರೀರ ಕರಣಾದಿಗಳೇ ನಾನೆಂಬುವ ತಪ್ಪುತಿಳುವಳಿಕೆಯನ್ನುಂಟುಮಾಡಿ, ಆ ತಪ್ಪುತಿಳುವಳಿಕೆಯ ಇಕ್ಕಟ್ಟಿನಲ್ಲಿ ಸಿಕ್ಕಿಸಿಕೊಂಡು ಪ್ರಮಾಣಗತ, ಪ್ರಮೇಯಗತ, ಸಂದೇಹಗಳೆಂಬ ಪಲ್ಗಳಿಂ ಕಚ್ಚಿ ಜಗಿದಾಡಿ, “ **ಪುನರಪಿ ಜನನಂ ಪುನರಪಿ ಮರಣಂ** ” ಎಂಬಂತೆ ಹುಟ್ಟುಸಾವುಗಳೆಂಬ ಮುಖದಲ್ಲಿ ಹಾಕಿಕೊಂಡು ಪದೇಪದೇ ನುಂಗುತ್ತದೆ. ಈ ಮೃತ್ಯುವಿಗೆ ತುತ್ತಾಗುವವರೆಲ್ಲರೂ, ಶ್ರುತಿಗುರುಪಥ ವಿಹೀನರಾದ ಅಜ್ಞಾನಿಗಳು ನರರಾಗಿದ್ದರೂ ತಮ್ಮ ಸ್ವರೂಪವನ್ನು ಅರಿಯದವರಾದಕಾರಣ ಇವರಿಗೆ ಕುರಿಗಳೆನ್ನಬೇಕು. ಮಾರೀಜಾತ್ರೆಯಲ್ಲಿ ಕುರಿಗಳ ಹಾನಿಯಾಗುವಂತೆ ಮೃತ್ಯುವಿನ ಜಾತ್ರೆಯಲ್ಲಿ ನರಕುರಿಗಳು ಹಾನಿಯಾಗುತ್ತವೆ. ಮಾರಿಯು ಜಾತ್ರೆಯನ್ನು ನಿಮಿತ್ತಮಾಡಿಕೊಂಡು ಕುರಿಗಳನ್ನು ನುಂಗುವಂತೆ ಮೃತ್ಯವು ಮನಸ್ಸನ್ನು ನಿಮಿತ್ತಮಾಡಿಕೊಂಡು ಮಾನವರನ್ನು ನುಂಗುತ್ತದೆ. ಆದರೆ ಅನ್ಯೋನ್ಯಾಧ್ಯಾಸರೂಪ ಹೃದಯಗ್ರಂಥಿಗೊಳಪಟ್ಟ ಮನಸ್ಸು ಜನ್ಮಮರಣಾದಿಗಳಿಗೆ ಹೇತುವಾಗಿರುತ್ತದೆ. ಹೃದಯ ಗ್ರಂಥಿಯನ್ನು (ಶರೀರವೇ ನಾನೆಂಬುದನ್ನು ) ನಿರ್ಮೂಲಮಾಡಿದ ಬ್ರಹ್ಮಜ್ಞಾನಿಗಳು ಆ ಮೃತ್ಯುವಿಗೆ ತುತ್ತಾಗುವುದಿಲ್ಲವೆಂಬ ಭಾವವು.

## ವಾರ್ಧಿಕಷಟ್ಪದಿ

ಚಿತ್ತ ನಿಮಿತ್ತವಂ ಗೈಕೊಂಡು ನಿರ್ದಯದಿ ।
ಮೃತ್ಯುದೇವಿಯು ವೇದ ಗುರುಮಾರ್ಗ ದೂರದಿಂ ।
ವರ್ತಿಸುವ ನರಗುರಿಗಳನ್ನಾತ್ಮ ತಾದಾತ್ಮ್ಯ ಸಂಧಿಯೊಳು ಹೊತ್ತಿಹಿಡಿದು ॥
ಮತ್ತೆ ಸಂಶಯವೆಂಬ ಪಲ್ಗಳಿಂ ಜಗಿದಾಡಿ ।
ಸತ್ತು ಹುಟ್ಟುವರೂಪ ಮುಖದಿಂದ ಬಿಡದಂತೆ ।
ತುತ್ತು ಮಾಡುತ ನುಂಗಿ ನೀರ್ಗುಡಿವ ಳೀಲೋಕವರೆಲ್ಲತಿಳಿಯುವಂತೆ ॥
॥ ೯೧ ॥

**ಅವತಾರಿಕೆ ;—** ಅಜ್ಞಾನಿಗಳು ಮನೋಮಾರಿಗೆ ತುತ್ತಾಗುವಂತೆ ಸುಜ್ಞಾನಿಗಳಾಗುವುದಿಲ್ಲವೆಂದು ಹೇಳಿದಿರಿ. ಆದರೆ ಅಜ್ಞಾನಿಗಳಿಗೆ ಮನಸ್ಸು ಇರುವಂತೆ ಸುಜ್ಞಾನಿಗಳಿಗೂ ಮನಸ್ಸುಇರುತ್ತದೆ. ಬಂಧಕ್ಕೂ ಮೋಕ್ಷಕ್ಕೂ ಮನಸ್ಸೇ ಕಾರಣವೆಂಬುದು ಶಾಸ್ತ್ರಸಿದ್ಧಾಂತವು ಮಲಿನವಾದ ಮನಸ್ಸು ಬಂಧಕ್ಕೂ ಶುದ್ಧವಾದ ಮನಸ್ಸು ಮುಕ್ತಿಗೂ ಹೇತುವಾದುದರಿಂದ ಬ್ರಹ್ಮಜ್ಞಾನಿಯುಸಹ ಮನೋ ನೈರ್ಮಲವನ್ನು ಮಾಡಿಕೊಳ್ಳುವುದ ಯೋಗ್ಯವಲ್ಲವೆ? ಎಂಬ ಪ್ರಶ್ನೆಗೆ ಪಕ್ಷಿಯ ಚರಣಧೂಳು ಆಕಾಶಕ್ಕೆ ಅಂಟದಿರುವಂತೆ ಶರೀರತ್ರಯ ಗುಣಧರ್ಮಗಳು (ಆಮನಸ್ಸಿನ ಧರ್ಮಗಳು) ಆತ್ಮನಿಗಂಟಿಕೊಳ್ಳುವುದಿಲ್ಲೆಂಬ ಉತ್ತರವನ್ನು ಮುಂದಿನ ಶ್ಲೋಕದಲ್ಲಿ ಸೂಚಿಸುತ್ತಾರೆ

## * ಶಾರ್ದೂಲ ವಿಕ್ರೀಡಿತಾ ವೃತ್ತ.

**ಸ್ಥೂಲಂಬಾಲ್ಯ ವಯೋಜರಾ ಜನಿಮೃತಿಃ ಕಾಮಸ್ಮಯಾಶಾಭಯಾ ।**
**ಕ್ರೋಧಸ್ಸೂಕ್ಷ್ಮತನುಂ ವಿಭಾತ್ಯಧಿವಸ ಸ್ತದ್ವಾಸನಾಕಾರಣಂ ।**
**ತೇಷಾಂ ನಶ್ವರ ನೈಷಿಕತ್ರಿ ವಪುಷಾಂ ಧರ್ಮೈರ ಮೂರ್ತಾತ್ಮನೋ ।**
**ನಾಕಾಸ್ಯೇವ ಶಕುಂತಪಾಂ ಸುಮರತಾಂ ಸಂಗಂ ಪ್ರಸಂಗಃ ಕುತಃ ॥೯೨॥**

**ಪದಚ್ಛೇದ :—** ಸ್ಥೂಲಂ, ಬಾಲ್ಯಾವಯಃ, ಜರಾ, ಜನಿಮೃತಿಃ, ಕಾಮ ಸ್ಮಯ, ಆಶಾಭಯಾ, ಕ್ರೋಧಾ, ಸೂಕ್ಷ್ಮತನುಂ ವಿಭಾತಿ, ಅಧಿವಸನ್, ತತ್, ವಾಸನಾ, ಕಾರಣಂ, ತೇಷಾಂ, ನಶ್ವರ, ನೈಷಿಕ, ತ್ರಿವಪುಷಾಂ, ಧರ್ಮೈಃ ಅಮೂರ್ತ್ಯಾತ್ಮನಃ, ನಾಕಸ್ಯ, ಇವ ಶಕುಂತ, ಪಾಂಸು, ಮಾರುತಾಂ, ಸಂಗಪ್ರಸಂಗಃ, ಕುತಃ.

**ಟೀಕೆ ;—** ಬಾಲ್ಯಾವಯಃ = ಬಾಲತ್ವವು ಯವ್ವನತ್ವವು । ಜರಾ = ಮುಪ್ಪು ತನವು । ಜನಿಮೃತಿಃ = ಹುಟ್ಟುಸಾವು । ಸ್ಥೂಲಂ = ಸ್ಥೂಲಶರೀರವನ್ನು । ಕಾಮಸ್ಮಯಾಶಾಭಯಾಕ್ರೋಧಃ = ಇಚ್ಛಾ, ಸೋಜಿಗ, ಅಸಂತೋಷ, ಭೀತಿ, ಕೋಪವು । ಸೂಕ್ಷ್ಮತನುಃ = ಲಿಂಗದೇಹವನ್ನು । ತದ್ವಾಸನಾ = ಆ ಸಂಸ್ಕಾರವು । ಕಾರಣಾ = ಕಾರಣಶರೀರವನ್ನು । ಅಧಿವಸನ್ = ಆಶ್ರಯಿಸಿ । ವಿಭಾತಿ = ತೋರುತ್ತದೆ । ತೇಷಾಂ = ಮೊದಲು ಹೇಳಿದ । ನಶ್ವರ = ಕಲ್ಪಿತ । ನೈಷಿಕ = ದೃಶ್ಯತ್ವದಿಂ ಕೂಡಿದ । ತ್ರಿವಪುಷಾಂ = ಸ್ಥೂಲಾದಿಮೂರು ಶರೀರಗಳ ಧರ್ಮೈಃ = ಧರ್ಮಗಳಿಂದ । ಅಮೂರ್ತ್ಯಾತ್ಮನಃ = ಮೂರ್ತವಂತವಲ್ಲದ ಆತ್ಮನಿಗೆ ನಾಕಸ್ಯ = ಗಗನಕ್ಕೆ । ಶಕುಂತಪಾಂಸು ಮಾರುತಾಂ = ಪಕ್ಷಿಧೂಳ

* ೧೧ ನೇ ಶ್ಲೋಕದ ಛಂದಸ್ಸನ್ನು ನೋಡಿ.

ಗಾಳಿಗಳ | ಸಂಗಪ್ರಸಂಗಃ = ಸಂಬಂಧದ ಸುದ್ದಿಯು | ಕುತಃ = ಎಂತೋ | ಇವ = ಅಂತೆ |

**ತಾತ್ಪರ್ಯ :—** ಬಾಲ್ಯ ಯವ್ವನ ಮುಪ್ಪು ಹುಟ್ಟುಸಾವುಗಳು ಸ್ಥೂಲಶರೀರವನ್ನು, ರಾಗದ್ವೇಷ ಭಯಾಶ್ಚರ್ಯ ಸಂತೋಷಗಳು ಸೂಕ್ಷ್ಮಶರೀರವನ್ನು, ಕಾರಣಶರೀರವು ಅವುಗಳ ಸಂಸ್ಕಾರವನ್ನು ಆಶ್ರಯಮಾಡಿಕೊಂಡಿರುತ್ತದೆ. ಈ ಸ್ಥೂಲಾದಿ ತ್ರಿವಿಧ ಶರೀರಗಳ ಧರ್ಮವು ಆಕಾಶಕ್ಕೆ ಪಕ್ಷಿಯು ಧೂಳು ಗಾಳಿಯು ಅಂಟಿಕೊಳ್ಳದಂತೆ ಅಮೂರ್ತ ಸ್ವರೂಪನಾದ ಆತ್ಮನಿಗೆ ಅಂಟಿಕೊಳ್ಳುವುದಿಲ್ಲ.

**ವಿಶೇಷಾರ್ಥ ;—** ಅಜ್ಞಾನಿಯು ಶರೀರಇಂದ್ರಿಯ ಕರಣಾದಿಗಳಲ್ಲಿ ನಾನು ನನ್ನದೆಂಬ ಅಹಂ ಮಮಾಭಿಮಾನರೂಪ ಕೆಟ್ಟವಾಸನೆಯ ಸಂಸ್ಕಾರಕ್ಕೆ ಒಳಗಾಗುವುದರಿಂದ ಜನನ ಮರಣಾದಿ ದುಃಖಗಳಿಗೆ ಭಾಗಿಯಾಗುತ್ತಾನೆ. ಇವನ ಮನಸ್ಸಿನಲ್ಲಿ ಆತ್ಮನಾತ್ಮ ವಿಚಾರಸರಣಿಯಿರುವುದಿಲ್ಲ. ಇವನು ಕ್ರಮವಾಗಿ ಸತ್ಕರ್ಮಗಳಲ್ಲಿ ನಿಷ್ಣಾತನಾಗಿ ಮನೋ ನೈರ್ಮಲ್ಯದ ದೆಶೆಯಿಂದ ಯೋಗವನ್ನಾಚರಿಸಬೇಕು. ಬ್ರಹ್ಮಜ್ಞಾನಿಯಾದರೋ ಆತ್ಮಾನಾತ್ಮ ವಿಚಾರಸರಣಿಯಲ್ಲಿದ್ದ ನಾನು ಅಕರ್ತಾ, ಅಭೋಕ್ತಾ, ನಿತ್ಯಾಸಂಗ ಸ್ವರೂಪಸಿದ್ಧನೆಂಬ ಭಾವನೆಯಲ್ಲಿರುತ್ತಾನೆ ಈತನ ವಿಚಾರಸರಣಿಯು ಎಂಥಾದ್ದೆಂದರೆ ಅಸ್ತಿತೆ, ಜಾಯತೆ, ವರ್ಧತೆ, ಪರಿಣಮತೆ, ಅಪಕ್ಷೀಯತೆ, ವಿನಶ್ಯತೆ, ಎಂಬ ಷಡ್ವಿಕಾರಗಳು ಸ್ಥೂಲಶರೀರವನ್ನು ಆಶ್ರಯ ಮಾಡಿಕೊಂಡಿರುವವಾಗಲಿ, ಆತ್ಮನಾದ ನನ್ನನ್ನು ಆಶ್ರಯಮಾಡಿಕೊಂಡಿರುವವೆಂದು ತಿಳಿದುಕೊಂಡಿರುವುದಿಲ್ಲ. ಮತ್ತು ಸುಖದುಃಖ ಇಚ್ಛಾ, ಯತ್ನ, ಭಯ, ಆಶ್ಚರ್ಯ ಕ್ರೋಧ, ಡಂಬ, ದರ್ಪ; ಈರ್ಷ್ಯ, ಅಸೂಯೆ, ಮುಂತಾದವುಗಳು ಸೂಕ್ಷ್ಮ ಶರೀರವನ್ನು ಹೊಂದಿಕೊಂಡಿರುವವಾಗಲೀ, ಆತ್ಮನಾದ ನನ್ನನ್ನು ಹೊಂದಿಕೊಂಡಿರುವುದಿಲ್ಲವೆಂದು ಅರಿಯುತ್ತಾನೆ. ಸ್ಥೂಲಸೂಕ್ಷ್ಮದೇಹಸಂಬಂಧ ವಾಸನೆಗಳೆಲ್ಲಕ್ಕೂ, (ಸಂಸ್ಕಾರಗಳೆಲ್ಲಕ್ಕೆ ) ಕಾರಣಶರೀರವು ಆಶ್ರಯಕೊಟ್ಟಿರುತ್ತದೆ. ಅಂದರೆ ಶುಭಾಶುಭ ಸಂಸ್ಕಾರಗಳೆಲ್ಲವೂ, ಕಾರಣ ಶರೀರದಲ್ಲಿ ಕೂಡಿಕೊಂಡಿರುತ್ತವೆ. ಈ ತ್ರಿವಿಧ ಶರೀರಗಳ ಗುಣಧರ್ಮಗಳು ನನ್ನಗೆ ಇರುವುದಿಲ್ಲವೆಂದು ಸ್ಪಷ್ಟವಾಗಿ ತಿಳಿಯುತ್ತಾನೆ ಏಕೆಂದರೆ ಆತ್ಮನು ಅಮೂರ್ತಮಂತನು. ಶರೀರವು ಮೂರ್ತಮಂತವು, ಆತ್ಮನು ಗಗನದಂತೆ ವ್ಯಾಪಕನು. ಶರೀರವು ಪರಿಚ್ಛಿನ್ನವು. ಆತ್ಮನು ನಿರ್ಗುಣನು. ಶರೀರವು ಸಗುಣವು, ಆತ್ಮನು ನಿರ್ವಿಕಾರಿಯು. ಶರೀರವು ವಿಕಾರದಿಂದ ಯುಕ್ತವಾದುದು. ಶರೀರವೆಂದರೆ ಮೂರು ಶರೀರವೆಂದು ತಿಳಿಯಬೇಕು. ಧೂಳಿಯನ್ನು ಹೊತ್ತುಕೊಂಡು ಬಿರುಗಾಳಿಯು ಚಲಿಸಿದರೂ ಆಕಾಶಕ್ಕೆ ಆ ಧೂಳಿಯ ಸಂಬಂಧವಿಲ್ಲದಂತೆ ಮತ್ತು ಹಲವು ಪಕ್ಷಿಗಳು ಸಂಚರಿಸಿದರೂ ಅವುಗಳ ಸಂಬಂಧವು. ಗಗನಕ್ಕಿಲ್ಲದಿರುವಂತೆ ಶರೀರಮನಸ್ಸು ಮುಂತಾದವುಗಳ ಸಂಬಂಧವು ಆತ್ಮನಿಗಿ

ರುವುದಿಲ್ಲ. ಆತ್ಮನಾದ ನಾನು ಸದಾ ನಿಸ್ಸಂಗನು ಎಂಬ ವಿಚಾರಸರಣಿಯಲ್ಲಿ ಆತ್ಮವೇತ್ತನಿರುವುದರಿಂದ ಆತನನ್ನು ಜಡವಾದಮನಸ್ಸು ಜನನ ಮರಣಗಳಿಗೆ ಈಡುಮಾಡುವುದಿಲ್ಲ. ಆ ಮನಸ್ಸಿನ ಶುದ್ಧಿಗೋಸ್ಕರವಾಗಿ ಜ್ಞಾನಿಯು ಯಾವ ಪ್ರಯತ್ನವೂ ಪಡುವುದಿಲ್ಲ. ಒಟ್ಟಾರೆ ಆ ಮನಸ್ಸೇ ನಾನಲ್ಲವೆಂದು ಧೃಢವಾಗಿ ತಿಳಿದಿರುತ್ತಾನೆ ಎಂಬ ಭಾವವು.

## ವಾರ್ಧಿಕ ಷಟ್ಪದಿ.

ಬಾಲತ್ವಯವ್ವನಜರಾ ಜನನಮರಣಗಳ್ ।
ಸ್ಥೂಲದೇಹದ ಧರ್ಮ ಕಾಮ ಭಯವ ತೃಪ್ತಿ ।
ಯಾಲೋಚನಾಶ್ಚರ್ಯಗಳ್ ಸೂಕ್ಷ್ಮ ತನು ಧರ್ಮ ವೀಧರ್ಮ ಸಂಸ್ಕಾರಕೆ ॥
ಆಲಯವು ಕಾರಣ ಶರೀರ ವಿವುಗಳ ಧರ್ಮ ।
ನಾಲೋಚಿಸಲ್ಕಾತ್ಮಗಿಲ್ಲ ಪಕ್ಷಿಯಗಾಳಿ ।
ಧೂಳಿಯಾಕಾಶಕಂಟುವುದುಂಟೆ ? ದೃಗ್‌ರೂಪನಾತ್ಮ ತಾಂ ನಿಸ್ಸಂಗನು ॥೯೨॥

**ಅವತಾರಿಕೆ:**—ಶರೀರ ಗುಣಧರ್ಮಗಳನ್ನು ಅಂಟಿಸಿ ಕೊಂಡವನು ಅಜ್ಞಾನಿಯೆಂತಲೂ, ಅಂಟಿಸಿ ಕೊಳ್ಳದವನು ಸುಜ್ಞಾನಿಯೆಂತಲೂ ಹೇಳಿದಿರಿ. ಆದರೆ ಶರೀರದಲ್ಲಿದ್ದು ಸಮಸ್ತ ಕ್ರಿಯೆಗಳನ್ನು ಮಾಡುತ್ತಿದ್ದು ಅವುಗಳ ಧರ್ಮಗಳು ನನಗೆ ಸಂಬಂಧವಿಲ್ಲವೆಂದು ತಿಳಿಯುವುದು ಹೇಗೆ ? ಸಂಬಂಧವಿಲ್ಲದ ಬಳಿಕ ಯಾವ ಕೆಲಸಗಳನ್ನು ಮಾಡಬಾರದು. ಶರೀರ ಕರಣಾದಿಗಳಿಂದ ಕರ್ಮಗಳನ್ನು ಮಾಡುತ್ತ ನಾನು ಅವುಗಳಿಗೆ ಸಂಬಂಧವಿಲ್ಲವೆಂದು ಅರಿಯುವವರು ಯಾರು ? ಎಂಬ ಪ್ರಶ್ನೆಗೆ ಬ್ರಹ್ಮವಿದ್ಯರೀಯನು ದೃಶ್ಯ ಪದಾರ್ಥಗಳಿಗೆ ದೃಗ್‌ರೂಪನಾಗಿಯು ಅಸಂಗನಾಗಿಯೂ ಸರ್ವವ್ಯಾಪಕನಾಗಿಯೂ ನಾನಿರುವೆನೆಂದು ಅರಿಯುತ್ತಾನೆಂಬ ಉತ್ತರವನ್ನು ಮುಂದಿನ ಶ್ಲೋಕದಲ್ಲಿ ಸೂಚಿಸುತ್ತಾರೆ.

## * ಅಂರ್ಪಾ ವೃತ್ತಂ.

ವಪುಷಾ[1] ಪ್ರಯುತೇ ಷ್ವಹಂ ಯಥಾಸ್ಮಿನ್ ।
ವಪುಷಿ ವ್ಯಾಪ್ತತಯಾ ವೃಣೋಮಿ ಖಂವತ್ ॥
ನತಪಸ್ಯ ಭಜೇಕ್ರಿಯಾಮಿ ವೈಷಾಮಿ ।
ತಿಯೋವೇದ ಸಚಾತ್ಮವಿಷ್ವರೀಯಾನ್ ॥ ॥ ೯೩ ॥

**ಪದಚ್ಛೇದ:**—ವಪುಷಾಪ್ರಯುತೇಷು. ಅಹಂ, ಯಥಾ, ಅಸ್ಮಿನ್. ವಪುಷಿ,

1 ನೇ ಶ್ಲೋಕದ ಛಂದಸ್ಸನ್ನು ನೋಡಿರಿ.

ವ್ಯಾಪ್ತತೆಯೂ, ವೃಣೋಮಿ, ಖಂವತ್, ತತ್, ಅಸ್ಯ, ನಭಜೇ, ಕ್ರಿಯಾಂ, ಇವ, ಏಷಾಂ, ಇತಿ, ಯಃ, ವೇದ, ಸಃ, ಆತ್ಮವಿದ್ವರೀಯಸ್.

**ಟೀಕೆ:**—ಯಥಾ = ಹೇಗೆ। ಅಸ್ಮಿನ್ = ಈ। ವಪುಷಿ = ಶರೀರದಲ್ಲಿ। ವ್ಯಾಪ್ತತಯಾ = ವ್ಯಾಪಕರೂಪದಿಂದ। ವೃಣೋಮಿ = ತುಂಬಿರುವೆನೋ। ತಥಾ = ಹಾಗೆ। ವಪುಷಾಯುತೇಷು = ಶರೀರಸಹಿತ ಜೀವಿಗಳಲ್ಲಿ। ಅಹಂ = ನಾನು। ಖಂವತ್ = ಆಕಾಶದಂತೆ ತುಂಬಿರುವೆನು। ಏಷಾಂ = ಈ ದೃಶ್ಯವಾದಶರೀರಗಳಲ್ಲಿ। ತತ್ = ಆ ಶರೀರಸಂಬಂಧವಾದ। ಕ್ರಿಯಾಂ = ವ್ಯಾಪಾರವನ್ನು। ನಭಜೇ = ಹೊಂದಿಕೊಳ್ಳುವುದಿಲ್ಲ। ಇವ = ಇದರಂತೆ। ಅಸ್ಯ = ಈ ದೃಶ್ಯವಾದ ಸ್ವದೇಹವ್ಯಾಪಾರವನ್ನು ಹೊಂದುವುದಿಲ್ಲ। ಇತಿ = ಈ ರೀತಿಯಾಗಿ। ಯಃ = ಯಾವನು। ವೇದ = ಅರಿಯುವನೋ। ಸಃ = ಅವನು। ಆತ್ಮವಿದ್ವರೀಯಾನ್ = ಬ್ರಹ್ಮಜ್ಞಾನನಿಷ್ಠರಲ್ಲಿ ಶ್ರೇಷ್ಠನು।

**ತಾತ್ಪರ್ಯ:**—ನಾನು ಈ ಶರೀರದಲ್ಲಿ ವ್ಯಾಪಕನಾಗಿರುವಂತೆ ಸರ್ವ ಶರೀರಗಳಲ್ಲಿಯೂ ಆತ್ಮನಾಗಿ ಗಗನದಂತೆ ವ್ಯಾಪಕ ರೂಪನಾಗಿರುವೆನು. ಪರ ಶರೀರ ವ್ಯಾಪಾರಗಳಿಗೆ ನಾನು ಹೇಗೆ ದೃಗ್ ರೂಪನೋ ಹಾಗೆ ನನ್ನಶರೀರದ ವ್ಯಾಪಾರಗಳಿಗೂ ದೃಗ್‌ರೂಪನಿರುವೆನು. ಎಂದು ಯಾವಾತನು ತಿಳಿಯುತ್ತಾನೋ ಆತನು ಆತ್ಮವಿದ್ವರೀಯನು.

**ವಿಶೇಷಾರ್ಥ:**—ಅಜ್ಞನು ತಾನಲ್ಲದ ತನುಕರಣ ಗುಣ ಧರ್ಮಗಳನ್ನು, ತಾನೆಂದು ಬಗೆದು ಅವುಗಳ ಹಾನಿವೃದ್ಧಿಗಳು ತನಗಾದವೆಂದು ಭಾವಿಸಿ ಭವ ಮರಣ ದುಃಖಕ್ಕೆ ಭಾಗಿಯಾಗುತ್ತಾನೆ. ಈ ರೀತಿಯಾದ ಭಾವನೆಯು ಸುಜ್ಞಾನಿಯಲ್ಲಿ ಇರುವುದಿಲ್ಲ. ಸುಜ್ಞಾನಿಯ ಹೃದಯವು ವಿಶಾಲವಾದುದು ಆತನ ಹೃದಯದಲ್ಲಿ ತನುಕರಣ ಗುಣ ಧರ್ಮಗಳು ತುಪ್ಪದಜಿಡ್ಡು ನಾಲಿಗೆಗೆ ಅಂಟಿಕೊಳ್ಳದಂತೆ ಅಂಟಿಕೊಳ್ಳುವುದಿಲ್ಲ "ಅಹಮಾಕಾಶವತ್ ಸರ್ವ ಬಹಿರಂತರ್ಗ ತೋಽಚ್ಯುತಃ। ನಿಶ್ಚಲೋ ನಿರ್ಮಲೋದೇಹಿ, ಸರ್ವಂ ವ್ಯಾಪಿ ನಿರಂಜನಃ॥" "ನಾನು ಆಕಾಶದಂತೆ ಸರ್ವ ಶರೀರಗಳ ಬಹಿರಂತರಗಳಲ್ಲಿವ್ಯಾಪಕನಾಗಿದ್ದು ನಿಶ್ಚಲನಾಗಿಯೂ,ನಿರ್ಮಲನಾಗಿಯೂ, ನಿರಂಜನ ಸ್ವರೂಪನಾಗಿಯೂ, ಇದ್ದೇನೆ" ಎಂಬ ಶ್ರುತಿವಚನದಂತೆ ಸುಜ್ಞಾನಿಯು ಭಾವಿಸುತ್ತಾನೆ. ತನ್ನ ಶರೀರದಲ್ಲಿ ತಾನು ನಖಶಿಖ ಪರಿಯಂತರ ತುಂಬಿಕೊಂಡಿರುವಂತೆ ದೃಕ್ ಪಥಕ್ಕೆ ಗೋಚರಿಸುವ ಸರ್ವ ಶರೀರಗಳಲ್ಲಿಯೂ ನಾನು ಆತ್ಮರೂಪದಿಂದ ವ್ಯಾಪಕನಾಗಿರುತ್ತೇನೆ. ಮತ್ತು ಆ ಶರೀರ ವ್ಯಾಪಾರಗಳಿಗೆ ಸಾಕ್ಷಿಯಾಗಿರುತ್ತೇನೆ. ಹೇಗೋ ಹಾಗೆಯೇ ನನ್ನ ಶರೀರದ ವ್ಯಾಪಾರಗಳಿಗೆ ನಾನು ಸಾಕ್ಷಿಯಾಗಿಯೇ ಇದ್ದೇನೆ. ಮನೆಯಲ್ಲಿದ್ದು ಆ ಮನೆಯ ಗುಣಧರ್ಮಗಳಿಗೆ ನಾನು ಬೇರೆಯಿರುವ

ನೆಂದು ತಿಳಿಯುವಂತೆ ಜ್ಞಾನಿಯು ಶರೀರದಲ್ಲಿದ್ದು ಆ ಶರೀರದ ಗುಣಧರ್ಮಗಳು ತನಗಿಲ್ಲವೆಂದು ತಿಳಿಯುತ್ತಾನೆ. ಹಾಗೆ ತಿಳಿಯುವುದಕ್ಕೆ ಕಾರಣವೇನೆಂದರೆ ತನು ಕರಣಾದಿಗಳೆಲ್ಲಾವೂ ಘಟದಂತೆ ಜಡವಾಗಿಯೂ ದೃಶ್ಯವಾಗಿಯೂ, ಇರುತ್ತವೆ. ತಾನು ಅವುಗಳನ್ನು ಇದಿರಿಟ್ಟು ಅರಿಯುವುದರಿಂದ ದೃಗ್‌ರೂಪನಾಗಿರುತ್ತಾ. "ಘಟದೃಷ್ಟಾಧ್ಘಟಾದ್ಭಿನ್ನ ಸರ್ವತೋನ ಘಟೋಯಥಾ ॥ ದೇಹಾದ್ರಷ್ಟಾ ತಥಾ ದೇಹ ನಾಹ ಮಿತ್ತ್ರೀವಧಾರಯೇತ್" "ಕೊಡವನ್ನು ನೋಡುವವನು ಕೊಡವು ತಾನಲ್ಲದಂತೆ ದೇಹವನ್ನು ನೋಡುವ ನಾನು ದೇಹವಲ್ಲ" ನಾನು ಕೇವಲ ಸಾಕ್ಷಿಸ್ವರೂಪನು ಇದ್ದೇನೆ ಇಂತಹ ಭಾವನೆಯು ಸುಜ್ಞಾನಿಯ ಹೃದಯದಲ್ಲಿ ನೆಲೆಗೊಂಡಿರುತ್ತದೆ. ಈತನನ್ನು ಬ್ರಹ್ಮ ವಿದ್ವರೀಯನೆನ್ನಬೇಕು ಎಂಬಭಾವವು.

### ವಾರ್ಧಿಕ ಷಟ್ಪದಿ.

ನಾನೀ ಶರೀರದಲ್ಲಿಂತು ವ್ಯಾಪಕನಿಹೆನೊ ।
ಕಾಣುತಿಹ ಸರ್ವ ದೇಹಗಳಲ್ಲಿ ಗಗನದೊಲ್ ।
ನಾನಿರ್ಪೆ ವಿಭುವಾಗಿ ಪರದೇಹ ವ್ಯಾಪಾರಗಳಿಗೆಲ್ಲ ದೃಗ್ ರೂಪನು ॥
ನಾನಪ್ಪೆನೆಂತಂತೆ ನನ್ನ ತನುವ್ಯಾಪಾರ ।
ಕಾನು ದೃಗ್ ರೂಪನಾಗಿತಿರ್ಪೆ ನವು ದೃಶ್ಯ
ಮಾನವೆನಗೆಂದರಿವ ನಾವ ನಿಹನವನಾತ್ಮ ವಿದ್ವರೀಯನು ನೈಜವು॥ ೯೩ ॥

**ಅವತಾರಿಕೆ :–** ಪರಶರೀರಗಳ ಧರ್ಮಗಳಂತೆ ಸ್ವ ಶರೀರ ಧರ್ಮವು ತನಗಿಲ್ಲವೆಂದು ತಿಳಿದಾತನು ಬ್ರಹ್ಮವಿದ್ವರೀಯನೆಂದು ಹೇಳಿದಿರಿ ಆದರೆ ಸೂರ್ಯೋದಯವಾದಾಗ ಸರ್ವಾಂಧಕಾರವು ನಿವೃತ್ತಿಯಾಗುವಂತೆ ಬ್ರಹ್ಮಜ್ಞಾನೋದಯವಾದಾಗ ಜ್ಞಾನಿಗೆ ಶರೀರ ಧರ್ಮಗಳು ನಿವೃತ್ತಿಯಾಗಬೇಕು ಶರೀರ ಗುಣಧರ್ಮಗಳಿದ್ದು ಬ್ರಹ್ಮಜ್ಞಾನವಾಗಿರುವುದೆಂದರೆ ಒಪ್ಪುವ ಮಾತೇ ? ಎಂಬ ಪ್ರಶ್ನೆಗೆ ತನುಧರ್ಮವು ಅಜ್ಞಾನಿಗಿದ್ದಂತೆ ತಜ್ಞನಿಗೂಇರುತ್ತದೆ... ಇದ್ದರೂ ಬಾಧಕವಿಲ್ಲ ಎಂಬ ಉತ್ತರವನ್ನು ಮುಂದಿನ ಶ್ಲೋಕದಲ್ಲಿ ಸೂಚಿಸುತ್ತಾರೆ.

### * ವಸಂತತಿಲಕಾವೃತ್ತ

**ಶಾರೀರ ಧರ್ಮ ಸದೃಶಃವಪಿ ಬದ್ಧ ಮುಕ್ತೌ ।**
**ದೋಷೋನ ಹೇತು ರನಯೋಃ ಕಿಲವಾಸನೈವ ॥**

* ೧೨ ನೇ ಶ್ಲೋಕದ ಛಂದಸ್ಸನ್ನು ನೋಡಿ.

ಧ್ಯೇಯೌ ದ್ವಿಜನ್ಮವೃಷಲಾಹ  ಕಿಂಚಿ ತೇಷಾಂ ।
ಕ್ಷಾಮೋ ಭವೇದ್ಯದಿ ರವಿಶ್ಶಿಶಿರೇತಪೇಚ ॥ ೯೪ ॥

**ಪದಚ್ಛೇದ ;—** ಶಾರೀರಧರ್ಮ, ಸದೃಶಾವಪಿ, ಬದ್ಧಮುಕ್ತೌ, ದೋಷಃ, ನ, ಹೇತುಃ, ಅನಯೋಃ, ಕಿಲ, ವಾಸನೈವ, ಧೇಯೌ, ದ್ವಿಜನ್ಮ ವೃಷಲೌ, ಇಹ, ಕಿಂ, ಚ, ತೇಷಾಂ, ಕ್ಷಾಮಃ, ಭವೈದ್ಯದಿ, ರವಿಃ, ಶಿಶಿರೇ, ಆತಪೇ, ಚ,

**ಟೀಕೆ ;—** ಬದ್ಧಮುಕ್ತೌ = ಬದ್ಧರು ಮುಕ್ತರು । ಶಾರೀರಧರ್ಮ = ದೇಹ ಸಂಬಂದವಾದ ಧರ್ಮಗಳಿಂದ । ಸದೃಶಾವಪಿ = ಸಮಾನವಾಗಿದ್ದರೂ । ದೋಷಃನ = ಬಾಕಥವಿಲ್ಲ । ಅನಯೋಃ = ಈ ಬದ್ಧಮುಕ್ತರಿಗೆ । ವಾಸನೈವ = ವಾಸನೆಯೇ । ಹೇತುಃ = ಕಾರಣ । ಕಿಲ = ನಿಜವು । ಇಹ = ಇದಕ್ಕೆ । ಕಿಂ = ಉಪಮಾನವೇನಂದರೆ । ದ್ವಿಜನ್ಮ ವೃಷಲೌ = ವಿಪ್ರರು ಶೂದ್ರರು । ( ದೇಹ ಧರ್ಮದಿಂ ಸಮವಿದ್ದರೂ ) ಧೇಯೌ = ವೇದಾಧ್ಯಯನ ಸಹಿತತ್ವ ರಹಿತತ್ವದಿಂದ ಅನುಚಿಂತನೀಯರಾಗಿರುತ್ತಾರೆ । ಚ = ಮತ್ತು । ರವಿಃ = ಸೂರ್ಯನು । ಶಿಶಿರೇ = ಶಿಶಿರ ಋತುವಿನಲ್ಲಿ । ಚ = ಮತ್ತು । ಆತಪೇ = ವಸಂತಋತುವಿನಲ್ಲಿ ! ಕ್ಷಾಮಂ = ಅಭಾವನು । ಭವೇದ್ಯಾದಿ = ಅಪ್ಪುದಾದರೆ ! ತೇಷಾಂ = ಆ ಬದ್ಧಮುಕ್ತರು ತನು ಧರ್ಮದಿಂದ ಅಭಾವವಾಗಬಹುದು ।

**ತಾತ್ಪರ್ಯ;—** ಆಹಾರ ವಿಹಾರಗಳಲ್ಲಿ ಬದ್ಧರೂ ಮುಕ್ತರೂ ಸಮಾನವಾಗಿರುತ್ತಾರೆ. ಆದರೆ ಅವರಲ್ಲಿ ಸಂಸ್ಕಾರ ರೂಪ ವಾಸನೆಯು ಭೇದವಾಗಿರುತ್ತದೆ. ವೇದಾಧ್ಯಯನ ಮಾಡಿದ ವಿಪ್ರನಲ್ಲಿಯೂ, ವೇದಾಧ್ಯಯನ ವಿಲ್ಲದ ಶೂದ್ರನಲ್ಲಿಯೂ ದೇಹಧರ್ಮಗಳು ಸಮಾನವಿದ್ದರೂ ವಾಸನೆಯಲ್ಲಿ ಭೇದವಿರುತ್ತದೆ. ಸೂರ್ಯನ ಪ್ರಕಾಶದಲ್ಲಿ ಸಮಾನತ್ವ ವಿದ್ದರೂ ವಸಂತ ಶಿಶಿರ ಋತುಗಳಲ್ಲಿ ಭೇದ ವಿರುತ್ತದ. ಎಂಬ ಉಪಮಾನದಿಂದ ತಿಳಿಯಬೇಕು.

**ವಿಶೇಷಾರ್ಥ ;—** ಬ್ರಹ್ಮಜ್ಞಾನವಾದ ಮೇಲೆ ಶರೀರ ಧರ್ಮಗಳು ತೋರಬಾರದೆಂದು ಅವತಾರಿಕೆಯಲ್ಲಿ ಮಾಡಿದ ಪ್ರಶ್ನೆಯುಸರಿಯಾದುದಲ್ಲ ಏಕೆಂದರೆ ಶರೀರ ವಿರುವುದರಿಂದ ಆ ಶರೀರ ಧರ್ಮಗಳು ಎಂಥವರಿಗೂ ಬಿಡಲಾರವು ಶರೀರ ವ್ಯವಹಾರ ದೃಷ್ಟಿಯಿಂದ ಬ್ರಹ್ಮಜ್ಞಾನಿಯನ್ನು ಗುರ್ತಿಸುವುದಕ್ಕೆ ಬರುವುದಿಲ್ಲ. ಉಂಡುಟ್ಟು ಸಂಚರಿಸುವುದರಲ್ಲಿ ಅಜ್ಞರುತಜ್ಞರು ಸಮಾನರಾಗಿರುತ್ತಾರೆ. ಉಂಡುಟ್ಟು ಸಂಚರಿಸುವುದರ ಮೇಲಿಂದ ಅಜ್ಞರು ತಜ್ಞರನ್ನು ಬೇರ್ಪಡಿಸಿ ನಿರ್ಣಯಿಸುವುದಕ್ಕೆ ಬರುವುದಿಲ್ಲ. ವೇದವನ್ನು ಅಧ್ಯಯನ ಮಾಡಿದ ವಿಪ್ರನ ಆಹಾರ ವಿಹಾರಗಳೂ ವೇದವನ್ನು ಅಧ್ಯಯನ ಮಾಡದ ಶೂದ್ರನ ಆಹಾರ ವಿಹಾರಗಳೂ ಸಮಾನವಾಗಿಯೇ

ಇರುತ್ತವೆ. ಆದರೆ ಅಧ್ಯಯನ ಅನಧ್ಯಯನದಲ್ಲಿ ಮಾತ್ರ ಭೇಧವಿರುತ್ತದೆ. ಇದರಂತೆ ಹೃದ್ಗ್ರಂಥಿ ವಿಚ್ಛೇದನ ಮಾಡಿಕೊಂಡು ಬ್ರಹ್ಮಜ್ಞಾನಿಯು ಇರುತ್ತಾನೆ. ಆ ಗ್ರಂಥಿಯನ್ನು ವಿಚ್ಛೇದನ ಮಾಡಿಕೊಳ್ಳದೆ ಅಜ್ಞಾನಿಯು ಇರುತ್ತಾನೆ. ಇದರ ಮೇಲಿಂದ ಅಂದರೆ ಹೃದಯಗ್ರಂಥಿ ರಹಿತತ್ವ ಸಹಿತತ್ವಗಳ ದೃಷ್ಟಿಯಿಂದ ತಜ್ಞರನ್ನು ಅಜ್ಞರನ್ನು ಬೇರ್ಪಡಿಸಿ ನಿರ್ಣಯಿಸುವುದಕ್ಕೆ ಬರುತ್ತದೆ. ಬರೀ ಶರೀರ ವ್ಯಾಪಾರ ಧರ್ಮಗಳಿಂದ ಅಜ್ಞತಜ್ಞರನ್ನು ಬೇರ್ಪಡಿಸುವುದಕ್ಕೆ ಬರಲಾರದು. ಇದಕ್ಕೆ ಸೂರ್ಯನ ದೃಷ್ಟಾಂತವನ್ನು ಕೊಟ್ಟು ಗ್ರಂಥಕರ್ತರು ಅನುಭವ ಮಾಡಿ ಕೊಟ್ಟಿದ್ದಾರೆ. ವಸಂತ, ಗ್ರೀಷ್ಮ, ಶರತ್, ವರ್ಷ, ಹೇಮಂತ, ಶಿಶಿರಗಳೆಂಬ ಷಡ್ ಋತುಗಳ ಕಾಲಗಳು ಬೇರೆ ಬೇರೆ ಯಾಗಿದ್ದರೂ ಸೂರ್ಯನ ಪ್ರಕಾಶವು ಆ ಎಲ್ಲಾ ಋತುಗಳಲ್ಲಿ ಸಮಾನವಾಗಿಯೇ ಇರುತ್ತದೆ. ಆದರೆ ಚೈತ್ರ ವೈಶಾಖ ಮಾಸಗಳ ವಸಂತ ಋತುವಿನಲ್ಲಿ ಬೇಸಿಗೆಯ ಕಾಲವೆಂದೂ, ಮಾಘ ಪಾಲ್ಗುಣ ಮಾಸಗಳ ಶಿಶಿರ ಋತುವಿನಲ್ಲಿ ಶೀತಕಾಲವೆಂದೂ, ಬೇರ್ಪಡಿಸುವುದಕ್ಕೆ ಉಷ್ಣಕಾಲ ಶೀತಕಾಲಗಳನ್ನು ಋತುಗಳಿಂದ ತಿಳಿಯ ಬೇಕಾಗಲಿ ಸೂರ್ಯನ ಬೆಳಕಿನಿಂದಲ್ಲ. ಸೂರ್ಯನ ಬೆಳಕು ಯಾವ ಋತುವಿನಲ್ಲಾಗಲಿ ಯಾವ ಕಾಲದಲ್ಲಾಗಲಿ ಸಮಾನವಾಗಿಯೇ ಇರುತ್ತದೆ. ಇದರಂತೆ ದೇಹದ ಧರ್ಮವು ಎಲ್ಲರಿಗೂ ಸಮಾನವಾಗಿಯೇ ಇರುತ್ತದೆ. ಬ್ರಹ್ಮಜ್ಞಾನಿಗೆ ಶರೀರವು ಇರುವುದರಿಂದ ಆ ಶರೀರ ಧರ್ಮವು ಇದ್ದೇ ಇರುತ್ತದೆ ಶರೀರ ಧರ್ಮವು ಇಲ್ಲದವರಿಗೇನೇ ಬ್ರಹ್ಮಜ್ಞಾನಿಯೆನ್ನ ಬೇಕೆಂದರೆ ಆಹಾರ ವಿಹಾರಾದಿ ಶರೀರ ಧರ್ಮಗಳು ಶವಕ್ಕೆ ಇರುವುದಿಲ್ಲ. ಆ ಶವಕ್ಕೆ ಬ್ರಹ್ಮಜ್ಞಾನಿಯೆಂದು ಹೇಳಬೇಕಾದೀತು! ಆದ್ದರಿಂದ ದೇಹ ವಿರುವವರಿಗೂ ಅದರ ಧರ್ಮವು ಇದ್ದೇಇರುತ್ತದೆ. ಹಾಗೆ ಇದ್ದರೂ ಅದರಿಂದ ಬ್ರಹ್ಮವೇತ್ತನಿಗೆ ಯಾವ ಹಾನಿಯೂ ಇರುವುದಿಲ್ಲ ಎಂಬ ಭಾವವು.

## ವಾರ್ಧಿಕ ಷಟ್ಪದಿ.

ತನು ಧರ್ಮಗಳಲಿ ಬದ್ಧರು ಮುಕ್ತರೊಂದೆ ಸಮ ।
ವೆನಿಪರಾದರು ಭೇದಮುಂಟು ವೇದಾಧ್ಯಯನ ।
ವನು ಗೈದ ದ್ವಿಜನಿಗಂ ಬಿಟ್ಟಂಥ ಶೂದ್ರನಿಗು ಭೇದಮುಂಟವರಂದದಿ ॥
ತನುಧರ್ಮ ಮುಕ್ತನಿಗೆ ಬಿಡಲಾರದೆಂತೆನಲು ।
ತನುವಿರುವ ಕಾರಣದಿ ಶಿಶಿರವಾತಪದಲ್ಲಿ ।
ದಿನಪ ತಾಂ ತೋರನೇನವರಿಂದ ಮುಕ್ತನಿಗೆ ತನುಧರ್ಮ ಬಿಡಲಾರದು ॥೯೫॥

**ಅವತಾರಿಕೆ:**—ಬದ್ಧ ಮುಕ್ತರಲ್ಲಿ ತನುಧರ್ಮಗಳು ಸಮಾನವಾಗಿರುತ್ತವೆ ಎಂದು ಹೇಳಿದಿರಿ. ಆದರೆ ಮುಕ್ತನಲ್ಲಿ ತನುಧರ್ಮವಿದ್ದರೆ ಆತನು ಮುಕ್ತನೆಂತಾಗು

ನನು ? ತನುಧರ್ಮವು ಅಳಿದಾಗ್ಯೆ ಮುಕ್ತನಾಗುವನಾಗಲಿ ತನುವಿದ್ದು ತನುಧರ್ಮಗಳಿದ್ದು ಮುಕ್ತನಾಗುವನೆಂಬುದು ಹೇಗೆ ಸಿದ್ಧಿಸುತ್ತದೆ? ಎಂಬ ಪ್ರಶ್ನೆಗೆ ತನುವಿದ್ದು ತನು ಧರ್ಮಗಳಿದ್ದು ಮುಕ್ತನಾಗುವುದು ಸಿದ್ಧಿಸುತ್ತದೆ. ತನು ಧರ್ಮವಳಿದಾಗ ಮುಕ್ತನಾಗುತ್ತೇನೆಂದು ಬಗೆವವನು ಮೂರ್ಖನು ಎಂಬ ಉತ್ತರವನ್ನು ಮುಂದಿನ ಶ್ಲೋಕದಲ್ಲಿ ಸೂಚಿಸುತ್ತಾರೆ.

## * ಭುಜಂಗ ಪ್ರಯಾತ ವೃತ್ತಂ.

**ಪರಂ ಧರ್ಮ ಲುಪ್ತೇ ಸ್ತನೋರ್ಯೋ ಮುಮುಕ್ಷುಃ |**
**ಪರಂ ವೀಚಿ ಸುಪ್ತೇ ಸ್ಸ ವಾರ್ಧೌ ಸ್ನಪಿತ್ಸುಃ ||**
**ಚುವೇನ್ನಾ ರಕರ್ಮೇವ ನೋ ದೈವಧರ್ಮಃ |**
**ಸ್ತಥಾ ಚೇದೃಷೀಣಾಂ ವರೋ ಮಾಸ್ತು ಶಾಪಃ ||೯೫||**

**ಪದಚ್ಛೇದಃ**—ಪರಂ, ಧರ್ಮಲುಪ್ತೇಃ, ತನೋಃ. ಯಃ, ಮುಮುಕ್ಷುಃ, ಪರಂ, ವೀಚಿಸುಪ್ತೇಃ, ಸಃ, ವಾರ್ಧೌ, ಸ್ನಪಿತ್ಸುಃ, ಚುವೇತ್, ನಾರಕರ್ಮೇವ, ನೋ, ದೈವಧರ್ಮಃ, ತಥಾಚೇತ್, ಋಷೀಣಾಂ, ವರಃ, ಮಾಸ್ತು, ಶಾಪಃ,

**ಟೀಕೆ;**—ತನೋ = ದೇಹದ | ಧರ್ಮಲುಪ್ತೇಃ = ಧರ್ಮಾಭಾವದ | ಪರಂ = ಅನಂತರ | ಮುಮುಕ್ಷುಃ = ಮುಕ್ತಿಯನ್ನಪೇಕ್ಷಿಸುವವನು | ವೀಚಿಸುಪ್ತೇಃ = ತರಂಗಗಳ ಭಾವದ | ಪರಂ = ಅನಂತರ | ವಾರ್ಧೌ = ಸಾಗರದಲ್ಲಿ | ಸ್ನಪಿತ್ಸುಃ = ಸ್ನಾನಮಾಡಲಪೇಕ್ಷಿಸುವವನು | ಯಃ = ಯಾವಾತನೋ | ಸಃ = ಆತನು | ನಾರಕರ್ಮೇವ = ದುರಿತಕರ್ಮವೇ | ಚ್ಯುವೇತ್ = ಪೊಂದುವವನು | ದೈವಧರ್ಮಃ = ಪುಣ್ಯವು | ನೋ = ಇಲ್ಲ | ತಥಾಚೇತ್ = ಶರೀರ ಧರ್ಮವಳಿದಾಗಲೇ ಮುಕ್ತಿಪ್ರಾಪ್ತಿಯೆಂದರೆ | ಋಷೀಣಾಂ = ಮುಕ್ತರಾದ ಋಷಿವರ್ಯರಿಗೆ | ಶಾಪಃ = ನಿಗ್ರಹವು | ವರಃ = ಅನುಗ್ರಹವು | ಮಾಸ್ತು = ಇರಬಾರದಾಗಿತ್ತು |

**ತಾತ್ಪರ್ಯ:**—ಶರೀರಧರ್ಮಗಳು ನಿಂತನಂತರ ಮುಕ್ತಿಸುಖವನ್ನು ಅಪೇಕ್ಷಿಸುವುದು ಯೋಗ್ಯವೆಂಬುವವನು ಸಾಗರದ ಅಲೆಗಳು ನಿಂತನಂತರ ಸ್ನಾನಮಾಡಬೇಕೆಂದು ಇಚ್ಛಿಸುವವನಂತೆ ಮೂರ್ಖನೆನಿಸುತ್ತಾನೆ. ಅವನಲ್ಲಿ ಪುಣ್ಯಸಂಸ್ಕಾರವಿರುವುದಿಲ್ಲ ಶರೀರ ಧರ್ಮಗಳಳಿದಾಗ್ಯೆ ಮುಕ್ತಿಯಾಗುವುದೆಂದು ಒಪ್ಪಿಕೊಂಡರೆ ಮುಕ್ತರಾದ ಮಹರ್ಷಿಗಳಲ್ಲಿ ಶಾಪಾನುಗ್ರಹಸಾಮರ್ಥ್ಯವಿರಬಾರದಾಗಿತ್ತು.

* ೨ ನೇ ಶ್ಲೋಕದ ಛಂದಸ್ಸನ್ನು ನೋಡಿ.

**ವಿಶೇಷಾರ್ಥ;**—ಮುಕ್ತಿ ಹೊಂದಲಪೇಕ್ಷಿಸುವವರು ಪ್ರಪಂಚದ ಜನರಹಾಗೆ ಇರುವುದಿಲ್ಲ. ಅವರು ಜನರ ಸಂಗವನ್ನು ದೂರೀಕರಿಸಿ ಅರಣ್ಯದಲ್ಲಿಯೋ ಗುಡ್ಡಗಳಲ್ಲಿಯೋ ವಾಸವಾಗಿದ್ದು ಕಂದಮೂಲಗಳನ್ನು ಸೇವಿಸುತ್ತಿರಬೇಕು. ಎಲ್ಲರಂತೆ ಗ್ರಾಮದಲ್ಲಿ ಉಂಡುಟ್ಟು ಸಂಚರಿಸಬಾರದು ಮತ್ತು ಯಾವ ವ್ಯವಹಾರ ಉದ್ಯೋಗಗಳನ್ನು ಮಾಡಬಾರದು ಎಂದು ಮಾತನಾಡಿಕೊಳ್ಳುವ ಜನರು ಕೆಲವರುಂಟು, ಇಂತಹ ಜನರನ್ನು ಗ್ರಂಥಕರ್ತರು ಮೂರ್ಖರ ಗುಂಪಿಗೆ ಸೇರಿಸಿದ್ದಾರೆ ಮತ್ತು ಪುಣ್ಯ ಸಂಸ್ಕಾರ ವಿಹೀನರೆಂತಲೂ ನಿರ್ಣಯಿಸಿದ್ದಾರೆ. ಶರೀರ ವಿರುವುದರಿಂದ ಎಂಥವರಿಗೂ ಆಹಾರ ವಿಹಾರ ತನುಧರ್ಮಗಳು ಬಿಡುವುದಿಲ್ಲ. ನಿಸ್ಸಂಗಿಯಾಗಿ ಗುಡ್ಡದಲ್ಲಿ ಸೇರಿಕೊಂಡರೂ ತನುಧರ್ಮವು ಬಿಟ್ಟಿರುವುದಿಲ್ಲ. ತನುಧರ್ಮವು ನಿಂತಬಳಿಕ ಮುಕ್ತಿಯನ್ನು ಹೊಂದಲು ಪ್ರಯತ್ನಿಸುವವನು ಸಮುದ್ರದಲ್ಲಿ ತರಂಗಗಳು ನಿಂತಬಳಿಕ ಸ್ನಾನ ಮಾಡ ಬೇಕೆಂದು ಯತ್ನಿಸುವವನಂತೆ ಮೂರ್ಖನೆನಿಸುತ್ತಾನೆ. ಸಾಗರ ವಿರುವವರೆಗೂ ಅದರ ಧರ್ಮವಾದ ತರಂಗಗಳು ಇರುವಂತೆ ಶರೀರ ವಿರುವವರೆಗೂ ಅದರ ಧರ್ಮವಾದ ಆಹಾರ ವಿಹಾರಗಳಿದ್ದೇ ಇರುತ್ತವೆ. ತರಂಗಗಳಿದ್ದರೂ ಸಾಗರದಲ್ಲಿ ಸ್ನಾನ ಮಾಡುವವನು ಹೇಗೆ ಪುಣ್ಯಾತ್ಮನೋ ಹಾಗೆ ಶರೀರಧರ್ಮಗಳಿದ್ದರೂ ತನ್ನ ಸ್ವರೂಪ ಜ್ಞಾನವೆಂಬ ಸ್ನಾನವನ್ನು ಮಾಡುವವನನ್ನು ಪುಣ್ಯಾತ್ಮನೆನ್ನಬೇಕು. ಮುಕ್ತ ಪುರುಷನಿಗೆ ಶರೀರ ಧರ್ಮಗಳೇ ಇರುವುದಿಲ್ಲವೆಂದು ಹಟವಿಡಿದುಕೊಂಡವರಿಗೆ ಉತ್ತರವಿದು. ಮುಕ್ತರಾದ ವಶಿಷ್ಟ ವಾಮದೇವಾದಿ ಮಹರ್ಷಿಗಳಲ್ಲಿ ಶಾಪಾನುಗ್ರಹ ಶಕ್ತಿಸಾಮರ್ಥ್ಯಗಳು ಇರಬಾರದಾಗಿತ್ತು ಆ ಮಹರ್ಷಿಗಳು ದುಷ್ಟರಿಗೆ ಶಾಪವನ್ನೂ, ಶಿಷ್ಟರಿಗೆ ಅನುಗ್ರಹವನ್ನೂ, ಕೊಟ್ಟಂತೆ ಪುರಾಣಗಳಲ್ಲಿ ಪ್ರಮಾಣ ಪೂರ್ವಕವಾಗಿ ಪ್ರತಿಪಾದಿಸಲ್ಪಟ್ಟದೆ. ಆ ಶಾಪಾನುಗ್ರಹ ಶಕ್ತಿ ಸಾಮರ್ಥ್ಯಗಳು ಶರೀರಧರ್ಮಗಳಾಗಲಿ, ಆತ್ಮನ ಧರ್ಮವಲ್ಲ. ಮತ್ತು ಆತ್ಮಜ್ಞಾನದ ಧರ್ಮವೂ ಅಲ್ಲ. ಶಾಪಾನುಗ್ರಹ ಶಕ್ತಿಸಾಮರ್ಥ್ಯವು ಶರೀರಧರ್ಮವೆಂತಲೇ ತೀರ್ಮಾನಿಸಬೇಕು ಇಲ್ಲಿ ಒಂದು ಸಂಶಯವಿದೆ, ಸರ್ವರಿಗೂ ಶರೀರವಿರುತ್ತದೆ ಶಾಪಾನುಗ್ರಹ ಶಕ್ತಿಸಾಮರ್ಥ್ಯವು ಶರೀರಧರ್ಮವಾದರೆ ಸರ್ವರಲ್ಲಿಯೂ ಶಾಪಾನುಗ್ರಹ ಶಕ್ತಿಸಾಮರ್ಥ್ಯಗಳು ಏತಕ್ಕೆ ತೋರಬಾರದು ? ಈ ಸಂದೇಹಕ್ಕೆ ಉತ್ತರವಿದು, ಶಾಪಾನುಗ್ರಹ ಶಕ್ತಿಸಾಮರ್ಥ್ಯಗಳು ತಪಸ್ಸಿನ ಫಲವಾಗಿರುತ್ತದೆ. ಆ ತಪಸ್ಸಾದರೂ ಸೂಕ್ಷ್ಮಶರೀರ ಧರ್ಮವಾಗಿರುತ್ತದೆ ಅಂತು ಆ ಶಾಪಾನುಗ್ರಹಗಳು ಶರೀರಧರ್ಮವೆಂಬುದೇ ನಿಶ್ಚಿತಾರ್ಥವು ಇದ್ದರಿಂದ ದೇಹವಿರುವವರೆವಿಗೂ. ದೇಹದ ಧರ್ಮಗಳು ಎಂಥವರಿಗೂ ಬಿಡುವುದಿಲ್ಲ. ದೇಹದ ಧರ್ಮಗಳಿದ್ದರೂ ತಾನು ತಿಳಿದಿರುವ ತನ್ನ ಸ್ವರೂಪಕ್ಕೆ ಯಾವಹಾನಿಯೂ ಇರುವುದಿಲ್ಲ. ತನಗೆ ಉಂಟಾದ ಮುಕ್ತತ್ವಸ್ಥಿತಿಗೂ ಯಾವ ಕೊರತೆಯೂ ಇರುವುದಿಲ್ಲ. ಎಂಬ ಭಾವವು

## ವಾರ್ಧಿಕಷಟ್ಪದಿ

ತನುಧರ್ಮ ವಳಿದಬಳಿಕಂ ಮೋಕ್ಷಬಯಸುವೆನು ।
ಎನಲವನು ತೆರೆಗಳಿಲ್ಲವು ನಿಲ್ಲಲಾಬಳಿಕ ।
ವನಧಿಯಲಿ ಸ್ನಾನವಂ ಗೈವೆ ನೆಂತೆಂಬುವಾಗಾಂಪನಿಗೆ ಪೋಲುತಿಹನು ॥
ಘನ ಪಾಪಿ ಯಪ್ಪನವನೊಳು ಪುಣ್ಯ ವಿಸಿತಿಲ್ಲ ।
ತನು ಧರ್ಮವಳಿದಾಗ ಮುಕ್ತಿಯಾಗುವುದೆನಲು ।
ಮುನಿವರ್ಯರಲಿ ಶಾಪ ಮತ್ತು ವರಗಳು ಕೊಡುವದಿರ ಬಾರದರಿತು
ನೋಡೇ ॥೯೫॥

**ಅವತಾರಿಕೆ:**—ಬ್ರಹ್ಮಜ್ಞಾನಿಗೆ ತನುವಿರುವ ತನಕ ತನು ಧರ್ಮವು ಇದ್ದೇ ಇರುತ್ತದೆ. ಎಂದು ಹೇಳಿದಿರಿ. ಮತ್ತು ತನುಧರ್ಮವಿದ್ದರೂ ಮುಕ್ತನಾಗುವುದಕ್ಕೆ ಭರುತ್ತದೆಂತಲೂ ಹೇಳಿದಿರಿ. ಆದರೆ ತನುವಿದ್ದಮೇಲೆ ತನುಧರ್ಮ ವಿರುವಂತೆ ತನು ಧರ್ಮ ವಿದ್ದಮೇಲೆ ತನುವಿನಲ್ಲಿ ಆತ್ಮತ್ವ ಭ್ರಾಂತಿಯೂ ಉಂಟಾಗಬಹುದಲ್ಲವೇ ? ಎಂಬ ಪ್ರಶ್ನೆಗೆ ಬ್ರಹ್ಮಜ್ಞಾನಿಗೆ ಶರೀರ ಧರ್ಮಗಳು ತೋರಿದರೂ ಅವುಗಳಲ್ಲಿ ಆತ್ಮತ್ವ ಭ್ರಮೆಯುಂಟಾಗುವುದಿಲ್ಲ ಎಂಬ ಉತ್ತರವನ್ನು ಮುಂದಿನ ಶ್ಲೋಕದಲ್ಲಿ ಉಪಮಾನ ದೊಂದಿಗೆ ಸೂಚಿಸುತ್ತಾರೆ.

## * ಪಂಚಚಾಮರ ವೃತ್ತ.

**ಯಥಾ ಪರೀಕ್ಷಕಸ್ಯ ಪೂರ್ವ ವಮ್ಮರೀಚಿ ರೇಧತೇ ।**
**ಪ್ಯುದಭ್ರಮಂ ದದಾತಿ ನಾಪರೀಕ್ಷ ಚೇತಸಾಮಿವ ॥**
**ತಥಾತ್ಮವೇ ದಿನಶ್ಚರಿತ್ರ ಮೇಧತೇಪಿಪೂರ್ವವ ।**
**ನ್ನಭೀತಿ ಮಾತ್ಮನಃ ಕರೋತ್ಯ ನಾತ್ಮವೇದಿನಾ ಮಿವ ॥೯೬॥**

**ಪದಚ್ಛೇದ:**—ಯಥಾ ಪರೀಕ್ಷಕಸ್ಯ, ಪೂರ್ವವತ್, ಮರೀಚಿಃ, ಏಧತೇಪಿ, ಉತ ಭ್ರಮಂ, ದದಾತಿ, ನ ಅಪರೀಕ್ಷ ಚೇತಸಾಂ, ಇವ, ತಥಾ. ಆತ್ಮವೇದಿನಃ ಚರಿತ್ರಂ ಏಧತೇಪಿ, ಪೂರ್ವವತ್, ನ, ಭೀತಿಂ, ಆತ್ಮನಃ, ಕರೋತಿ, ಅನಾತ್ಮವೇದಿನಾಂ, ಇವ,

**ಟೀಕೆ;**—ಯಥಾ = ಯಾವರೀತಿಯಾಗಿ । ಪರೀಕ್ಷಕಸ್ಯ = ನೀರಲ್ಲಿ ಬಿಸುಲು ದೊರೆ ಎಂದು ಪರೀಕ್ಷಿಸಿ ತಿಳಿದವನಿಗೆ । ಮರೀಚಿಃ = ಮರುಮರೀಚಿಕೆಯು । ಏಧ

---

* ಪ್ರತಿಯೊಂದು ಚರಣದಲ್ಲಿ ಜ, ರ, ಜ, ರ, ಜ, ಗಣಗಳೂ, ಕೊನೆಗೊಂದು ಗುರುವೂ ಇದ್ದು ಒಂಬತ್ತನೇ ಅಕ್ಷರಕ್ಕೆ ಯತಿಯಿದ್ದುದಾದರೆ ಪಂಚಚಾಮರ ವೃತ್ತವಾಗುತ್ತದೆ

ತೇಪಿ = ತೋರಿಬಂದರೂ । ಅಪರೀಕ್ಷಚೇತಸಾಂ = ಇದು ಬಿಸುಲು ದೊರೆ ಎಂದು ಪರೀಕ್ಷಿಸದವನ । ಇವ = ಹಾಗೆ । ಪೂರ್ವವತ್ = ಮೊದಲಿನಹಾಗೆ । ಭ್ರಮಂ = ಇದು ನೀರೆಂಬ ಭ್ರಾಂತಿಯನ್ನು । ಉತದದಾತಿ = ಉಂಟು ಮಾಡುತ್ತದೇನು ? । ತಥಾ = ಆರೀತಿಯಾಗಿ । ಆತ್ಮವೇದಿನಃ = ಆತ್ಮವೇತ್ತನಿಗೆ । ಚರಿತ್ರಂ = ತನುಧರ್ಮವು । ಏಥತೇಪಿ = ತೋರಿಬಂದರೂ । ಆತ್ಮವೇದಿನಾಮಿವ = ಆತ್ಮವೇತ್ತನಲ್ಲದವನಿಗೆ ಭೀತಿಯನ್ನುಂಟು ಮಾಡಿದಂತೆ । ಆತ್ಮನಃ = ಮನಸ್ಸಿಗೆ । ಭೀತಿಂ = ಭಯವನ್ನು ನಕರೋತಿ = ಉಂಟುಮಾಡುವುದಿಲ್ಲ ।

**ತಾತ್ಪರ್ಯ;**—ಮರುಮರೀಚಿಕೆಯನ್ನು ಕಂಡು ಅದನ್ನು ಪರೀಕ್ಷಿಸದೆ ಜಲವೆಂದು ಭ್ರಮೆಗೊಳ್ಳುವವನಂತೆ ಪರೀಕ್ಷಿಸಿದವನು ಭ್ರಮೆ ಗೊಳ್ಳುವುದಿಲ್ಲ. ಇದರಂತೆ ತನುಧರ್ಮಾದಿಗಳೆಲ್ಲವೂಮಿಥ್ಯಾಪುಸಿತೋರ್ಕೆಯೆಂದು ವಿಚಾರಪೂರ್ವಕವಾಗಿ ಅರಿತುಕೊಂಡಿರುವ ಜ್ಞಾನಿಗೆ ಆ ತನುಧರ್ಮಾದಿಗಳು ತೋರಿಬಂದರೂ ಭ್ರಮೆಗೊಳ್ಳುವುದಿಲ್ಲ.

**ವಿಶೇಷಾರ್ಥ ;**—ಅಜ್ಞಾನಕಾಲದಲ್ಲಿ ಪ್ರಪಂಚವು ಸತ್ಯವೆಂತಲೂ, ದೇಹವು ತಾನೆಂತಲೂ ಭಾವಿಸುವುದರಿಂದ ಆ ದೇಹವಧರ್ಮಗಳು ಜೀವನನ್ನು ಭ್ರಾಂತಿಗೀಡು ಮಾಡುತ್ತವೆ. ಶ್ರುತಿಗುರು ಪಥವಿಡಿದು ವಿಚಾರಪೂರ್ವಕಶ್ರವಣಾದಿಗಳದ್ವಾರ ಸ್ವರೂಪ ಸಾಕ್ಷಾತ್ಕಾರವುಂಟಾದಮೇಲೆ. ಅಂದರೇ ಶರೀರವು ಶರೀರ ಧರ್ಮಗಳು ಮತ್ತು ಪ್ರಪಂಚವು ಅಧ್ಯಾಸರೂಪ ಪುಸಿತೋರ್ಕೆಯು, ನಾನು ಶುದ್ಧ ಮುಕ್ತಸ್ವರೂಪನು ಎಂಬ ನಿಜದರಿವು ತಲೆಯೆತ್ತಿಕೊಂಡಾಗ ತನುಧರ್ಮಗಳು ಪ್ರತೀತಿಯಾದರೂ ಅವು ಭ್ರಾಂತಿಗೀಡು ಮಾಡುವುದಿಲ್ಲ ಎಂಬುದು ಸ್ವಾನುಭವಕ್ಕೆ ಬರುವಂತೆ ಗ್ರಂಥಕರ್ತರು ಸೋಪಾಧಿಕಾಧ್ಯಾಸ ರೂಪ ಮೃಗಜಲದ ಉದಾಹರಣೆಯನ್ನು ಕೊಟ್ಟಿದ್ದಾರೆ. ಸವುಳು ಭೂಮಿಯಲ್ಲಿ ಸೂರ್ಯನ ಪ್ರಖರ ಕಿರಣಗಳಿಂದ (ಬಿಸಿಲಿನಿಂದ) ಕೆರೆ ತೊರೆಯು ಆಕಾರವಾಗಿ ಜಲಭ್ರಾಂತಿಯು ಉಂಟಾಗುತ್ತದೆ. ಇದಕ್ಕೆ ಮರುಮರೀಚಿಕೆ (ಮೃಗಜಲ) ಎಂಬ ಹೆಸರು. ಸೂರ್ಯನ ಬಿಸಿಲು ಜಲಾಕಾರವಾಗಿ ಕಾಣುವುದರಿಂದ ಅಲ್ಲಿಗೆ ದಾಹಗೊಂಡ ಮೃಗಗಳು ಧಾವಿಸುತ್ತವೆ. ಜಲವೆಂದು ಭ್ರಮೆಗೊಂಡು ಮೃಗಗಳು ಧಾವಿಸುವುದರಿಂದ ಆ ಜಲಕ್ಕೆ ಮೃಗಜಲವೆಂಬ ಹೆಸರು ಬಂದಿರುತ್ತದೆ. ಆ ಮೃಗಗಳಂತೆ ಮನುಷ್ಯರೂ ಭ್ರಮೆಗೊಳ್ಳುವುದುಂಟು ಹಾಗೆ ಭ್ರಮೆಗೊಳ್ಳುವುದಕ್ಕೆ ಇದು ಮೃಗಜಲವೆಂಬುದನ್ನು ವಿಚಾರಿಸದಿರುವುದೇ ಕಾರಣವಾಗಿದೆ. ವಿಚಾರ ದ್ವಾರಾ ಪರೀಕ್ಷಿಸಿ, ಇದು ಜಲವಲ್ಲ. ಮೃಗಜಲ (ಬಿಸಿಲುದೊರೆ) ಎಂಬ ತಿಳಿವು ಮೈಗೂಡಿದಾಗ ಮುನ್ನಿನಂತೆ ಮೃಗಜಲವು ಪ್ರತೀತಿಯಾದರೂ, ಆ ಜಲವು ಭ್ರಮೆಗೊಳಿಸುವುದಿಲ್ಲ. ಏಕೆಂದರೆ ಸೂರ್ಯರಶ್ಮಿಯು ಇರುವವರೆಗೂ. ಆ ಭೂ

ಮಿಯು ಜಲದಂತೆ ಪುಸಿದೋರ್ಕೆಯೆಂಬುದು ಮನವರಿಕೆಯಾಗುತ್ತದೆ. ಆದ್ದರಿಂದ ಆ ಮೃಗಜಲವು ಭ್ರಾಂತಿಗೀಡುಮಾಡುವುದಿಲ್ಲ. ಇದರಂತೆ ಅಜ್ಞಾನಕಾಲದಲ್ಲಿ ತನುಕರಣಗಳ ಧರ್ಮಗಳು ಭ್ರಾಂತಿಗೊಳಿಸುವಂತೆ ಜ್ಞಾನಕಾಲದಲ್ಲಿ ಭ್ರಾಂತಿಗೊಳಿಸುವುದಿಲ್ಲ. ಏಕೆಂದರೆ ಬಿಸುಲು ಇರುವವರೆಗೂ ಮೃಗಜಲವು ಪ್ರತೀತಿಯಾದಂತೆ ಪ್ರಾರಬ್ಧಕರ್ಮ ವಿರುವವರೆಗೂ ಶರೀರಧರ್ಮಗಳು ಪ್ರತೀತಿಯಾಗುತ್ತವೆ. ಮೃಗಜಲವು ಮಿಥ್ಯಾಪ್ರತೀತಿಯಾದಂತೆ ಶರೀರ ಧರ್ಮಗಳು ಮಿಥ್ಯಾಪ್ರತೀತಿಯಾಗಿರುತ್ತವೆ. ಎಂಬ ತಿಳುವಳಿಕೆಯು ಉಂಟಾಗಿರುವುದರಿಂದ ಶರೀರ ಧರ್ಮಗಳು ಭ್ರಾಂತಿಗೊಳಿಸುವುದಿಲ್ಲ. ಪೋಲೀಸನು ಜನರನ್ನು ಚದರಿಸುವುದಕ್ಕಾಗಿ ಬಂದೂಕಿನಿಂದ ಹುಸಿಗಂಡನ್ನು ಹಾರಿಸುತ್ತಾನೆ. ಆ ಶಬ್ದಕ್ಕೆ ಎದೆಯು ಜಲ್ಲೆಂದು ಭಯಗೊಳ್ಳುತ್ತದೆ. ಅದು ಹುಸಿಗುಂಡೆಂದು ತಿಳಿದುಬಂದ ನಂತರ ಆ ಪೋಲೀಸನು ಸಾವಿರಬಾರಿ ಹುಸಿ ಗುಂಡಿನಿಂದ ಶಬ್ದ ಮಾಡಿದರೂ ಆ ಶಬ್ದಕ್ಕೆ ಎದೆಯು ಜಲ್ಲೆಂದು ಭಯಗೊಳ್ಳುವುದಿಲ್ಲ. ಹುಸಿಗುಂಡಿನ ಶಬ್ದದಂತೆ ಪ್ರತೀತಿ ಯಾಗುವ ತನುಧರ್ಮಗಳು ಬ್ರಹ್ಮವೇತ್ತನ ದೃಷ್ಟಿಯಲ್ಲಿ ಹುಸಿಯಾಗಿರುವುದರಿಂದ ಅವು ಅನರ್ಥಹೇತುವಲ್ಲ. ಎಂಬಭಾವವು,

## ವಾರ್ಧಿಕ ಷಟ್ಪದಿ.

ಮರು ಮರೀಚಿಕೆಯನ್ನು ಜಲವೆಂದು ಭ್ರಮೆಗೊಂಡು ।
ಮರಳಿಯದನಂ ಬಿಸಲು ದೊರೆಯೆಂದು ತಿಳಿದವಗೆ ।
ಮರಳಿಮೊದಲಿನ ತೆರೆದಿ ಜಲವಾಗಿ ಕಂಡರುಂ ಭ್ರಮೆಗೊಳ್ಳದಿರುವಂದದಿ ॥
ಪರತತ್ವವರಿತಂಥ ಸುಜ್ಞಾನಿಗೀದೇಹ ।
ಕಿರುವ ಧರ್ಮಗಳು ಮೇಣ್ ಜಗವು ಪುಸಿತೋರ್ಕೆಯೆಂ ।
ಬರಿವು ತನಗಳವಟ್ಟ ಕಾರಣದಿ ಭ್ರಮೆಗೂಳ್ಳ ನೆಂದೆಂದಿಗಿದು ಸತ್ಯವು ॥ ೯೬ ॥

ಅವತಾರಿಕೆ ;— ಜ್ಞಾನಿಗೆ ತನು ಧರ್ಮಗಳು ಭ್ರಮೆಯನ್ನುಂಟು ಮಾಡುವುದಿಲ್ಲವೆಂದು ಹೇಳಿದಿರಿ. ಆದರೆ ಆ ತನುಧರ್ಮಗಳಲ್ಲಿ ಮುಖ್ಯವಾದುದು ಅಹಂಕರವಾಗಿರುತ್ತದೆ. ಆ ಅಹಂಕಾರ ವಿರುವುದರಿಂದ ಕರ್ತೃತ್ವ ಭೋಕ್ತೃತ್ವವು ನಿವೃತ್ತಿಯಾಗುವುದಿಲ್ಲ. ಜ್ಞಾನಿಗಳಾದವರೂ ಸಹ ನಾನು ಮಾಡುತ್ತೇನೆ ನಾನು ಉಣ್ಣುತ್ತೇನೆ ಎಂಬ ವ್ಯವಹಾರವು ಪ್ರತ್ಯಕ್ಷ ಕಂಡುಬರುತ್ತದೆ. ಆದ್ದರಿಂದ ಆ ಕರ್ತೃತ್ವ ಭೋಕ್ತೃತ್ವವು ಆತ್ಮನಲ್ಲಿ ಆರೋಪವಾಗಿ ಜನನಮರಣರೂಪ ಸಂಸಾರಕ್ಕೆ ಹೇತುವಾಗಲಾರದೇನು ? ಎಂಬ ಪ್ರಶ್ನೆಗೆ ಬ್ರಹ್ಮಜ್ಞಾನಿಯಲ್ಲಿ ಮಿಥ್ಯಾರೂಪ ಕರ್ತೃತ್ವ ಭೋಕ್ತೃತ್ವರೂಪ ಅಹಂಕಾರ ಧರ್ಮಗಳು ಕಂಡುಬಂದರೂ ಅವು ಆತ್ಮನಲ್ಲಿ

ಆರೋಪವಾಗಲಾರವೆಂಬ ಉತ್ತರವನ್ನು ಉಪಮಾನದೊಡನೆ ಮುಂದಿನ ಶ್ಲೋಕದಲ್ಲಿ ಸೂಚಿಸುತ್ತಾರೆ.

## * ಪ್ರಹರ್ಷಿಣಿವೃತ್ತ.

ಧೀರಾಯ ಪ್ರಸವ ಮವಿದ್ಯ ಯ ವಿಯೋಕ್ತ್ರೇ ।
ವಲ್ಗತ್ಯಪ್ಯ ನಲ ಮಹಂಕ್ರಿಯಾ ವಿಧಾತುಂ ॥
ನಿರ್ಮೋಕೋ ಜನ ಮನಿಲಾಂಧಸಾ ವಿಸೃಷ್ಟಃ ।
ಕರ್ತುಂ ನಪ್ರಭವತಿ ಸಂದಶನ್ ಪರೇತಂ ॥ ॥ ೯೭ ॥

**ಪದಚ್ಛೇದ ;—** ಧೀರಾಯ, ಪ್ರಸವಂ, ಅವಿದ್ಯಯಾ, ವಿಯೋಕ್ತ್ರೇ, ವಲ್ಗತ್ಯಪಿ, ಅಲಂ, ನ, ಅಹಂಕ್ರಿಯಾ, ವಿಧಾತುಂ, ನಿರ್ಮೋಕಃ, ಜನಂ, ಅನಿಲಾಂಧಸಾ, ವಿಸೃಷ್ಟಃ, ಕರ್ತುಂ, ನಪ್ರಭವತಿ, ಸಂದಶನ್, ಪರೇತಂ,

**ಟೀಕೆ ;—** ಧೀರಾಯ = ಜ್ಞಾನಿಗೆ । ಅವಿದ್ಯಯಾ = ಅಜ್ಞಾನದಿಂದ । ವಿಯೋಕ್ತ್ರೇ = ಬಿಡುಗಡೆಯಾದ । ಅಹಂಕ್ರಿಯಾ = ಮೂಲಅಹಂಕಾರವು । ವಲ್ಗತ್ಯಪಿ = ಹೊಯ್ದಾಡಿದರೂ । ಪ್ರಸವಂ = ಜನ್ಮವನ್ನು । ವಿಧಾತುಂ = ವಿಧಿಸಲು । ಅಲಂನ = ಸಮರ್ಥವಲ್ಲ ( ಹೇಗೆಂದರೆ ) । ಅನಿಲಾಂಧಸಾ = ಗಾಳಿಯನ್ನು ಅಹಾರಮಾಡಿಕೊಳ್ಳುವ ಸರ್ಪದಿಂದ । ವಿಸೃಷ್ಟಃ = ತ್ಯಜಿಸಲ್ಪಟ್ಟ । ನಿರ್ಮೋಕಃ = ಹಾವಿನಪರೆಯು । ಜನಂ = ಜನರನ್ನು । ಸಂದಶನ್ = ಹಲ್ಲುಗಳಿಂದಕಚ್ಚಿ । ಪರೇತಂ = ಸಾವನ್ನು । ಕರ್ತುಂ = ಉಂಟುಮಾಡಲು । ನಪ್ರಭವತಿ = ಸಮರ್ಥವಾಗದಂತೆ ।

**ತಾತ್ಪರ್ಯ :—** ಹಾವಿನಿಂದ ಬಿಡಲ್ಪಟ್ಟ ಪರೆಯಲ್ಲಿ ಜನರನ್ನು ಕಚ್ಚಿ ಸಾವಿಗೀಡು ಮಾಡುವಂತಹ ಶಕ್ತಿಯು ಹೇಗೆ ಇರುವುದಿಲ್ಲವೋ ಹಾಗೆ ಅಜ್ಞಾನದಿಂದ ಬಿಡಲ್ಪಟ್ಟ ಅಹಂಕಾರದ ವ್ಯವಹಾರವಿದ್ದರೂ ಅದರಲ್ಲಿ ಜನನ ಮರಣರೂಪ ಸಂಸಾರ ದುಃಖವನ್ನು ಉಂಟುಮಾಡುವ ಶಕ್ತಿಯಿರುವುದಿಲ್ಲ.

**ವಿಶೇಷಾರ್ಥ ;—** ಬ್ರಹ್ಮವೇತ್ತನಲ್ಲಿ ನಾನು ಮಾಡುತ್ತೇನೆ ನಾನು ಉಣ್ಣುತ್ತೇನೆ ಎಂಬ ಅಹಂಕಾರದ ವ್ಯವಹಾರವೆನಿಸಪ ಕರ್ತೃತ್ವ ಭೋಕ್ತೃತ್ವವು ಆತ್ಮನಲ್ಲಿ ಆರೋಪವಾಗಲಾರದು. ಮತ್ತು ಅದು ಸಂಸಾರ ದುಃಖಕ್ಕೆ ಈಡು

---

* ಪ್ರತಿಯೊಂದು ಚರಣದಲ್ಲಿ ಮ, ನ, ಜ, ರ ಗಣಗಳೂ, ಕೊನೆಗೊಂದು ಗುರುವೂ ಏಳನೇ ಅಕ್ಷರಕ್ಕೆ ಯತಿಯೂ ಇದ್ದುದಾದರೆ ಪ್ರಹರ್ಷಿಣಿ ವೃತ್ತವಾಗುತ್ತದೆ.

ಮಾಡುವ ಸಾಮರ್ಥ್ಯವುಳ್ಳದ್ದಲ್ಲ ಎಂಬುದು ಸ್ಪಷ್ಟವಾಗಿ ತಿಳಿದುಕೊಳ್ಳುವುದಕ್ಕೆ ಗ್ರಂಥಕರ್ತರು ಹಾವಿನಪರೆಯ ದೃಷ್ಟಾಂತವನ್ನು ಕೊಟ್ಟಿರುತ್ತಾರೆ. ಸರ್ಪವು ವರ್ಷಕ್ಕೊಮ್ಮೆ ತನ್ನಶರೀರದಿಂದ ಪರೆಯನ್ನು ಬಿಡುತ್ತದೆ. ತನ್ನಶರೀರದಿಂದ ಪರೆಯನ್ನುಬಿಡುವಾಗ ಮುಖಮೊದಲುಗೊಂಡು ಕೊನೆಯ ಬಾಲದವರೆಗೂ ಉದ್ದವಾಗಿಯೂ ವಕ್ರವಾಗಿಯೂ ಬಿಡುತ್ತದೆ. ಅದು ನೋಡುವವರಿಗೆ ಹಾವಿನಂತೆಯೇ ತೋರುತ್ತದೆ, ಆದರೆ ಆ ಪರೆಯಲ್ಲಿ ವಿಷದ ಹಲ್ಗಳಿಂದ ಕಚ್ಚಿ ಜನರನ್ನು ಸಾಯಿಸುವ ಸಾಮರ್ಥ್ಯವಿರುವುದಿಲ್ಲ. ಆದರೂ ಆ ಪರೆಯು ಹಾವಿನಂತೆ ತೋರುವುದುನಿಜ. ಹಾಗೆ ತೋರಿದರೂ ಅದು ಸರ್ಪವಲ್ಲ ಪರೆಯೇ. ಅದರಿಂದ ಯಾವ ಹಾನಿಯೂ ಉಂಟಾಗುವುದಿಲ್ಲ. ಇದರಂತೆ ಜ್ಞಾನಿಯಲ್ಲಿರುವ ಅಹಂಕಾರವು. ಅಜ್ಞಾನರೂಪ ಹಾವಿನಿಂದ ಬಿಟ್ಟ ಪರೆಯಂತಿರುತ್ತದೆ. ಆ ಪರೆಯ ಧರ್ಮವು ಉದ್ದವಾಗಿಯೂ ವಕ್ರವಾಗಿಯೂ ತೋರಿದಂತೆ ಅಹಂಕಾರದ ಧರ್ಮವು ಕರ್ತೃತ್ವವಾಗಿಯೂ ಭೋಕ್ತೃತ್ವವಾಗಿಯೂ ತೋರುತ್ತದೆ. ಪರೆಯಲ್ಲಿ ಜನರನ್ನು ಕಚ್ಚಿ ಕೊಲ್ಲುವ ಸಾಮರ್ಥ್ಯವಿಲ್ಲದಂತೆ ಆ ಅಹಂಕಾರ ಧರ್ಮವಾದ ಕರ್ತೃತ್ವ ಭೋಕ್ತೃತ್ವಕ್ಕೆ ಜನನ ಮರಣವನ್ನುಂಟುಮಾಡುವ ಸಾಮರ್ಥ್ಯವಿರುವುದಿಲ್ಲ. ಹಾವಿನಪರೆಯು ಸರ್ಪದಂತೆ ತೋರಿದರೂ ಬಾಧಕವಿಲ್ಲ ಬ್ರಹ್ಮವೇತ್ತನಲ್ಲಿರುವ ಅಹಂಕಾರವು ಕರ್ತೃತ್ವ ಭೋಕ್ತೃತ್ವದಿಂ ತೋರಿದರೂ ಬಾಧಕವಿಲ್ಲ. ಇದು ಯಥಾರ್ಥವಾದ ಅನುಭವವು. ಕೊಂಡಿ ಮುರಿದ ಚೇಳು. ಹಲ್ಲುಕಿತ್ತಹಾವು ಯಾರಿಗೂ ಬಾಧೆಯನ್ನುಂಟು ಮಾಡದೆಂಬ ನಾಣ್ಣುಡಿಯು ಇರುವುದಷ್ಟೆ! ಎಂಬ ಭಾವವು.

## ವಾರ್ಧಿಕ ಷಟ್ಪದಿ.

ಉರಗತಾಂ ಬಿಟ್ಟಂಥ ಪರೆಗೆ ಜನರಂ ಕಚ್ಚಿ ।
ಮರಣಗೊಳಿಸುವ ಶಕ್ತಿ ಯೆಂತಿಲ್ಲವಂತೆಯೇ ।
ವರ ಮುಮುಕ್ಷುವು ಬ್ರಹ್ಮಸುವಿಚಾರ ಬಲದಿಂದ ಮೂಲಹಂತೆಯು ನೀಗುತ ॥
ಕರಣ ವಿರಲಾಕರಣದಲಿ ಕರ್ತೃತನವೆಂಬು ।
ದಿರಲಿಕಾ ಕರ್ತೃ ತನಕೆಂದಿಗುಂ ಪರಿಭವಕೆ ।
ಗುರಿಮಾಳ್ಪ ಶಕ್ತಿಯಿಲ್ಲಿದು ಸ್ವಾನುಭವ ಸಿದ್ಧವಾದಂಥ ವಾಕ್ಯ ತಿಳಿಯೋ
॥೯೭॥

ಅವತಾರಿಕೆ;–ಜ್ಞಾನಿಯಲ್ಲಿ ಅಹಂಕಾರ ಧರ್ಮವಿದ್ದರೂ ಬಾಧಕವಲ್ಲವೆಂದು ಹೇಳಿದಿರಿ. ಆದರೆ ಅಹಂಕಾರ ಧರ್ಮರೂಪ ಕರ್ತೃತ್ವ ಭೋಕ್ತೃತ್ವದಿಂದ ಜ್ಞಾನಿಯಾದವನು ಹೇಗೆ ವರ್ತಿಸಿದರೂ ಮುಕ್ತನಾಗುವನೇನು? ಎಂಬ ಪ್ರಶ್ನೆಗೆ ಬ್ರಹ್ಮ

ಜ್ಞಾನಿಯು ಪ್ರಾರಬ್ಧ ವೈಚಿತ್ರದಿಂದ ಹೇಗೆ ವರ್ತಿಸಿದರೂ ಹೇಗಿದ್ದರೂ ಮುಕ್ತನೇ. ಎಂಬ ಉತ್ತರವನ್ನು ಮುಂದಿನ ಶ್ಲೋಕದಲ್ಲಿ ಸೂಚಿಸಿಸುತ್ತಾರೆ.

## * ಶಾಲಿನೀ ವೃತ್ತ.

**ಯೋಗೀ ಭೋಗೀ ವಾಸ್ತು ಶಾಂತಃ ಪ್ರಕೋಪೀ ।**
**ಮೌನೀ ವಾಗ್ಮೀ ವಾಸ್ತು ಮೇಧ್ಯೋ ಮಲೀಕಃ ॥**
**ತ್ಯಾಗೀ ಲೋಭೀ ವಾಸ್ತು ವಿದ್ವಾನ್ವಿವರ್ಣಃ ।**
**ಪ್ರಾರಬ್ಧಾಂಶೈ ರ್ಮುಚ್ಯತೇ ತತ್ವದರ್ಶೀ ॥೯೮॥**

**ಪದಚ್ಛೇದ:**—ಯೋಗೀ, ಭೋಗೀ, ವಾ, ಅಸ್ತು, ಶಾಂತಃ, ಪ್ರಕೋಪಿ, ಮೌನಿ, ವಾಗ್ಮಿ, ವಾ, ಅಸ್ತು, ಮೇಧ್ಯಃ, ಮಲೀಕಃ, ತ್ಯಾಗೀ, ಲೋಭಿ, ವಾ, ಅಸ್ತು, ವಿದ್ವಾನ್, ವಿವರ್ಣಃ, ಪ್ರಾರಬ್ಧಾಂಶೈಃ, ಮುಚ್ಯತೇ, ತತ್ವದರ್ಶೀ,

**ಟೀಕೆ;**—ಯೋಗೀ = ಮಂತ್ರಲಯಾದಿ ಯೋಗನಿಷ್ಠೆ ಯುಳ್ಳವನು । ವಾ = ಮತ್ತು । ಭೋಗಿ = ಸಮಸ್ತ ಭೋಗಗಳಲ್ಲಿರುವವನು । ಅಸ್ತು = ಆಗಿರಲಿ । ಶಾಂತಃ = ಶಾಂತಿಯುಳ್ಳವನು । ಪ್ರಕೋಪೀ = ಸಿಟ್ಟುಗೊಳ್ಳುವವನು । ವಾ = ಮತ್ತು । ಮೌನಿ = ಮಾತನಾಡದವನು । ವಾಗ್ಮೀ = ವಾಚಾಳಿಯು । ಮೇಧ್ಯಃ = ನಿರ್ಮಲನು । ಮಲೀಕಃ = ಮಲಿನನು । ಅಸ್ತು = ಆಗಿರಲಿ । ತ್ಯಾಗೀ = ದಾನಿಯು । ಲೋಭೀ = ಲುಬ್ಧನು । ವಾ = ಮತ್ತು । ವಿದ್ವಾನ್ = ಪಂಡಿತನು । ವಿವರ್ಣಃ = ಅಕ್ಷರವಿಲ್ಲದವನು । ಅಸ್ತು = ಆಗಿರಲಿ । ಪ್ರಾರಬ್ಧಾಂಶೈಃ = ತೀವ್ರಮಧ್ಯಾದಿ ಈಗಿನ ಶರೀರ ಆರಂಭವ ಕ್ರಿಯೆಗಳಿಂದ । ತತ್ವದರ್ಶಿ = ತತ್ವವೇತ್ತನು । ಮುಚ್ಯತೇ = ಮುಕ್ತನಾಗುತ್ತಾನೆ ।

**ತಾತ್ಪರ್ಯ.**—ತತ್ವವೇತ್ತನು ತೀವ್ರಾದಿ ಸುಪ್ತಾಂತ್ಯ ಪ್ರಾರಬ್ಧಕರ್ಮ ವೈಚಿತ್ರದಿಂದ ಯೋಗಿಯೂ, ಭೋಗಿಯೂ, ಶಾಂತನೂ, ಕೋಪಿಯೂ, ಮೌನಿಯೂ, ವಾಚಾಳಿಯೂ ಪವಿತ್ರನೂ, ಅಪವಿತ್ರನೂ, ತ್ಯಾಗಿಯೂ, ಲೋಭಿಯೂ ವಿದ್ವಾನನೂ, ನಿರಕ್ಷರಕುಕ್ಷಿಯೂ, ಆಗಿದ್ದರೂ ಮುಕ್ತನಾಗುತ್ತಾನೆ.

**ವಿಶೇಷಾರ್ಥ:**—ತತ್ವವೇತ್ತರಿಗೆ ಪ್ರಾರಬ್ಧ ಕರ್ಮ ಒಂದೇ ವಿಧವಾಗಿರುವುದಿಲ್ಲ. ತೀವ್ರವೆಂತಲೂ, ಮಧ್ಯವೆಂತಲೂ, ಮಂದವೆಂತಲೂ, ಸುಪ್ತವೆಂತಲೂ, ಚತುರ್ವಿಧವಾಗಿ ಪ್ರಾರಬ್ಧ ಕರ್ಮ ವಿರುತ್ತದೆ ಯಾವ ಪ್ರಾರಬ್ಧ ಕರ್ಮ ವಿದ್ದಂತೆ ತತ್ವವೇತ್ತರ ವರ್ತನೆ ಯಿರುತ್ತದೆ ಅವನ ವರ್ತನೆಯು ತನ್ನ ಕರಣಗಳ ಧರ್ಮವಾಗಲಿ

* [illegible] ಶ್ಲೋಕದ ಛಂದಸ್ಸನ್ನು ನೋಡಿ.

ಅವರು ಅರಿತು ಅಳವಡಿಸಿಕೊಂಡಿರುವ ಜ್ಞಾನದ ಧರ್ಮವಲ್ಲ. ಅವರು ಹೇಗಿದ್ದರೂ ಮುಕ್ತರಾಗುತ್ತಾರೆ. ಅಂದರೆ ತತ್ವವೇತ್ತನು ಸನಕನಂತೆ ಯೋಗಿಯಾಗಿರಲಿ, ಇಂದ್ರನಂತೆ ಭೋಗಿಯಾಗಿರಲಿ, ಧರ್ಮಜನಂತೆ ಶಾಂತನಾಗಿರಲಿ, ವಿಶ್ವಾಮಿತ್ರನಂತೆ ಕೋಪಿಯಾಗಿರಲಿ, ಮೂಕನಂತೆ ಮೌನಿಯಾಗಿರಲಿ, ವಾಚಾಳಿಯಂತೆ ವಾಗ್ಮಿಯಾಗಿರಲಿ, ಹುಚ್ಚನಂತೆ ಮಲಿನವಾಗಿರಲಿ, ವ್ರತನಿಷ್ಠನಂತೆ ನಿರ್ಮಲನಾಗಿರಲಿ, ಕರ್ಣನಂತೆಯೂ, ಶಿಬಿಚಕ್ರವರ್ತಿಯಂತೆಯೂ, ಅಥವ ಶುಕನನಂತೆಯೂ ತ್ಯಾಗಿಯಾಗಿರಲಿ ದುರ್ಯೋಧನನಂತೆ ಲೋಭಿಯಾಗಿರಲಿ, ಮತ್ತು ಸಕಲ ಪಾಂಡಿತ್ಯವನ್ನು ಗಳಿಸಿಕೊಂಡಿರಲಿ, ಇಲ್ಲವೇ ನಿರಕ್ಷರಕುಕ್ಷಿಯಾಗಿರಲಿ, ಎಂತಿದ್ದರೂ ತತ್ವವೇತ್ತನು ಮುಕ್ತನಾಗುತ್ತಾನೆ ಎಂಬ ಭಾವವು.

– ಭಾಮಿನಿಷಟ್ಪದಿ:–

ಯೋಗಿಯಾಗಲಿ ಭೋಗಿಯಾಗಲಿ ।
ತ್ಯಾಗಿಯಾಗಲಿ ಲೋಭಿಯಾಗಲಿ ।
ಮೂಗನಾಗಲಿ ಮಾತನಾಡಲಿ ವಿದ್ಯೆರಹಿತನುತಾಂ ॥
ಆಗಿರಲಿ ವಿದ್ವಾನನಾಗಲಿ ।
ಹೇಗಿರಲು ಪ್ರಾರಬ್ಧ ವಿದ್ದಂ ।
ತಾಗುತಿಹುದದರಿಂದ ಜ್ಞಾನಿಯು ಮುಕ್ತನಹುದು ನಿಜ ॥೯೮॥

**ಅವತಾರಿಕೆ:**–ತತ್ವವೇತ್ತನು ಹೇಗಿದ್ದರೂ ಮುಕ್ತನಾಗುತ್ತಾನೆಂದು ಹೇಳಿದಿರಿ ಆದರೆ ಜ್ಞಾನಿಗಳು ತಾವು ಅರಿತು ಅಳವಡಿಸಿಕೊಂಡಿರುವ ಜ್ಞಾನವು ಒಂದೇ ಆದುದರಿಂದ ಅವರ ಆಚರಣೆಯು ಒಂದೇ ರೀತಿಯಾಗಿರ ಬೇಕಲ್ಲವೆ? ಎಂಬ ಪ್ರಶ್ನೆಗೆ ತತ್ವವೇತ್ತರು ಅರಿತು ಅಳವಡಿಸಿಕೊಂಡ ಜ್ಞಾನದಲ್ಲಿ ಭೇಧ ವಿಲ್ಲದಿದ್ದರೂ ಪ್ರಾರಬ್ಧ ಕರ್ಮ ಮೂಲಕ ಆಚರಣೆಯು ಭೇಧ ವಾಗಿರುತ್ತದೆಂಬ ಉತ್ತರವನ್ನು ಮುಂದಿನ ಶ್ಲೋಕದಲ್ಲಿ ಸೂಚಿಸುತ್ತಾರೆ.

## * ಗೀತೀವೃತ್ತ.

ಪ್ರಾರಬ್ಧಾಂಶೈಃ ಕಥಮುಪ್ತಾ ।
ತ್ಮಾರಾಮಾ ರಮಂತು ನಹಿದೋಷಃ ॥
ಏತೇತ್ರ ಸಾಕ್ಷಿಣ ಸ್ಸಿಃ
ಶ್ಶುಕನಾರದ ಜನಕ ಭರತ ವಿಜಯಾದ್ಯಾಃ ॥ ॥ ೯೯ ॥

* ೧ ನೇ ಶ್ಲೋಕದ ಛಂದಸ್ಸನ್ನು ನೋಡಿರಿ.

**ಪದಚ್ಛೇದ ;—** ಪ್ರಾರಬ್ಧಾಂಶೈಃ, ಕಥಮಪಿ, ಆತ್ಮಾರಾಮಾಃ, ರಮಂತು, ನ, ಹಿ, ದೋಷಃ, ಏತೇ, ಅತ್ರ, ಸಾಕ್ಷಿಣಃ, ಸ್ಯುಃ, ಶುಕ, ನಾರದ, ಜನಕ, ಭರತ, ವಿಜಯಾದ್ಯಾಃ,

**ಟೀಕೆ ;—** ಪ್ರಾರಬ್ಧಾಂಶೈಃ = ತೀವ್ರಾದಿ ಪ್ರಾರಬ್ಧ ಕರ್ಮವಾಸನೆಗಳಿಂದ | ಆತ್ಮಾರಾಮಾಃ = ಆತ್ಮರತಿಯುಳ್ಳವರು | ಕಥಮಪಿ = ಎಂತಾದರೂ | ರಮಂತು = ಕ್ರೀಡಿಸಲಿ | ದೋಷಃ = ದೋಷವು || ನ = ಇಲ್ಲ | ಹಿ = ನಿಜವು | ಅತ್ರ = ಈ ವಿಷಯದಲ್ಲಿ | ಶುಕ = ಶುಕಮಹರ್ಷಿಯು | ನಾರದ = ದೇವಮೌನಿಯಾದ ನಾರದನು | ಜನಕ = ಜನಕ ಮಹಾರಾಜನು | ಭರತ = ಜಡಭರತನು | ವಿಜಯಾದ್ಯಾಃ = ಅರ್ಜುನನೇ ಮುಂತಾದವರು | ಸಾಕ್ಷಿಣಃ = ದೃಷ್ಟಾಂತರು | ಸ್ಯುಃ = ಆಗಿರುತ್ತಾರೆ

**ತಾತ್ಪರ್ಯ :—** ತೀವ್ರಾದಿ ಪ್ರಾರಬ್ಧಕರ್ಮ ಸಂಸ್ಕಾರದಿಂದ ಆತ್ಮಾಭಿರತಿಯುಳ್ಳ ಜ್ಞಾನಿಗಳು ಹೇಗಾದರೂ ವರ್ತಿಸಲಿ ದೋಷವಿಲ್ಲ ಈ ವಿಷಯದಲ್ಲಿ ಶುಕ, ನಾರದ, ಜನಕ, ಜಡಭರತ, ಅರ್ಜುನನೇ ಮುಂತಾದವರು ಸಾಕ್ಷಿಯಾಗಿರುತ್ತಾರೆ.

**ವಿಶೇಷಾರ್ಥ;—** ತೀವ್ರ, ಮಧ್ಯ, ಮಂದ, ಸುಪ್ತಗಳೆಂಬ ಪ್ರಾರಬ್ಧಕರ್ಮ ಸಂಸ್ಕಾರ ವೈಚಿತ್ರದಿಂದ ಆತ್ಮರತಿಯುಳ್ಳ ಜ್ಞಾನಿಗಳ ವ್ಯವಹಾರವು ಒಂದೇ ರೀತಿಯಲ್ಲಿ ಇರುವುದಿಲ್ಲವೆಂತಲೂ ಅವರು ಅರಿತು ಅಳವಡಿಸಿಕೊಂಡಿರುವ ಜ್ಞಾನವು ಮಾತ್ರ ಒಂದೇ ವಿಧವಾಗಿರುತ್ತದೆ ಯೆಂತಲೂ, ಮತ್ತು ಅವರು ಹೊಂದುವ ಮುಕ್ತಿ ಸುಖವೂ ಒಂದೇ ಎಂತಲೂ ಆದರೂ ಅವರ ವರ್ತನೆಯು ಮಾತ್ರ ಬಹು ವಿಧವಾಗಿರುವುದೆಂತಲೂ, ತಿಳಿಯಬೇಕೆಂಬುದಕ್ಕೆ ಗ್ರಂಥಕರ್ತರು ಹಿಂದಿನ ಜ್ಞಾನಿಗಳ ಉದಾಹರಣೆಯನ್ನು ಕೊಟ್ಟಿರುತ್ತಾರೆ ಶುಕಮಹರ್ಷಿಯು ಸರ್ವಸಂಗ ಪರಿತ್ಯಾಗಿಯಾಗಿ ವ್ಯವಹರಿಸಿದನು, ಜನಕ ಮಹಾರಾಜನು ಸರ್ವಸಂಗ ಸಹಿತನಾಗಿ ರಾಜ್ಯವಂ ಪರಿಪಾಲಿಸುತ್ತ ವ್ಯವಹರಿಸಿದನು. ನಾರದನು ಪರಮಾತ್ಮ ನಾಮಸಂಕೀರ್ತನೆಯನ್ನು ಮಾಡುತ್ತ ತ್ರಿಲೋಕ ಸಂಚಾರಿಯಾಗಿ ವ್ಯವಹರಿಸಿದನು. ಜಡಭರತನು ಹುಚ್ಚನಂತೆ ವ್ಯವಹರಿಸಿದನು. ಅರ್ಜುನನು ದುರ್ಯೋಧನಾದಿ ಶತೃ ವರ್ಗವನ್ನು ಸಂಹರಿಸಿ ವಿಜಯಶೀಲನಾಗಿ ವ್ಯವಹರಿಸಿದನು. ಇವರಲ್ಲಿ ಜ್ಞಾನವು ಒಂದೇ ಆಗಿದ್ದರೂ ವ್ಯವಹಾರ ಧರ್ಮಗಳು ಬೇರೆ ಬೇರೆ ಯಾಗಿರುತ್ತವೆ. ವ್ಯವಹಾರ ಧರ್ಮಗಳು ಬೇರೆ ಬೇರೆ ಯಾಗುವುದಕ್ಕೆ ಅವರು ಅರಿತುಕೊಂಡಿರುವ ಜ್ಞಾನವುಕಾರಣವಲ್ಲ. ಅವರವರ ಪ್ರಾರಬ್ಧ ಕರ್ಮ ಸಂಸ್ಕಾರವೇ ಕಾರಣವಾಗಿರುತ್ತದೆ. ಈ ವಿಷಯದಲ್ಲಿ

ಶ್ರೀಮನ್ನಿಜಗುಣಯೋಗಿಗಳು ತಮ್ಮ ವಿವೇಕ ಚಿಂತಾಮಣಿಯಲ್ಲಿ " **ಕೃಷ್ಣಭೋಗೀ ಶುಕಸ್ತ್ಯಾಗೀನೃಪೌ ಜನಕರಾಘವೌ। ವಸಿಷ್ಠಃ ಕರ್ಮ ಕರ್ತಾಚ ಪಂಚೈತೇಜ್ಞಾನ ಸಮ್ಮತಾಃ** " "ಸನಕ, ಜನಕ, ಭಾರತ, ಯಾಜ್ಞವಲ್ಕ, ಶುಕ, ಗೌತಮ, ಪ್ರಹ್ಲಾದ, ವಿಶ್ವಾಮಿತ್ರ, ವಶಿಷ್ಠ, ದೂರ್ವಾಸ, ನಾರದ, ಶೌಭರಿ, ಭೃಗು, ದಧೀಚಿ, ಶ್ವೇತಕೇತು, ದತ್ತಾತ್ರೇಯ, ರಾಮ, ಕೃಷ್ಣ, ವಾಯುಪುತ್ರ, ಭರದ್ವಾಜ, ಶಕ್ರ, ರಾವಣ, ಬಾಣ, ವೃಷಭ, ಭರತಾದಿಗಳವರ್ತನಾ ಭೇದಂಗಳೇ ನಿದರ್ಶನ ಮಾಗಿರ್ಕುಂ" ಎಂದು ಹೇಳಿದ್ದಾರೆ. ಆದ್ದರಿಂದ ಆತ್ಮವೇತ್ತರ ವರ್ತನೆಗಳು ಒಂದೇ ವಿಧವಾಗಿರುವುದಿಲ್ಲ. ಎಂಬ ಭಾವವು.

## ವಾರ್ಧಿಕಷಟ್ಪದಿ.

ಪಾರಬ್ಧಕರ್ಮ ಸಂಸ್ಕಾರದಿಂ ಜ್ಞಾನಿಗಳು ।
ಧಾರಿಣಿಯು ಲಾತ್ಮಾಭಿರತಿಯಿಂದಲಾವನ್ಯವ ।
ಹಾರವಂ ಗೈದುರುಂ ದೋಷ ಮಿಲ್ಲೆಂಬುದಕ್ಕುಪಮಾನ ವೇನೆಂದರೆ ॥
ನಾರದನು ಶುಕಜನಕ ಜಡಭರತ ರಾವಣನು ।
ಶ್ರೀರಾಮ ಶ್ರೀಕೃಷ್ಣ ಪ್ರಹ್ಲಾದ ವಾಶಿಷ್ಠ ।
ಮಾರುತಿಯು ಮುಂತಾದ ಜ್ಞಾನಿಗಳ ವರ್ತನಾ ಭೇದಗಳು ಸಾಕ್ಷಿಯಕ್ಕು
॥೯೯॥

**ಅವತಾರಿಕೆ:—** ಜ್ಞಾನಿಗಳು ಪ್ರಾರಬ್ಧಕರ್ಮ ಸಂಸ್ಕಾರದಿಂದ ಹಲವು ಬಗೆಯಾಗಿ ವರ್ತಿಸುತ್ತಾರೆಂದು ಹೇಳಿದಿರಿ ಆದರೆ ಜ್ಞಾನಿಗೆ ಪ್ರಾರಬ್ಧಕರ್ಮವನ್ನು ಹಚ್ಚಿ ಹೇಳುವುದು ಯೋಗ್ಯವಲ್ಲ. ಏಕೆಂದರೆ " **ಜ್ಞಾನಾಗ್ನಿ ಸರ್ವ ಕರ್ಮಾಣಿ ಭಸ್ಮ ಸಾತ್ಕುರುತೆ** " ಜ್ಞಾನಾಗ್ನಿಯಿಂದ ಸಂಚಿತ ಆಗಾಮಿ ಪ್ರಾರಬ್ಧಗಳೆಂಬ ಸರ್ವ ಕರ್ಮಗಳೂ ಭಸ್ಮೀ ಭೂತವಾಗುವವೆಂದು ಗೀತಾಶಾಸ್ತ್ರದಲ್ಲಿ ಹೇಳಿದೆ. ಅಲ್ಲಿ " **ಸರ್ವ ಕರ್ಮಾಣಿ** " ಎನ್ನುವುದರಲ್ಲಿ ಸಂಚಿತ ಆಗಾಮಿ ಎಂಬ ಎರಡೇ ಕರ್ಮಗಳೆಂಬ ಅರ್ಥವಲ್ಲ. ಅದು ಬಹುವಚನ ಸೂಚಕ ವಾಕ್ಯವಾಗಿದೆ. ಕರ್ಮ = ಏಕವಚನ । ಕರ್ಮಣಿ = ದ್ವಿವಚನ । ಕರ್ಮಾಣಿ = ಬಹುವಚನ । ಆದ್ದರಿಂದ ಸಂಚಿತಾದಿ ತ್ರಿವಿಧ ಕರ್ಮಗಳು ಭಸ್ಮವಾಗುವವೆಂದು ಸ್ಪಷ್ಟವಾಗಿ ಗೀತಾಶಾಸ್ತ್ರವು ಹೇಳುತ್ತಿರಲು ನೀವು ಜ್ಞಾನಿಗಳಿಗೆ ಪ್ರಾರಬ್ಧಕರ್ಮ ವಿರುತ್ತದೆ ಎಂದು ಹೇಳುವುದು ಯೋಗ್ಯವೇ ? ಎಂಬ ಪ್ರಶ್ನೆಗೆ ಯೋಗ್ಯವೇ ಎಂಬುದನ್ನು ಸಯುಕ್ತಿ ಸಪ್ರಮಾಣ ಪೂರ್ವಕ ಮುಂದಿನ ಶ್ಲೋಕದಲ್ಲಿ ಉತ್ತರಿಸುತ್ತಾರೆ

## * ಮದಕ್ರಾಂತಾ ವೃತ್ತ.

**ದಗ್ಧಂ ಪ್ರಜ್ಞಾಹುತಭುಜಿ ಸತಾಂ ಸಂಚಿತಾಗಾಮಿಯುಗ್ಮಂ ।**
**ಭಾವ್ಯೈಭೂತ್ಯೈ ನಖಲುಭವತಿ ಭ್ರಷ್ಟಬೀಜಾವಳೀವ ॥**
**ಭೋಕ್ತವ್ಯಂ ತದ್ವಿಧಿ ಹರಿಹರೈಃ ಕಾಯಭೋಗಾಯಮಾನಂ ।**
**ಪ್ರಾರಬ್ಧಂತ ತ್ಕ್ರಿಮಿಕುಲಚಿತಃ ಕಿನ್ನ ಗೋವಿಡ್ ಗಣೇಶಃ ॥೧೦೦॥**

**ಪದಚ್ಛೇದಃ**—ದಗ್ಧಂ, ಪ್ರಜ್ಞಾಹುತಭುಜಿ, ಸಂಚಿತಾಗಾಮಿಯುಗ್ಮಂ, ಭಾತ್ಯೈಭೂತ್ಯೈ, ನಖಲುಭವತಿ, ಭ್ರಷ್ಟಬೀಜಾವಳಿ, ಇವ, ಭೋಕ್ತವ್ಯಂ, ತತ್, ವಿಧಿ, ಹರಿಹರೈಃ, ಕಾಯಾಭೋಗಾಯಮಾನಂ, ಪ್ರಾರಬ್ಧಂ, ಯತ್, ಕ್ರಿಮಿಕುಲ, ಚಿತಃ, ಕಿಂ, ಗೋವಿಡ್, ಗಣೇಶಃ,

**ಟಿಕೇ;**—ಸತಾಂ = ಜ್ಞಾನಿಗಳಿಗೆ । ಪ್ರಜ್ಞಾಹುತಭುಜಿ = ಜ್ಞಾನಾಗ್ನಿಯಲ್ಲಿ । ದಗ್ಧಂ = ಭಸ್ಮವಾದ । ಸಂಚಿತಾಗಾಮಿಯುಗ್ಮಂ = ಸಂಚಿತಾಗಾಮಿಗಳೆಂಬೆರಡು । ಭಾವ್ಯೈ ಭೂತ್ಯೈ = ಭವಿಷ್ಯತ್ಕಾಲದ ಭೋಗಸಾಧನೆಗೆ । ಭ್ರಷ್ಟಬೀಜಾವಳೀವ = ಹುರಿದಬೀಜಗಳ ಸಮೂಹದಂತೆ । ನಖಲುಭವತಿ = ಹೇತುವಾಗುವುದಿಲ್ಲ । ಭೋಕ್ತವ್ಯಂ = ಭೋಗಿಸಲುಯೋಗ್ಯವಾದ । ತತ್ = ಆ । ವಿಧಿ = ಪ್ರಾರಬ್ಧ ಕರ್ಮದ ನಿಯಮವು । ಹರಿಹರೈಃ = ವಿಷ್ಣು ಈಶ್ವರಾದಿದೇವತೆ ಗಳಿಂದಲಾದರೂ । ಕಾಯ ಭೋಗಾಯಮಾನಂ = ಶರೀರ ಭೋಗವೆಂಬುವ । ತತ್ = ಆ । ಪ್ರಾರಬ್ಧ = ವರ್ತಮಾನ ದೇಹಾರಂಭಕವಾದ ಕರ್ಮವು । ಗೋವಿಡ್ ಗಣೇಶಃ = ಗೋಮಯ ಗಣಪತಿಯು । ಕ್ರಿಮಿಕುಲಚಿತಃ = ಗೆದ್ದಲೆ ಹುಳಗಳಿಂದ ಕೂಡಿದವನು । ನಕಿಂ = ಅಲ್ಲವೇನು ? ।

**ತಾತ್ಪರ್ಯ ;**— ಜ್ಞಾನಿಗಳಿಗೆ ಜ್ಞಾನಾಗ್ನಿಯಿಂದ ಸಂಚಿತಾಗಾಮಿ ಕರ್ಮಗಳೆರಡು ಭಸ್ಮವಾಗಿ ವರ್ತಮಾನ ಶರೀರ ಭೋಗಸಾಧನಕ್ಕಾಗಿ ಪ್ರಾರಬ್ಧಕರ್ಮವು ಹುರಿದ ಬೀಜಗಳಂತಿರುತ್ತದೆ. ಪ್ರಾರಬ್ಧಕರ್ಮವು ಹರಿಹರಾದಿದೇವತೆಗಳಿಂದಲೂ [illegible] ಭೋಗಿಸದೇ ಮುಗಿಯುವುದಿಲ್ಲ. ಸೆಗಣಿಯಿಂದ ಮಾಡಿದ ಗಣೇಶನು ಗೆದ್ದಲೆಹುಳು [illegible] ನಾಶವಾಗುವುದಿಲ್ಲವೇನು ?

**ವಿಶೇಷಾರ್ಥ :**—" **ಜ್ಞಾನಾಗ್ನೀ ಸರ್ವ ಕರ್ಮಾಣಿ** ಭಸ್ಮಸಾತ್ಕುರುತೆ " ಎಂಬ ಗೀತಾಶಾಸ್ತ್ರದಲ್ಲಿ ಇರುವ " **ಕರ್ಮಾಣಿ** " ಎಂದು ಬಹುವಚನ ಸೂಚಕ ಅರ್ಥವಿದ್ದರೂ ಸಂಚಿತ ಆಗಾಮಿ ಕರ್ಮಗಳು ಅತ್ಯಂತ ನಾಶವೆಂತಲೂ,

*೯ನೇ ಶ್ಲೋಕದ ಛಂದಸ್ಸನ್ನು ನೋಡಿರಿ.

